# ಹಂಡೆ ಅರಸುಮನೆತನ
## ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು
ಸಂತೋಷಕುಮಾರ ಜಿ.

ಮಾರ್ಗದರ್ಶಕರು
ಡಾ. ಕೆ. ರವೀಂದ್ರನಾಥ
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೨೦

# ಹಂಡೆ ಅರಸುಮನೆತನ

## ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು

**ಸಂತೋಷಕುಮಾರ ಜಿ.**

ಮಾರ್ಗದರ್ಶಕರು

**ಡಾ. ಕೆ. ರವೀಂದ್ರನಾಥ**

ಪ್ರಾಧ್ಯಾಪಕರು

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ



ಹಸ್ತಪ್ರತಿಶಾಸ್ತ್ರ ವಿಭಾಗ

ಭಾಷಾ ನಿಕಾಯ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ ೫೮೩ ೨೭೬

೨೦೨೦



ಡಾ. ಕೆ. ರವೀಂದ್ರನಾಥ
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ದೃಢೀಕರಣ ಪತ್ರ

**ಹಂಡೆ ಅರಸುಮನೆತನ: ಸಾಂಸ್ಕೃತಿಕ ಅಧ್ಯಯನ** ಎಂಬ ಈ ಶೀರ್ಷಿಕೆಯ ಮಹಾಪ್ರಬಂಧವನ್ನು **ಸಂತೋಷಕುಮಾರ ಜಿ.** ಅವರು ನನ್ನ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**(ಡಾ. ಕೆ. ರವೀಂದ್ರನಾಥ)**

**ಸ್ಥಳ:** ವಿದ್ಯಾರಣ್ಯ
**ದಿನಾಂಕ:** 1/7/20

# ಪ್ರಮಾಣ ಪತ್ರ

**ಹಂಡೆ ಅರಸುಮನೆತನ: ಸಾಂಸ್ಕೃತಿಕ ಅಧ್ಯಯನ** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾದ **ಡಾ. ಕೆ. ರವೀಂದ್ರನಾಥ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸಂಶೋಧಕರು

**ಸಂತೋಷಕುಮಾರ ಜೆ.**
ಸಂಶೋಧನ ವಿದ್ಯಾರ್ಥಿ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ: ವಿದ್ಯಾರಣ್ಯ
ದಿನಾಂಕ: 1.7.2020

# ಪರಿವಿಡಿ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ, ವಿಧಾನ ಮತ್ತು ಸ್ವರೂಪ

### ಪ್ರಸ್ತಾವನೆ

ಕನ್ನಡ ನಾಡಿನ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಸ್ಥಳೀಯ ಸಾಮಂತ ಅರಸರ ಮತ್ತು ಪಾಳೆಯಗಾರರ ಪಾತ್ರವನ್ನು ಮರೆಯುವಂತಿಲ್ಲ. ಇದರಿಂದ ಸಾಮ್ರಾಜ್ಯಶಾಹಿ ಬೆನ್ನೆಲುಬಾಗಿ ಸಾಮಂತ ಅರಸುಮನೆತನಗಳು ಮತ್ತು ಪಾಳೆಯಗಾರರು ನಿಂತಿರುತ್ತಾರೆ. ಹೀಗಾಗಿ ಒಂದು ನಾಡಿನ ಅಥವಾ ಒಂದು ಸಾಮ್ರಾಜ್ಯದ ಚರಿತ್ರೆಯೆಂದರೆ ಆ ಸಾಮ್ರಾಜ್ಯದ ಅಡಿಯಲ್ಲಿ ದುಡಿದ ಸಾಮಂತ ಅರಸಮನೆತನಗಳ ಚರಿತ್ರೆಯೇ ಆಗಿರುತ್ತದೆ. ಕರ್ನಾಟಕದಲ್ಲಿ ಅನೇಕ ಸಾಮಂತ ಅರಸುಮನೆತನಗಳನ್ನು ಕಾಣಬಹುದು. ಅದರಲ್ಲಿ ಹಂಡೆ ಅರಸುಮನೆತನವು ಒಂದಾಗಿದೆ. ಹಂಡೆ ಅರಸುಮನೆತನ ವಿಜಯನಗರ ಸಾಮ್ರಾಜ್ಯದ ಸಂದರ್ಭದಲ್ಲಿ ಹೆಸರಿಸಬೇಕಾದ ಮನೆತನವಾಗಿದೆ. ಆ ಮನೆತನದ ಇತಿಹಾಸವನ್ನು ನಿರೂಪಿಸುವ ಶಾಸನಗಳು, ಕಡತ, ನಿರೂಪಗಳು, ಬಿನ್ನವತ್ತಳೆ, ಕೈಫಿಯತ್ತುಗಳು, ಬಖೈರುಗಳು ಮತ್ತು ಕಾವ್ಯಪುರಾಣಗಳು ಈ ಅರಸರ ಕುರಿತು ರಚನೆಯಾದ ತೆಲಗು ಸಾಹಿತ್ಯ ಮತ್ತು ಬ್ರಿಟಿಷರು ಬರೆದ ಗ್ರಂಥಗಳು ಪ್ರಮುಖ ಆಕರ ಸಾಮಗ್ರಿಗಳಾಗಿ ದೊರೆಯುತ್ತವೆ. ಈ ಎಲ್ಲ ಆಕರ ಸಾಮಗ್ರಿಗಳನ್ನು ಬಳಸಿಕೊಂಡು 'ಹಂಡೆ ಅರಸುಮನೆತನ: ಸಾಂಸ್ಕೃತಿಕ ಅಧ್ಯಯನ'ವನ್ನು ಕೈಗೊಳ್ಳಲಾಗಿದೆ.

ವಿಜಯಪುರ ಸೀಮೆಯ ಬಸವನ ಬಾಗೇವಾಡಿ ತಾಲೂಕಿನ 'ಮುತ್ತಗಿ' ಮೂಲದವನಾದ 'ಲಕ್ಕಿನಾಯಕ' ಈ ಮನೆತನದ ಮೂಲಪುರುಷ. ಈತನಿಗೆ ಹನುಮಪ್ಪನಾಯಕ ಮತ್ತು ಬಳಗನಾಯಕನೆಂಬ ಇಬ್ಬರು ಮಕ್ಕಳು ಇದ್ದರು. ೧೬ನೆಯ ಶತಮಾನದ ಆರಂಭದಲ್ಲಿ ತನ್ನ ಸುತ್ತಮುತ್ತಲಿನ ಪ್ರದೇಶದಲ್ಲಿ ಪ್ರಸಿದ್ಧನಾದ ಹಂಡೆ ಹನುಮಪ್ಪನಾಯಕ ಆದಿಲ್‌ಶಾಹಿ ಕೈಕೆಳಗೆ 'ಸರನಾಡಗೌಡ'ನಾಗಿದ್ದನು. ತನ್ನ ಅಭಿವೃದ್ಧಿ ಕಾರ್ಯಗಳಿಂದ ಆದಿಲ್‌ಶಾಹಿ ಮೆಚ್ಚುಗೆಗೆ ಪಾತ್ರನಾಗಿ

'ವಜೀರ' ಎಂಬ ಬಿರುದಿಗೆ ಭಾಜನನಾಗಿದ್ದನು. ನಂತರ ಬಳ್ಳಾರಿ ಮತ್ತು ಆಂಧ್ರಪ್ರದೇಶದಲ್ಲಿ ಆಳ್ವಿಕೆಯನ್ನು ಮಾಡಿದ್ದಾನೆ. ಈ ಭಾಗದಲ್ಲಿ ಮಠಮಾನ್ಯಗಳಿಗೆ ದಾನದತ್ತಿ ನೀಡುವುದರ ಮೂಲಕ ಹಂಡೆ ಅರಸುಮನೆತನದ ಸಾಂಸ್ಕೃತಿಕ ನಾಯಕನಾಗಿ ಪ್ರಸಿದ್ಧಿ ಪಡೆದಿದ್ದಾನೆ.

ಹಂಡೆ ಹನುಮಪ್ಪನಾಯಕನಿಗೆ ಅಂಕುಶರಾಯ, ದ್ಯಾಮಪ್ಪ/ದೇವಪ್ಪನಾಯಕ, ನಿಚ್ಚಮದುವಣಿಗ ಲಿಂಗರಾಮಪ್ಪನಾಯಕ, ಚಿಕ್ಕಮಲ್ಲಪ್ಪ ನಾಯಕ ಮತ್ತು ಹಿರೇ ಮಲ್ಲಪ್ಪನಾಯಕ ಎಂಬ ಹೆಸರಿನ ಐದು ಜನ ಮಕ್ಕಳಿದ್ದರು. ಈ ಎಲ್ಲ ನಾಯಕರ ಸಾಂಸ್ಕೃತಿಕ ಕೊಡುಗೆಗಳನ್ನು ಅನಾವರಣಗೊಳಿಸುವುದು ಪ್ರಸ್ತುತ 'ಹಂಡೆ ಅರಸು ಮನೆತನ: ಸಾಂಸ್ಕೃತಿಕ ಅಧ್ಯಯನ'ವಾಗಿದೆ.

## ಅಧ್ಯಯನದ ಉದ್ದೇಶ

ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ಅನೇಕ ಪಾಳೆಯಗಾರರು ಆಳ್ವಿಕೆ ನಡೆಸಿದ್ದಾರೆ. ಅವರಲ್ಲಿ ಪ್ರಮುಖವಾಗಿ ಹರಪನಹಳ್ಳಿ, ಸಂತೆಬೆನ್ನೂರು, ಚಿತ್ರದುರ್ಗ, ಬಸವಪಟ್ಟಣ, ಜರಿಮಲೆ ಪಾಳೆಯಗಾರರು ಪ್ರಮುಖರು. ಅವರ ಸಾಲಿನಲ್ಲಿ ಬಳ್ಳಾರಿ ಪ್ರಾಂತ್ಯದಲ್ಲಿ ಹೆಸರಿಸಬೇಕಾದ ಮೊದಲ ಪಾಳೆಗಾರಿಕೆಯ ಅರಸುಮನೆತನ ಎಂದರೆ 'ಹಂಡೆ ಅರಸುಮನೆತನ.' ಕರ್ನಾಟಕ ಚರಿತ್ರೆಯಲ್ಲಿ ಗಣ್ಯಮಾನ್ಯರಾದ ಕದಂಬ, ಚಾಲುಕ್ಯ, ಹೊಯ್ಸಳ, ವಿಜಯನಗರ ಮುಂತಾದ ಪ್ರಮುಖ ಅರಸುಮನೆತನಗಳ ಚರಿತ್ರೆಗಳು ದಾಖಲಾಗಿವೆ. ಉಪೇಕ್ಷಿತ ಅರಸುಮನೆತನಗಳ ಚರಿತ್ರೆಯನ್ನು ನಿರೂಪಿಸುವ ಉದ್ದೇಶದಿಂದ 'ಹಂಡೆ ಅರಸುಮನೆತನ: ಸಾಂಸ್ಕೃತಿಕ ಅಧ್ಯಯನ' ಕೈಗೊಳ್ಳಲಾಗಿದೆ.

ಹಂಡೆ ಅರಸರು ವಿಜಯನಗರೋತ್ತರ ಕಾಲಘಟ್ಟದಲ್ಲಿ ಇದ್ದವರು. ಬಳ್ಳಾರಿ, ಬಂಕಾಪುರ, ಅನಂತಪುರ, ನಂದ್ಯಾಲ, ಧರ್ಮಾವರ, ನಿಡುಮಾಮಿಡಿ ಮುಂತಾದ ಪ್ರದೇಶಗಳಲ್ಲಿ ಆಳ್ವಿಕೆ ನಡೆಸಿದವರು. ಇವರ ಆಳ್ವಿಕೆ ಕಾಲದಲ್ಲಿ ಸಾಮಾಜಿಕವಾಗಿ ಅನೇಕ ದಾನದತ್ತಿಗಳನ್ನು ನೀಡಿದ್ದಾರೆ ಹಾಗೂ ಕೆರೆ-ಬಾವಿಗಳನ್ನು ನಿರ್ಮಿಸುವುದರ ಜೊತೆಗೆ ದೇವಾಲಯಗಳ ನಿರ್ಮಾಣ ಮಾಡುವುದರ ಮೂಲಕ ಕರ್ನಾಟಕದ ವಾಸ್ತುಶಿಲ್ಪ ತಮ್ಮದೇ ಆದ ಕಾಣಿಕೆಯನ್ನು ನೀಡಿದ್ದಾರೆ. ಈ ಎಲ್ಲ ಸಾಮಾಜಿಕ-ಧಾರ್ಮಿಕ ಕೊಡುಗೆಗಳನ್ನು ಸಾಧಾರಪೂರ್ವಕವಾಗಿ ನಿರೂಪಿಸುವ ಉದ್ದೇಶದಿಂದ ಈ ಅಧ್ಯಯನ ಕೈಗೊಳ್ಳಲಾಗಿದೆ.

## ಅಧ್ಯಯನದ ವ್ಯಾಪ್ತಿ

ಅಧ್ಯಯನದ ವ್ಯಾಪ್ತಿಯು ಕ್ರಿ.ಶ.ಸು ೧೫೮೭ರಿಂದ ಕ್ರಿ.ಶ.ಸು ೧೮೧೧ ರವರೆಗೆ ಸುಮಾರು ೩ ಶತಮಾನಕ್ಕೂ ಮಿಕ್ಕಿ ಆಳ್ವಿಕೆ ನಡೆಸಿದ ಹಂಡೆ ಅರಸುಮನೆತನದ ಚರಿತ್ರೆಯನ್ನು ಈ ಅಧ್ಯಯನ ಒಳಗೊಂಡಿದೆ. ಇವರ ಆಳ್ವಿಕೆ ಕೇವಲ ಕರ್ನಾಟಕಕ್ಕೆ ಸೀಮಿತವಾಗಿಲ್ಲ. ಆಂಧ್ರ,

ಮಹಾರಾಷ್ಟ್ರ ರಾಜ್ಯಗಳ ಗಡಿಭಾಗಗಳನ್ನು ವ್ಯಾಪಿಸಿದೆ. ಅನೇಕ ಆಕರಗಳ ಮೂಲಕ ಹಂಡೆ ಅರಸರು ಮೂಲತಃ ವಿಜಯಪುರ ಸೀಮೆಯ 'ಮುತ್ತಗಿ' ಮತ್ತು 'ವಡವಡಿಗಿ' ಗ್ರಾಮದವರು. ಭೌಗೋಳಿಕವಾಗಿ ವಿಜಯನಗರೋತ್ತರ ಕಾಲದಲ್ಲಿ ಬಳ್ಳಾರಿ, ಕುರುಗೋಡು, ತೆಕ್ಕಲಕೋಟೆ, ಬಂಕಾಪುರ ಹಾಗೂ ಆಂಧ್ರದ ಗಡಿಭಾಗ ಪ್ರದೇಶಗಳನ್ನು ಆಳಿರುವ ಹಂಡೆ ಅರಸರು ಅನಂತಪುರ, ಧರ್ಮಾವರ, ನಂದ್ಯಾಲ, ಶಿರಗುಪ್ಪಿ ಮತ್ತು ನಿಡುಮಾಮಿಡಿ ಪ್ರದೇಶಗಳಲ್ಲಿ ಆಳ್ವಿಕೆ ನಡೆಸಿದ ಬಗ್ಗೆ ದಾಖಲೆಗಳಿವೆ. ಹೀಗಾಗಿ ಕರ್ನಾಟಕ ಮತ್ತು ಕರ್ನಾಟಕೇತರ ಪ್ರದೇಶಗಳಲ್ಲಿಯ ಹಂಡೆ ಅರಸುಮನೆತನದ ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸುವ ನಿಟ್ಟಿನಲ್ಲಿ ಇಲ್ಲಿಯವರೆಗೆ ಸಮಗ್ರವಾಗಿ ಅಧ್ಯಯನ ಆಗದೇ ಇರುವುದನ್ನು ಗಮನಿಸಿ ಪ್ರಸ್ತುತ ಅಧ್ಯಯನಕ್ಕೆ ಈ ಪ್ರದೇಶಗಳ ಅಧ್ಯಯನದ ವ್ಯಾಪ್ತಿಯನ್ನು ಹಿಗ್ಗಿಸಿಕೊಳ್ಳಲಾಗಿದೆ.

## ಅಧ್ಯಯನದ ಮಹತ್ವ

ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯ ಕೊನೆಯ ಕಾಲಘಟ್ಟದಲ್ಲಿ ಅಂದರೆ ಕೃಷ್ಣದೇವರಾಯ, ಅಚ್ಯುತದೇವರಾಯ, ಅಳಿಯರಾಮರಾಯನ ಕಾಲದಿಂದ ಆರಂಭವಾಗಿ ಆದಿಲ್‌ಶಾಹಿ, ಟಿಪ್ಪುಸುಲ್ತಾನ್, ಕರ್ನಲ್ ಮನ್ರೋನಂತಹ ಆಂಗ್ಲ ಅಧಿಕಾರಿಗಳ ಕಾಲದವರೆಗೆ ಈ ಹಂಡೆಅರಸರ ಆಳ್ವಿಕೆ ವಿಸ್ತಾರಗೊಂಡಿರುವುದನ್ನು ಗಮನಿಸಲಾಗಿದೆ.

ಹಂಡೆಅರಸರ ಅಧ್ಯಯನವೆಂದರೆ ಮಧ್ಯಕಾಲೀನ ಕರ್ನಾಟಕದ ಸಾಂಸ್ಕೃತಿಕ ಅಧ್ಯಯನದ ಮಹತ್ವದ ಅಧ್ಯಯವೆಂದು ಹೇಳಿದರೆ ತಪ್ಪಾಗಲಾರದು. ಹೀಗಾಗಿ ಸ್ಥಳೀಯ ಚರಿತ್ರೆಗೆ ಇಂಬುಕೊಡುವ ಇಂತಹ ಅಧ್ಯಯನಗಳು ಮರೆತುಹೋಗಬಹುದಾದ ನಾಡಿನ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಕಂಡುಕೊಳ್ಳುವ ಉದ್ದೇಶದಿಂದ ಈ ಅಧ್ಯಯನಕ್ಕೆ ಸಾಂಸ್ಕೃತಿಕ ಮಹತ್ವವಿರುವುದನ್ನು ಇಲ್ಲಿ ಗುರುತಿಸಲಾಗಿದೆ.

## ಅಧ್ಯಯನದ ವಿಧಾನ

ಯಾವುದೇ ಅಧ್ಯಯನಕ್ಕೆ ಎರಡು ನೆಲೆಗಳು ಇರುತ್ತವೆ. ಒಂದು ಗ್ರಂಥಗಳ ಮೂಲಕ ಆಕರಗಳನ್ನು ವಿಶ್ಲೇಷಿಸುವುದು. ಇನ್ನೊಂದು ಕ್ಷೇತ್ರಕಾರ್ಯದ ಮೂಲಕ ಆಕರಗಳನ್ನು ಸರ್ವೇಕ್ಷಿಸುವುದು. ಈ ಎರಡು ಮಾದರಿಯ ವಿಧಾನವನ್ನು ಈ ಅಧ್ಯಯನ ಒಳಗೊಂಡಿದೆ. ಅಂದರೆ ಹಂಡೆ ಅರಸು ಮನೆತನದ ಸಾಂಸ್ಕೃತಿಕ ಮಹತ್ವವನ್ನು ಶಾಸನ, ಕೈಫಿಯತ್ತು, ನಿರೂಪ, ಕಾವ್ಯಕೃತಿಗಳಂತಹ ಲಿಖಿತ ಆಕರಸಾಮಗ್ರಿಗಳ ನೆರವಿನಿಂದ ಮತ್ತು ಗುಡಿ-ಗುಂಡಾರ, ದೇವಾಲಯ, ಕೆರೆ-ಬಾವಿಗಳಂತಹ ಹಂಡೆ ಅರಸರ ಅವಶೇಷಗಳನ್ನು ಪುರಾತತ್ವದ ನೆಲೆಯಲ್ಲಿ ಮತ್ತು ಹಂಡೆ ಅರಸರ ಆಚರಣೆ, ನಂಬಿಕೆ, ಸಂಪ್ರದಾಯ, ಧಾರ್ಮಿಕ ವಿಧಿ-ವಿಧಾನಗಳನ್ನು ಜನಪದ ಮೂಲದಿಂದ ಶೋಧಿಸುವ ವಿಧಾನವನ್ನು ಈ ಅಧ್ಯಯನ ಒಳಗೊಂಡಿದೆ.

## ಅಧ್ಯಯನದ ಸ್ವರೂಪ

'ಹಂಡೆ ಅರಸುಮನೆತನ: ಸಾಂಸ್ಕೃತಿಕ ಅಧ್ಯಯನ' ಎಂಬ ಅಧ್ಯಯನವನ್ನು ಅಧ್ಯಯನದ ಅನುಕೂಲತೆಗಾಗಿ ಒಟ್ಟು ಆರು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಂಡು ಪ್ರಸ್ತುತ ಅಧ್ಯಯನವನ್ನು ರೂಪಿಸಿಕೊಳ್ಳಲಾಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ, ವಿಧಾನ ಮತ್ತು ಸ್ವರೂಪವನ್ನು ಕುರಿತು ವಿವೇಚಿಸಲಾಗಿದೆ.

ಅಧ್ಯಾಯ ಎರಡರಲ್ಲಿ ಇದುವರೆಗೆ ನಡೆದ ಹಂಡೆ ಅರಸರ ಕುರಿತಾದ ಅಧ್ಯಯನಗಳ ಸಮೀಕ್ಷೆಯನ್ನು ಕುರಿತು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಹಂಡೆ ಅರಸುಮನೆತನಕ್ಕೆ ಲಭ್ಯವಿರುವ ಆಕರ ಸಾಮಗ್ರಿಗಳನ್ನು ವಿಶ್ಲೇಷಿಸಲಾಗಿದೆ. ಅವುಗಳನ್ನು ಸಾಹಿತ್ಯ ಮತ್ತು ಸಾಹಿತ್ಯೇತರ ಆಕರಗಳು ಎಂದು ವರ್ಗೀಕರಿಸಿ ಕೊಂಡು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಸಾಹಿತ್ಯ ಆಕರಗಳಲ್ಲಿ ೧. ಕನ್ನಡ ಸಾಹಿತ್ಯದ ಆಕರಗಳು ೨. ತೆಲಗು ಸಾಹಿತ್ಯದ ಆಕರಗಳು ೩. ಆಂಗ್ಲ ಸಾಹಿತ್ಯದ ಆಕರಗಳೆಂದು ವಿಂಗಡಿಸಿ ಕೊಂಡು ಅಧ್ಯಯನ ಮಾಡಲಾಗಿದೆ. ಸಾಹಿತ್ಯೇತರ ಆಕರಗಳಲ್ಲಿ ಶಾಸನಗಳು, ಸ್ಮಾರಕಗಳು, ಕೋಟೆ, ಕೆರೆ, ಕಾಲುವೆ, ದೇವಾಲಯ, ವಾಸ್ತುಶಿಲ್ಪ, ಸ್ಥಳೀಯ ಐತಿಹ್ಯ ಮತ್ತು ಜನಪದ ಮೂಲದ ಆಕರಗಳನ್ನು ಸಹ ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಹಂಡೆ ಅರಸುಮನೆತನಕ್ಕೆ ಸಂಬಂಧಿಸಿದಂತೆ ಅವರ ಚಾರಿತ್ರಿಕ ಮೂಲವನ್ನು ಕುರಿತು ಶಾಸನ, ಪುರಾತತ್ವ, ವಾಸ್ತುಶಿಲ್ಪದ ಆಧಾರದ ಮೂಲಕ ಮತ್ತು ಸಾಹಿತ್ಯ ಕೃತಿಗಳ ಹಿನ್ನೆಲೆಯಲ್ಲಿ ಈ ಅರಸರ ಇತಿಹಾಸವನ್ನು ಸ್ಥೂಲವಾಗಿ ಕಟ್ಟಿಕೊಡುವ ಪ್ರಯತ್ನವನ್ನು ಮಾಡಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಅಧ್ಯಾಯ ಐದರಲ್ಲಿ 'ಹಂಡೆ ಅರಸುಮನೆತನದ ಸಾಂಸ್ಕೃತಿಕ ಅಧ್ಯಯನವನ್ನು' ಈ ಅಧ್ಯಾಯದಲ್ಲಿ ಕೈಗೊಳ್ಳಲಾಗಿದೆ. ಈ ಅರಸರ ಆಡಳಿತದಲ್ಲಿನ ಸಾಂಸ್ಕೃತಿಕ ಅಧ್ಯಯನವನ್ನು ಪ್ರಮುಖವಾಗಿ ಆಡಳಿತ ವ್ಯವಸ್ಥೆ, ಧಾರ್ಮಿಕ ವ್ಯವಸ್ಥೆ, ಸಾಮಾಜಿಕ ವ್ಯವಸ್ಥೆ, ಆರ್ಥಿಕ ವ್ಯವಸ್ಥೆ, ಸಾಹಿತ್ಯಿಕ ಮತ್ತು ಇತರೆ ಜಾನಪದೀಯ ವ್ಯವಸ್ಥೆಗಳೆಂದು ವಿಂಗಡಿಸಿಕೊಂಡು ಅಧ್ಯಯನ ನಡೆಸಲಾಗಿದೆ.

ಅಧ್ಯಾಯ ಆರರಲ್ಲಿ ಸಮಾರೋಪ ಮತ್ತು ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ನೀಡಲಾಗಿದೆ. ಅನುಬಂಧದಲ್ಲಿ ಶಾಸನಗಳು, ವಂಶಾವಳಿ, ಛಾಯಾಚಿತ್ರಗಳು, ವಕ್ತೃಗಳ ವಿವರ ಮತ್ತು ಪರಾಮರ್ಶನ ಗ್ರಂಥಗಳ ವಿವರನ್ನು ನೀಡಲಾಗಿದೆ.

## ಅಧ್ಯಾಯ : ಎರಡು

# ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಯಾವುದೇ ಸಂಶೋಧನೆಯನ್ನು ಕೈಗೊಳ್ಳುವ ಪೂರ್ವದಲ್ಲಿ ಆ ಅಧ್ಯಯನಕ್ಕೆ ಸಂಬಂಧಿಸಿದ ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ ಮಾಡುವುದು ಅವಶ್ಯಕ. ಏಕೆಂದರೆ ಸಂಶೋಧನೆಯ ವಿಷಯವನ್ನು ಆಯ್ಕೆ ಮಾಡಿಕೊಂಡಾಗ ಆ ಅಧ್ಯಯನದ ಉದ್ದೇಶಕ್ಕೆ ಸಂಬಂಧಿಸಿದಂತೆ ಈಗಾಗಲೇ ಚರ್ಚೆಗೆ ಒಳಪಟ್ಟ ವಿಷಯಗಳಿಗಿಂತಲೂ ಭಿನ್ನವಾದ ವಿಚಾರಗಳನ್ನು ಹೇಳಲು ಈ ಸಮೀಕ್ಷೆ ಸಹಕಾರಿಯಾಗುತ್ತದೆ. ಈ ಕಾರಣಕ್ಕಾಗಿ "ಹಂಡೆ ಅರಸುಮನೆತನ: ಸಾಂಸ್ಕೃತಿಕ ಅಧ್ಯಯನ" ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಕಾವ್ಯ-ಪುರಾಣಗಳು, ಶಾಸನ, ಕೈಫಿಯತ್ತುಗಳು ಇನ್ನೂ ಮುಂತಾದ ಆಕರ ಸಾಮಾಗ್ರಿಯನ್ನು ಸಮೀಕ್ಷೆಗೆ ಒಳಪಡಿಸಲಾಗಿದೆ.

ಡಾ. ಎಂ. ಎಂ. ಕಲಬುರ್ಗಿ ಮತ್ತು ಸಿ.ಪಿ.ಕೃಷ್ಣಕುಮಾರವರು ಸಂಪಾದಿಸಿದ 'ಷಟಸ್ಥಲ ಶಿವಾಯಣ'(೧೬೧೫ ರಿಂದ ೧೬೭೫) ಎಂಬ ಕೃತಿಯಲ್ಲಿ ಚಿಲಾಳ ಸಂಪ್ರದಾಯದ ಸ್ವಾಮಿಯೊಬ್ಬರು ದೇಶ ಸಂಚಾರ ಮಾಡುವ ಸಂದರ್ಭದಲ್ಲಿ ಅನಂತಪುರವನ್ನು ಆಳುತ್ತಿದ್ದ ಪ್ರಸನ್ನಪ್ಪನಾಯಕ ಮತ್ತು ಬಳ್ಳಾರಿಯನ್ನು ಆಳುತ್ತಿದ್ದ ಹನುಮಪ್ಪನಾಯಕನನ್ನು ಭೇಟಿ ಮಾಡಿ ಅವರ ಅರಮನೆಯಲ್ಲಿ ವಸತಿಮಾಡಿ ಲಿಂಗಪೂಜೆ ಸ್ನಾನ, ಊಟ ಮಾಡಿದ ವಿವರಗಳು ಈ ಗ್ರಂಥದಲ್ಲಿ ವಿವರವಾಗಿ ಪದ್ಯ ೮೬, ೮೭, ೮೮, ೮೯, ೯೦ರಲ್ಲಿ ನಿರೂಪಣೆಗೊಂಡಿರುವುದನ್ನು ಕಾಣಬಹುದು.

> ಆನಂದ ಷಟ್ಸ್ಥಲದ ಬ್ರಹ್ಮ ಚಿ
> ದಾನಂದ ಸದ್ಭಕ್ತ ಹೃದಯ ಸ
> ದಾನಂದ ಸುಜ್ಞಾನಬೋಧ ದಯಾಬ್ಧಿ ಚಂದ್ರಮನು।

ಸ್ವಾನುಭಾವಿಗಳರಸ ಸದ್ಗುಣ
ಮಾನ ಚೀಲಳಸ್ವಾಮಿ ಹರುಷದ
ಲಾನಂತಪುರವೆಂಬ ಘನ ಸಂಸ್ಥಾನಕ್ಕೈದುವರು॥ ॥೮೬॥

ಮಂಡಲತ್ರಯ ಸದ್ಗುರುವಿನಡಿ
ಗಂಡು ಕೀರ್ತಿಸಿ ಸೈಗೆಡೆದು ಕರ
ಪುಂಡರೀಕವ ಮುಗಿದು ನಂದು ಪ್ರಸನ್ನಭೂಪಾಲ।
ಕಂಡೆ ಪರುಷದ ಖಣಿಯ ಶಿವಶಿವ
ಖಂಡಚಂದ್ರ ಕಿರೀಟಮೂರ್ತಿಯ
ಕಂಡು ಬದುಕಿದೆ ಷಟ್ಸ್ಥಲದ ಪ್ರಭುವೆನುತ ಬಸವಣ್ಣ॥ ॥೮೭॥

ಸ್ನಾನ ಮಜ್ಜನ ಭೋಜನವನು ಸ
ಮಾನದಿಂದಲಿ ನಡೆಸಿ ಶರಣ ಚಿ
ದಾನಂದ ಚೀಲಾಳಸ್ವಾಮಿಗೆ ನೂತ್ನಭೂಷಣವ।
ನಾನ ದಿವ್ಯಾಂಬರವನೊಪ್ಪಿಸಿ
ಜ್ಞಾನಜಂಗಮ ತತಿಗೆ ಜವಳಿಯ
ತಾನೆ ಪಾದವ ಹಿಡಿದು ಕೊಡುವನು ಬಸವ ಕೇಳೆಂದ॥ ॥೮೮॥

ಅಲ್ಲಿಂದ ಬಳ್ಳಾರಿಗಿಳಿವರ
ಎಲ್ಲ ರಾಜ್ಯವ ಬಳಸಿ ಹರುಷದೊ
ಳಲ್ಲೆ ದೊರೆ ಹನುಮಂತಭೂಪತಿ ಸ್ವಾಮಿಯಡಿಗೆರಗಿ।
ಎಲ್ಲ ಜಂಗಮ ಲಿಂಗಪೂಜೆಯ
ಮೆಲ್ಲನುತ್ಸಹದಿಂದ ತೀರಿಸಿ
ಸಲ್ಲಲಿತ ಮೃಷ್ಟಾನ್ನ ಪಾನದಿ ತಣಿಸುವನು ಬಸವ॥ ॥೮೯॥

ದಿವ್ಯ ಪರಿಮಳ ದಿವ್ಯಪುಷ್ಪವ
ದಿವ್ಯಭೂಷಣ ದಿವ್ಯವಸ್ತ್ರದ
ದಿವ್ಯಷಟ್ಸ್ಥಲ ವಿರತ ಗುರುವಿಗೆ ಮಡಗಿ ಸೈಗೆಡೆದು।
ನವ್ಯತರ ಜವಳಿಗಳ ಕರ್ಪುರ
ಸೇವ್ಯವೀಳ್ಯವ ಶರಣಜನ ಶಿವ
ಹವ್ಯವೆನುತಲಿ ಕೊಡುವ ನಲಿವನು ಬಸವ ಕೇಳೆಂದ ॥೯೦॥

ಈ ಮೇಲಿನ ಪದ್ಯಗಳಿಂದ ಗುರು ಚಿಲಾಳೇಶನ ಚರಿತ್ರೆಯಿದ್ದು ಮತ್ತು ಹಂಡೆ ಪಾಳೆಗಾರರಾದ ಅನಂತಪುರದಲ್ಲಿದ್ದ ಪ್ರಸನ್ನಪ್ಪನಾಯಕ ಮತ್ತು ಬಳ್ಳಾರಿಯಲ್ಲಿ ರಾಜವಾಳುತ್ತಿದ್ದ ಹನುಮಪ್ಪ ನಾಯಕನನ್ನು ಭೇಟಿ ಮಾಡಿದ ವಿವರಗಳನ್ನು ಈ ಕೃತಿ ತಿಳಿಸುತ್ತದೆ.

ಹಂಡೆ ಹಿರೇ ಮಲಕಪ್ಪನಾಯಕನ ಆಸ್ಥಾನ ಮಂತ್ರಿಯಾಗಿದ್ದ ಚಾಯಾರಸ ಬರೆದ ರಸಿಕಮನೋರಂಜನ ವಿಲಾಸ ಕೃತಿಯು ಹಂಡೆ ಅರಸರ ಚರಿತ್ರೆಯನ್ನು ನಿರೂಪಿಸುತ್ತದೆ. ಈತ ತನ್ನನ್ನು ಗೌರಾಂಬಿಕೆಯರ ಪುತ್ರ ವೀರಪ್ಪನ್ನನ ತಮ್ಮ ವಶಿಷ್ಠ ಗೋತ್ರಜ ಕುಂಡಲಗಿರಿ ಸ್ಥಳ ದಿಗ್ಗಾವಿ ಎಂದು ಹೇಳಿಕೊಂಡಿದ್ದಾನೆ. ಈ ಗ್ರಂಥವು ರಾಯಚೂರಿನ ಗೆಳೆಯರ ಬಳಗದಿಂದ ಪ್ರಕಟವಾಗಿದೆಯೆಂದು ತಿಳಿದುಬರುತ್ತದೆ. ಆದರೆ ನಮಗೆ ಈ ಗ್ರಂಥವು ಉಪಲಬ್ಧವಾಗಿಲ್ಲ.

ಚಿತ್ರದುರ್ಗದ ಮುರುಘಾಮಠದ ಹಸ್ತಪ್ರತಿ ಭಂಡಾರದಲ್ಲಿ ಹಂಡೆ ಮಲಕಣ್ಣನ ನಿರೂಪ ಎಂಬ ಹಸ್ತಪ್ರತಿಯು ಇದ್ದು, ಹಂಡೆ ಅರಸರಲ್ಲಿ ಇಬ್ಬರು ಮಲಕಪ್ಪ ನಾಯಕರಿದ್ದಾರೆ. ಅವರಲ್ಲಿ ಹಿರಿಯ ಮಲಕಪ್ಪ ನಾಯಕ ಮತ್ತು ಚಿಕ್ಕಮಲಕಪ್ಪ ನಾಯಕ ಇಬ್ಬರು ಅರಸರು ಬರುತ್ತಾರೆ. ಇಬ್ಬರು ಸಾಹಿತ್ಯ ಪ್ರಿಯರಾಗಿದ್ದು, ಇಬ್ಬರ ಆಸ್ಥಾನ ಕವಿಗಳು ಒಂದೊಂದು ಕಾವ್ಯವನ್ನು ಬರೆದಿದ್ದಾರೆ. ಈ ಕುರಿತು ಈ ಗ್ರಂಥದ ಅಧ್ಯಯನ ಮಾಡುವುದರ ಅವಶ್ಯಕತೆಯಿದೆ.

ಪ್ರೊ. ಕೆ.ಎಸ್. ಕಣ್ಣನ್ ಅವರು ಬರೆದ 'ಅಹೋಬಲನ ವಿರೂಪಾಕ್ಷ ವಸಂತೋತ್ಸವ ಚಂಪೂ' ಎಂಬ ಈ ಕೃತಿಯನ್ನು ಆಧಾರಿಸಿ ಡಾ. ಬಿ. ನಂಜುಂಡಸ್ವಾಮಿ ಅವರು ಹಂಪೆಯ ರಥೋತ್ಸವ ಕಾಂಡದ ಉಕ್ತ ಪ್ರಸಿದ್ಧ ವಂಶದ ಪ್ರಭುಗಳು ಎಂಬ ಲೇಖನವು ಇತಿಹಾಸ ದರ್ಶನದಲ್ಲಿ ಪ್ರಕಟವಾಗಿದೆ. ಮುಖ್ಯವಾಗಿ ಇದರ ಆಶಯ ಹಂಪೆಯಲ್ಲಿ ನಡೆದ ವಸಂತೋತ್ಸವ ವರ್ಣನೆ. ವಿರೂಪಾಕ್ಷದೇವನ ಮಧುಮಾಸದ ಅರ್ಥಾತ್ ವಸಂತದ ಒಂಬತ್ತು ದಿನಗಳ ನಡೆಯುವ ನವರಾತ್ರಿ ಉತ್ಸವದ ಮುಖ್ಯವಾದ ವಸ್ತು. ಈ ನವರಾತ್ರಿ ರಥೋತ್ಸವದ ಸಂದರ್ಭವನ್ನು ನೋಡಲು ಬಂದ ಪ್ರಸಿದ್ಧ ವಂಶದ ಪ್ರಭುಗಳು/ಅರಸರು ಎಂದರೆ ವಿದ್ಯಾರಣ್ಯಯತೀಂದ್ರರು, ಮೈಸೂರಿನ ದೊರೆಗಳು, ಚಂದ್ರಗಿರಿ ನಾಯಕರು ಹಾಗೂ ಬಳ್ಳಾರಿಯ ರಾಜ (ಬಳ್ಳಾರಿ ನಗರಾಧೀಶ್ವರ) ಸಿದ್ಧರಾಮೇಶ್ವರನ ಪ್ರಸಾದವನ್ನು ಹೊಂದಿದ್ದವರಲ್ಲಿ ಹಂಡೆನಾಯಕರು ಇವರು ಸಿದ್ಧರಾಮೇಶ್ವರನ ಪರಮ ಭಕ್ತರು (ಬಳ್ಳಾರಿ ಜಿಲ್ಲೆಯ ಶಾಸನ ಸಂಪುಟದಲ್ಲಿ ಪ್ರಕಟವಾಗಿರುವ, ಹೊಸಪೇಟೆ ಕೊಟ್ಟೂರು ಸ್ವಾಮಿ ಮಠದ ಸನ್ನದು ೧೬೫೫ರ ಕಾಲಮಾನದ್ದು). ಹಾಗೆಯೇ ಬಳ್ಳಾರಿಯ ಪಾಳೆಯಗಾರರು ವಿಜಯನಗರ ಸಾಮ್ರಾಜ್ಯದ ರಕ್ಷಕರೆಂದು ಕೀರ್ತಿತರು. 'ಸಂಗನಕಲ್ಲು ಜಹಗೀರ ದಾನಪತ್ರ'ದಲ್ಲಿ ಶ್ರೀ ಮನ್ಮಹಾರಾಜಾಧಿರಾಜ ಹಂಡೆಯಶವಂತ ಪರದಳ ವಿಭಾಡ ಅರಿರಾಯ ಮಾನಮರ್ದನ ಸದಾ ಶ್ರೀ ಸಿದ್ಧರಾಮೇಶ್ವರ ದೇವರ ವರ ಪ್ರಸನ್ನರಾದ ರಾಜಶ್ರೀ

ಹಂಡೆ ರಾಮಪ್ಪನಾಯಕರು ಬರೆಸಿಕೊಟ್ಟ ದಾಸೋಹದ ದಾನ ಪತ್ರ ಎಂದಿದೆ. ಹೀಗೆ ಅಹೋಬಲನ ವಿರೂಪಾಕ್ಷ ವಸಂತೋತ್ಸವದ ಸಂದರ್ಭದಲ್ಲಿ ಉಪಸ್ಥಿತಿ ಇದ್ದವರಲ್ಲಿ ಹಂಡೆ ಪಾಳೆಯಗಾರರು ಪ್ರಮುಖರಾಗಿದ್ದದ್ದು ಕಂಡುಬರುತ್ತದೆ.

ತರುಳ ಚರಪತಿ ಬರೆದ ಕಾವ್ಯ 'ಗಂಗೆ ಗೌರಿ ಸಂವಾದ' ಇದು ಕ್ರಿ.ಶ. ೧೬೫೦ರಲ್ಲಿ ರಚನೆಗೊಂಡಿದೆ. ಹಂಡೆ ಅರಸುಮನೆತನಕ್ಕೆ ಸಂಬಂಧಿಸಿದಂತೆ 'ಗಂಗೆ-ಗೌರಿ ಸಂವಾದ' ಎಂಬ ಕಾವ್ಯವು ಇದೊಂದು ಹಾಡುಗಬ್ಬ ಮತ್ತು ದ್ವಿಪದಿಯಲ್ಲಿ ರಚನೆಯಾಗಿರುವ ಕಾವ್ಯವಾಗಿದೆ. ಜನಪದ ಸಾಹಿತ್ಯದಲ್ಲಿ ಗಂಗೆ-ಗೌರಿ ಸಂವಾದವು ಹಲವಾರು ಪ್ರಕಾರಗಳಲ್ಲಿ ಕಂಡುಬಂದಿದೆ. ತ್ರಿಪದಿ, ಹಾಡು, ಕೋಲಾಟ, ದುಂದುವೆ, ಡೊಳ್ಳಿನಪದ ಹೀಗೆ ವಿವಿಧ ಮಜಲುಗಳಲ್ಲಿ ರೂಪ ತಾಳಿ ಬಂದಿರುವುದು ಈ ಕಥೆಯ ಹಂದರವಾಗಿದೆ. ಈ ಕಾವ್ಯವು ಸಂದರ್ಭಾನುಸಾರವಾಗಿ ಶ್ರುತಿ ವೇದಶಾಸ್ತ್ರಗಳಲ್ಲಿ, ಜನಪದ ಮಹಾಕಾವ್ಯಗಳಲ್ಲಿ, ಬ್ರಹ್ಮಾಂಡ ಪುರಾಣಗಳಲ್ಲಿ ಕಂಡುಬಂದಿದೆ. ಹೀಗಾಗಿ ಈ ಕಾವ್ಯವು ಪಂಡಿತಪಾಮರರೆಲ್ಲರಿಗೂ ಅಚ್ಚುಮೆಚ್ಚಿನದೆಂವುಬುದು ಸ್ಪಷ್ಟವಾಗುತ್ತದೆ. ಇದನ್ನು ರಚಿಸಿದವರು ಶಿವಗಂಗೆಯ ಹಿರಿಯ ಸಿಂಹಾಸನದ ವಿರಕ್ತಮಠದ ಗುರುಪರಂಪರೆಯ ಗುರು ಸಂಗಮೇಶ್ವರನ ಕರಕಮಲ ಸಂಜಾತ 'ತರುಳ ಚರಪತಿ' ಈತನ ಕಾಲ ಕ್ರಿ.ಶ. ೧೭೦೦ ಎಂದು ಕವಿಚರಿತೆಕಾರ ಆರ್. ನರಸಿಂಹಾಚಾರ್ ಅವರ ಅಭಿಪ್ರಾಯವಾಗಿದೆ. ಕವಿ ಮತ್ತು ಕಾವ್ಯದ ರಚನೆಯ ಕಾಲಮಾನವು ೧೭ನೆಯ ಶತಮಾನ ಹಾಗೂ ಹಂಡೆ ಮಲ್ಕಪ್ಪನಾಯಕನ ಕಾಲಮಾನವು ಕ್ರಿ.ಶ. ೧೭೪೦ ಆಗಿರುವುದು. ಈತನು ಬಳ್ಳಾರಿ, ಅನಂತಪುರ, ಕುಂದರ್ಪಿ ಭಾಗಗಳಲ್ಲಿ ಆಳ್ವಿಕೆ ನಡೆಸಿದ ಮಾಹಿತಿ ಸಿಗುತ್ತದೆ. ಈತನು ಶಿವನ ಆರಾಧಕನಾಗಿದ್ದು ತನ್ನ ಆಸ್ಥಾನದಲ್ಲಿ ಶರಣರಿಗೆ ದಾಸೋಹದ ಕಾರ್ಯಗಳನ್ನು ನಡೆಸುತ್ತಿದ್ದನು. ಕೈಲಾಸಯಾತ್ರಿಗಳಿಗೆ ಧನಸಹಾಯ ಹಾಗೂ ಆಶ್ರಯವನ್ನು ನೀಡುತ್ತಿದ್ದನು. ಈ ದೃಷ್ಟಿಯಿಂದ ಹಂಡೆ ಮಲ್ಕಪ್ಪನಾಯಕನ ನಿಷ್ಠೆ ಮತ್ತು ಸ್ನೇಹಪರತೆಯನ್ನು ಕಂಡು ಈತನನ್ನು ಕುರಿತು ಶಿವನಿಗೆ ಸಮೀಕರಿಸಿ ಈ ಕಾವ್ಯದಲ್ಲಿ ಉಲ್ಲೇಖಿಸಿರುವುದು ಕಂಡುಬರುತ್ತದೆ. ಕವಿಗೆ ಕೆಲಕಾಲ ಹಂಡೆ ಮಲಕಪ್ಪನಾಯಕನ ಆಸ್ಥಾನದಲ್ಲಿ ಅವಕಾಶ ದೊರೆತಿರಬೇಕು. 'ಹಂಡೆ ಮಲುಕ ಉಂಡ ಮನೆಗೆ ಎರಡ ಬಗೆಯ' ಎಂಬ ಒಕ್ಕಣಿಕೆಯನ್ನು ಇರಿಸಿಕೊಂಡಿದ್ದಾನೆ. ಈ ಮೂಲಕ ಹಂಡೆ ಮನೆತನದ ಮಲಕಪ್ಪನಾಯಕನ ಬಗ್ಗೆ ಮತ್ತು ಆತನ ವ್ಯಕ್ತಿತ್ವವನ್ನು ನಿರೂಪಿಸುವಲ್ಲಿ ಗಂಗೆ-ಗೌರಿ ಸಂವಾದವು ಬೆದಂಡೆ ರೂಪದಲ್ಲಿ ಬರುವ ಕಾವ್ಯ ಕೃತಿಯಾಗಿದೆ.

ಪ್ರೊ. ಎಸ್.ಸಿ ಪಾಟೀಲ್ ಸಂಪಾದಿಸಿದ ಭಟಾಂಗಿನಿ ಸಾಹಿತ್ಯ ಎಂಬ ಕೃತಿಯು ಹಂಡೆ ಅರಸ ಚಿಕ್ಕಮಲಕಪ್ಪ ನಾಯಕನನ್ನು ಕುರಿತು ಬರೆದ ಕೃತಿಯಾಗಿದೆ. ಕ್ರಿ.ಶ.೧೬-೧೭ನೇ ಶತಮಾನದಲ್ಲಿ ರಚನೆಯಾದ ಕೃತಿ ಇದಾಗಿದೆ. ಇದು ಚಿಕ್ಕಮಲಕಪ್ಪನಾಯಕನನ್ನು ಹೊಗಳಿದ ಸಾಹಿತ್ಯ

ಕೃತಿಯಾಗಿದ್ದರೂ; ಇದರಲ್ಲಿ ಐತಿಹಾಸಿಕವಾದ ಅನೇಕ ವಿವರಗಳು ದಾಖಲಾಗಿವೆ. ಚಿಕ್ಕ ಮಲಕಪ್ಪನಾಯಕನ ಯುದ್ಧ ಮಾಡಿದ ಪ್ರದೇಶಗಳು ಮತ್ತು ಅವನಿಗಿರುವ ಬಿರುದುಗಳು ಪ್ರಜೆಗಳ ಬಗೆಗಿರುವ ಅವನ ಕಾಳಜಿ ಬೇರೆ ಅರಸರೊಂದಿಗಿರುವ ಸ್ನೇಹಪೂರ್ವ ಭಾವನೆ ಕುಂದುರುಪೆ, ರಾಯದುರ್ಗ, ಗುಡಿಕೋಟೆ, ಗುತ್ತಿ, ಅದ್ವಾನಿ, ಧೇಂದಿ, ಗಡಿಕೋಟೆ, ಪೆನುಕೊಂಡೆ, ಸೊಂಡೂರು, ಕಮ್ಮಟದುರ್ಗ, ಚಂದ್ರಗಿರಿ, ಸಿದ್ದವಟಿ, ಕುಣಿಗಲ್ಲು, ಪರಗಲ್ಲು, ಪರಾಂಡ್ಯ, ದವಲತಾಬಾದ್, ಗೊಲ್ಕಂಡ ಕೋಟೆಗಳನ್ನು ಗೆದ್ದಿರುವ ವಿವರಗಳು ಐತಿಹಾಸಿಕ ದೃಷ್ಠಿಯಿಂದ ಮಹತ್ವದ ಅಂಶಗಳಾಗಿವೆ.

ಸಿ.ಪಿ. ಬ್ರೌನ್ ಅವರು ಬರೆದ 'ವಾರ್ಸ್ ಆಫ್ ದಿ ರಾಜಾಸ್'(ದಿ ಆನಾಲ್ಸ್ ಆಫ್ ಹಂಡೆ ಅನಂತಪುರಂ) ಕ್ರಿ.ಶ. ೧೭೫೦-೧೮೧೦ರಲ್ಲಿ ಕೃತಿಯು ರಚನೆಯಾಗಿದೆ. ಇದರಲ್ಲಿ ಅನಂತಪುರ ಪ್ರದೇಶವನ್ನು ಆಳಿದ ಹಂಡೆ ಅರಸರ ಸಮಗ್ರ ಆಡಳಿತದ ವಿವರಗಳು ಈ ಗ್ರಂಥದಲ್ಲಿ ದಾಖಲುಗೊಂಡಿವೆ. ೧೩ ಜನ ಅರಸರು ಕ್ರಿ.ಶ. ೧೫೬೩-೧೮೧೧ರವರೆಗೆ ಆಳಿದ ರಾಜರುಗಳ ಚರಿತ್ರೆ ಅವರು ಮಾಡಿದ ಜನ ಹಿತವಾದ ಕಾರ್ಯಗಳು ಮತ್ತು ವಿಜಯನಗರ ಸಾಮ್ರಾಜ್ಯದ ಮೇಲೆ ಮುಸ್ಲಿಂರು ಅರಸರು ದಂಡೆತ್ತಿ ಬರುವುದನ್ನು ಈ ಅರಸರು ಹಲವಾರು ಬಾರಿ ಯುದ್ಧ ಮಾಡಿದ ವಿವರಗಳು ದಾಖಲಾಗಿವೆ(He following are the usages of the Handeh Family. They are adorers of Siva; and wear the Lingam. The hereditary god and patron saint they worship is Sidda Rameshwarudu of unless they have first adored Siva. They eat sweet food, but never use flesh or spirits. They contract marriages with no girl who has grown up. When the term of life is over, and they die, they are duly interred according to the Vira Shaiva rites." (C. P. Brown : The Wars of the Rajas, Chiristian Knowledge Society Press, Church Street, Veperv, Madras. 1853, Pp.90-91). ಈ ಅರಸರ ಮತಾಚರಣೆಯ ಕುರಿತು ಮೇಲಿನಂತೆ ವಿವರಣೆಯಿದೆ. ಈ ಅರಸರಿಂದ ಅನಂತಪುರಕ್ಕೆ ಹಂಡೆ ಅನಂತಪುರವೆಂದು ಹೆಸರು ಸಹ ಬಂದಿದೆ. ಹಂಡೆ ಅರಸರ ಚರಿತ್ರೆಗೆ ಇದೊಂದು ಮಹತ್ವದ ಆಕರಗ್ರಂಥವಾಗಿದೆ.

ತೆಲುಗಿನ ಶ್ರೀಪುಲ್ಲಕವಿ ವಿರಚಿತ "ಶ್ರೀಶೈಲ ಪಂಡಿತಾರಾಧ್ಯ ಚರಿತ್ರಮು" (ಕ್ರಿ.ಶ..೧೭೬೦) ಎಂಬ ಕೃತಿಯು ಕನ್ನಡ ಮತ್ತು ತೆಲುಗು ಎರಡು ಭಾಷೆಯನ್ನೊಳಗೊಂಡ ಕೃತಿಯಾಗಿದೆ. ಈ ಕೃತಿಯು ನಿಡುಮಾಮಿಡಿ ಮಠದಿಂದ ಪ್ರಕಟವಾಗಿದೆ. ಪ್ರಸ್ತುತ ಕೃತಿಗಳನ್ನು 'ಮಠಸ್ಥಳ' ಎಂಬ ಪುರಾತನ ಗ್ರಂಥದ ಆಧಾರದ ಮೇಲೆ ತನ್ನ ಕಾವ್ಯ ಬರೆದಿರುವುದಾಗಿ ಪ್ರಥಮಾಶ್ವದಲ್ಲಿ ಕವಿಯು ನಿರ್ದೇಶಿಸಿದ್ದಾರೆ.

ಇಮ್ಮಡಿ ಕರಿಬಸವರಾಜ ದೇಶಿಕೇಂದ್ರ ಶಿವಾಚಾರ್ಯರು ವಿಜಯನಗರ ಕಾಲದಲ್ಲಿದ್ದ ಅಳಿಯ ರಾಮರಾಯನ ಆಪ್ತಬಂಧುವಾಗಿದ್ದರು. ಇವರ ಕೃಪೆಯಿಂದ ಅಳಿಯ ರಾಮರಾಯನು ಹಂಡೆ ಹನುಮಪ್ಪ ನಾಯಕನ ಸಹಾಯಕ್ಕೆ ಕರೆಸಿಕೊಂಡನು. ಇವನ ಸಹಾಯದಿಂದ ರಾಮರಾಯನು ತಿಮ್ಮಯ್ಯನನ್ನು ಬಂಡಾಯವನ್ನು ಮುರಿದು ವಿಜಯನಗರವನ್ನು ಸ್ವಾಧೀನಪಡಿಸಿಕೊಂಡನು. ತರುವಾಯ ಹಂಡೆ ಹನುಮಪ್ಪನಾಯಕನು ನಿಜಾಂಷಾನನ್ನು ಕೈಸೆರೆ ಹಿಡಿದು ರಾಮರಾಯನಿಗೆ ಒಪ್ಪಿಸಿದನು. ಇದರ ಫಲವಾಗಿ ಹನುಮಪ್ಪ ನಾಯಕನು ವಿಜಯನಗರದ ಮಾಂಡಲಿಕನಾದನು. ಈತನ ಪರಾಕ್ರಮವನ್ನು ಕಂಡು ರಾಮರಾಯನು ಆತನಿಗೆ ನಂದ್ಯಾಲ, ಬುಕ್ಕರಾಯಸಮುದ್ರ, ಧರ್ಮಾವರ, ಬಳ್ಳಾರಿ ಹಾಗೂ ಕುರುಗೋಡು ಗ್ರಾಮಗಳನ್ನು ಉಂಬಳಿಯಾಗಿ ಹಾಕಿಕೊಟ್ಟನು. ಇದರಿಂದಾಗಿ ಹನುಮಪ್ಪ ನಾಯಕನ ರಾಜ್ಯಭಾರ ೧೬ನೇ ಶತಮಾನದ ಪೂರ್ವಾರ್ಧದಲ್ಲಿಯೇ ಸ್ಥಾಪಿತವಾಯಿತು ಎಂದು "ಶ್ರೀ ಶೈಲ ಪಂಡಿತಾರಾಧ್ಯ ಚರಿತಮು" ಎಂಬ ಕೃತಿಯು ವಿವರಿಸುತ್ತದೆ.

ಹಂಡೆ ಅರಸರು ಶಿವಭಕ್ತರು ಮತ್ತು ಲಿಂಗವಂತರು. ಇವರ ಕುಲದೈವವೂ ಇಷ್ಟದೈವವೂ ಆದ ವಿಜಾಪುರ ಸೀಮೆಯ ಸೊನ್ನಲಾಪುರದ ಸಿದ್ಧರಾಮೇಶ್ವರ ವಿನಾಹ ಇತರ ದೈವಗಳನ್ನು ಇವರು ಪೂಜಿಸುವುದಿಲ್ಲ. ಶಿವ ಪೂಜೆ ಮಾಡದೆ ನೀರನ್ನು ಸಹ ಕುಡಿಯುವುದಿಲ್ಲ. ಅಲ್ಲದೆ ಮದ್ಯ ಸೇವಿಸುವುದಿಲ್ಲ, ಮಾಂಸಭಕ್ಷಣೆ ಮಾಡುವುದಿಲ್ಲ. ಸತ್ತವರನ್ನು ವೀರಶೈವಾಚಾರ ಪದ್ಧತಿಯ ಪ್ರಕಾರ ಸಮಾಧಿ ಮಾಡುವರು. ಧಾರ್ಮಿಕ ಕ್ರಿಯೆಯಲ್ಲಿ ತಮ್ಮದೇ ಆದ ಆಚರಣೆಯನ್ನು ಪಾಲಿಸಿಕೊಂಡು ಬಂದವರು. ಒಟ್ಟಾರೆಯಾಗಿ ತೆಲುಗು ಕೃತಿಯಾದ ಹಂಡೆವಂಶಸ್ಥರ ಬಗ್ಗೆ ಉಪಯುಕ್ತವಾದ ಮಾಹಿತಿ ನೀಡಬಲ್ಲ ಕೃತಿಯಾಗಿದೆ.

ಡಾ.ಬಿ.ವಿ.ಶಿರೂರು ಸಂಪಾದನೆಯ 'ಭಕ್ತಿರಸ ಸೋನೆ' ಎಂಬ ಗ್ರಂಥವು ಕ್ರಿ.ಶ. ೧೭೭೮ರಲ್ಲಿ ರಚನೆಯಾಗಿದ್ದು, ಈ ಕೃತಿಯನ್ನು ಶ್ರೀ ತೋಂಟದ ಸಿದ್ಧೇಶ್ವರ ದೇವರ ಸಂಪ್ರದಾಯಕರಾದ ವಿರಕ್ತಮಠದ ನೀಲಕಂಠ ಸ್ವಾಮಿಗಳವರಿಗೆ ತಮ್ಮ ಕಾರುಣ್ಯಪ್ರಿಯ ಭಕ್ತರಾದಂಥ ದೇವರ ವರಪ್ರಸನ್ನರಾದ ರಾಜಾಧಿರಾಜ ಶ್ರೀ ಹಂಡೆ ರಾಮಪ್ಪನಾಯಕರು ಭಕ್ತಿಯಿಂದ ಬರೆಸಿ ನಮಸ್ಕರಿಸಿದಂತಹ 'ಭಕ್ತಿರಸ ಸೋನೆ' ಎಂಬ ಕಾವ್ಯವು ಬಸವಣ್ಣನ ಚರಿತ್ರೆಯನ್ನೊಳಗೊಂಡ ರಚಿತವಾದ ಸಾಂಗತ್ಯ ಕೃತಿಯಾಗಿದೆ. ಹೀಗಾಗಿ ಹಂಡೆ ಅರಸರು ಸಾಹಿತ್ಯ ಪೋಷಕರಾಗಿದ್ದರೆಂಬುದಾಗಿ ತಿಳಿಯಲವಕಾಶವಿದೆ.

ಬಸವಣ್ಣನ ಚರಿತ್ರೆಯನ್ನು ಪ್ರಧಾನವಾಗಿ ನಿರೂಪಿಸುವ ಈ ಕೃತಿ ಅನೇಕ ಪೌರಾಣಿಕ ಹಾಗೂ ಚಾರಿತ್ರಿಕ ವ್ಯಕ್ತಿಗಳ ಕಥೆಗಳನ್ನೊಳಗೊಂಡಿದೆ. ಬಹುಶಃ ಈ ಕೃತಿಯನ್ನು ಹಂಡೆ

ರಾಮಪ್ಪನಾಯಕನು ಪ್ರತಿ ಮಾಡಿಸಿದ್ದಾನೆ. ಒಟ್ಟಾರೆಯಾಗಿ ಈ ಕಾವ್ಯವನ್ನು ಬರೆಸಿದ ಕೀರ್ತಿಯು ಹಂಡೆ ಮನೆತನಕ್ಕೆ ಸಲ್ಲುತ್ತದೆ(ಕಾವ್ಯದ ಉಲ್ಲೇಖ: ಕಾಗದ ಪ್ರತಿ ನಂ. ೨೫೮೨ ಅ(ಅ) ಅಂತ್ಯದ ಪ್ರಶಸ್ತಿ). ಅದರ ಉಕ್ತಭಾಗ ಹೀಗಿದೆ.

"ಕ್ರಿ.ಶ. ವರ್ಷಗಳು ೧೭೮೮ನೆಯ ಬಹುಧಾನ್ಯ ನಾಮ ಸಂವತ್ಸರದ ಶ್ರಾವಣ ಶು. ೧೦ ಸೋಮವಾರ ಅಭಿಜಿನ್ಮುಹೂರ್ತ ಶುಕ್ರನ ಹೊರೆಯಲ್ಲು ಮುಗಿದ ಭಕ್ತಿರಸಸೋನೆಯ ಪುಸ್ತಕಕ್ಕೆ ಶುಭಮಸ್ತು ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ ಮದ್ವೇದ ವೇದಶಿರ ಶಿವಾಗಮ ಪುಣ್ಯ ಪುರಾಣ ಪ್ರಭ್ರುತಿ ಪ್ರತಿಪಾದ್ಯ ಮಾನ ಸಚ್ಚಿದಾನಂದ ನಿಷ್ಕಳ ಸ್ವಯಂಜ್ಯೋತಿಪ್ರಕಾಶರುಮಪ್ಪ ಪರಮ ಪುರಾತನಗೀತ ಜಾತಕಂಜಾತ ವಿಕಾಸ ವಿಧಿಮಾರ್ತಂಡಾಯಮಾನರುಮಪ್ಪ ಶಿವಜ್ಞಾನ ಶಿವಯೋಗ ಶಿವವ್ರತ ಶಿವಸಮಾಧಿ ಶಿವಾರ್ಚನ ಶಿ(ವ) ಪ್ರಸಾ(ದ) ನಿರತಿಶಯ ನಿಜಾನಂದ ತೃಣೀಕೃತ ಬೈಂದವಾನಂದಾದಿ ಭೋಗಸಮೂಹರುಮಪ್ಪ ಶರಣಗಣ ಹೃದಯಾಂಬೋಧಿಶ ಶಾಂಕರುಮಪ್ಪ ತೋಂಟದ ಸಿದ್ಧೇಶ್ವರ ದೇವರ ಸಂಪ್ರದಾಯಕರಾದ ವಿರಕ್ತಮಠದ ನೀಲಕಂಠಸ್ವಾಮಿ ಗಳವರಿಗೆ ತಮ್ಮ ಕಾರುಣ್ಯಪ್ರಿಯ ಭಕ್ತರಾದಂಥ ಶ್ರೀಮನ್ಮಹಾರಾಜಾಧಿರಾಜ ಹಂಡೆ ಯಶವಂತ ಪರದಳವಿಭಾಡ ಅರಿರಾಯಮಾನ ಮರ್ದನ ಸದಾಶ್ರೀ ದೇವರವರ ಪ್ರಸನ್ನರಾದ ರಾಜಾಧಿರಾಜ ಶ್ರೀ ಹಂಡೆ ರಾಮಪ್ಪ ನಾಯಕರು ಭಕ್ತಿಯಿಂದ ಬರಸಿ ನಮಸ್ಕರಿಸಿದಂಥ ಭಕ್ತಿರಸಸೋನೆಯ ಪುಸ್ತಕಕ್ಕೆ ಶುಭಮಸ್ತು ಶೋಭನಮಸ್ತು ಆಯುರಾರೋಗ್ಯ ಅಯಿಶ್ವರ್ಯಮಸ್ತು ಶ್ರೀ ಶ್ರೀ ಶ್ರೀ."

ಈ ಪುಸ್ತಕವ ಬರೆದಾತ ಪ. ಬಳ್ಳಾರಿ ಮಹಾನಾಡಿನ ಶಾನಭೋಗ ಮಲ್ಲಪ್ಪನ ಸುಹಸ್ತ ಬರಹವು. ಇವನು ಹಂಡೆ ರಾಮಪ್ಪನಾಯಕನು ಬಳ್ಳಾರಿ, ಕುರುಗೋಡು, ತೆಕ್ಕಲಕೋಟೆ ಆಳುತ್ತಿರುವಾಗ ಆತನ ಆಸ್ಥಾನದಲ್ಲಿ ಶಾನುಭೋಗರಾಗಿ ವೃತ್ತಿನಿರತನಾಗಿದ್ದದ್ದು ಕಂಡುಬರುತ್ತದೆ. ಈ ಕಾಗದದ ಪ್ರತಿಯನ್ನು ಹಂಡೆ ರಾಮಪ್ಪನಾಯಕನ ಆಜ್ಞೆಯ ಮೇರೆಗೆ ಬರೆದಿರಬೇಕೆಂದು ತಿಳಿಯುತ್ತದೆ. ಹಂಡೆ ಅರಸರು ಸಾಹಿತ್ಯ ಪ್ರಿಯರಾಗಿದ್ದರು ಎಂದು ಇದರಿಂದ ಗುರುತಿಸ ಬಹುದಾಗಿದೆ.

ಡಾ. ಎಸ್.ಸಿ. ಪಾಟೀಲ್ ಅವರ ಸಂಪಾದನೆ ಬುಕ್ಕರಾಯ ಚರಿತ್ರೆ ಕ್ರಿ.ಶ. ೧೮೦೧ರಲ್ಲಿ ರಚನೆಯಾಗಿದ್ದು, ಗದ್ಯಪ್ರಕಾರದಲ್ಲಿ ಇದೆ. 'ಕರ್ನಲ್ ಮನ್ರೋ ಹಂಡೆ ಸಿದ್ದಪ್ಪನಾಯಕನಿಗೆ ನಿಮ್ಮ ಪೂರ್ವಜರ ಕೈಫಿಯತ್ತು ಬರೆದು ಪಟ್ಟಿ ತೆಗೆದುಕೊಂಡು ಬಾ ಎಂದು ಅಪ್ಪಣೆ ಕೊಟ್ಟಿದ್ದರಿಂದ ಅದರಂತೆ ಕೈಫಿಯತ್ತನ್ನು ಸಿದ್ದಪಡಿಸಿ ಸಲ್ಲಿಸಲಾಗಿದೆ. ಇದರಲ್ಲಿ ಸಿ.ಪಿ.ಬ್ರೌನ್ ಅವರ ವಾರ್ಸ್ ಆಫ್ ದಿ ರಾಜಾಸ್ ಮತ್ತು ಸ್ಥಳೀಯ ದಾಖಲೆಗಳನ್ನು ಆಧರಿಸಿ ಬರೆದ

ಅನಂತಪುರ ಹಂಡೆಅರಸರ ಸಮಗ್ರ ಚರಿತ್ರೆಯು ೯ ಸಂಧಿಗಳಲ್ಲಿ ವಿವರಿಸಲ್ಪಟ್ಟಿದೆ. ಇಲ್ಲಿ ಅವರ ವಂಶಾವಳಿ ಅವರು ಮಾಡಿದ ಯುದ್ಧಗಳು, ಗುಡಿಗುಂಡಾರಗಳು, ಕೆರೆ-ಕಾಲುವೆ, ಕೋಟೆ-ಕೊತ್ತಲುಗಳು ಮುಂತಾದ ಜನ ಹಿತವಾದ ಕಾರ್ಯಗಳ ಕುರಿತಾದ ವಿವರಗಳು ದಾಖಲೆಗೊಂಡಿವೆ. ಇವರ ಮರ್ಯಾದೆಗಳು ಕುರಿತು "ಯಿವರು ಜಾತಿಯೊಳಗೆ ಶಿವಭಕ್ತರು, ಲಿಂಗವಂತರು ಇವರಿಗೆ ಕುಲದೈವ, ಇಷ್ಟದೈವ ವಿಜಾಪುರದ ಸೀಮೆಯೊಳಗೆ ಯಿದ್ದು, ಸೊಂನಾಲಪುರ ಸಿದ್ಧರಾಮೇಶ್ವರನಾಗಲಿ ಇತರ ದೇವತೆಗಳನ್ನು ಶಿವಪೂಜೆ ಮಾಡದೇ ಆಗಲಿ ಗಂಗಾಪಾನ ಸಹ ಮಾಡುವುದು ಯಿಲ್ಲ. ಮದುರ ಆಹಾರಗಳೇ ಹೊರತು ಮಧ್ಯ ಮಾಂಸಾದಿಗಳ ಭಕ್ಷಣೆ ಮಾಡರು. ಮೈನೆರೆದ ಹುಡುಗಿಯರನ್ನು ಮದುವೆ ಮಾಡಿಕೊಳ್ಳರು. ವಂಭತ್ತು ವರ್ಷದೊಳಗಾಗಿ ಹೆಂಣುಗಳು ಯಿದ್ದರೆ ಪ್ರಸ್ತ ಮಾಡಿಕೊಳ್ಳುವದೂ, ಕಾಲ ಪ್ರಮಾಣದಿಂದ ಗಂಡ ಸತ್ತರೆ ತಾಲಿ(ಳಿ) ಕೂಡಾವಳಿ ಮಾಡುವ ಸಾಂಪ್ರದಾಯವಿಲ್ಲ ಸತ್ತರೆ ಸಮಾಧಿ ವಿನಹ ದಹನ ಮಾಡರು ಯೀ ಪ್ರಕಾರ ಯಿವರ ವಂಶಾವಳಿ ಸಂಪೂರ್ಣ ಮಂಗಳ ಮಹಾ ಶ್ರೀ ಶ್ರೀ ಶ್ರೀ. ಎಂಬ ವಿವರಗಳು ಬುಕ್ಕರಾಯ ಚರಿತ್ರೆಯಲ್ಲಿ ದಾಖಲಾಗಿದೆ.

ಗುರುಜಾಡು ಅಪ್ಪಾರಾವ್ ಅವರ ಹಂಡೆ ಅನಂತಪುರಂ ಸ್ಥಾನಿಕ ಚರಿತ್ರ ತೆಲುಗು ಗ್ರಂಥ ೧೯೨೦ ಮುದ್ರಣವಾಗಿದೆ. ಈ ಗ್ರಂಥದಲ್ಲಿ ಹಂಡೆ ಅರಸರ ಕಾಲಾನುಕ್ರಮದ ವಿವರವನ್ನು ಒಳಗೊಂಡಿದೆ. ಹನುಮಪ್ಪ ನಾಯಕ ನಿಂದ ಹಿಡಿದು ಸಿದ್ದರಾಮಪ್ಪ ನಾಯಕನವರೆಗೆ ಅವರ ಇತಿಹಾಸವು ಕಾಲಾನುಕ್ರಮದಲ್ಲಿ ಇಸ್ವಿಗಳೊಂದಿಗೆ ನಿರೂಪಣೆಗೊಂಡಿದೆ. ಇದೇ ಗ್ರಂಥವು ಮದ್ರಾಸ್ ವಿಶ್ವವಿದ್ಯಾಲಯದ ಇತಿಹಾಸ ವಿಭಾಗಕ್ಕೆ ಪಠ್ಯಪುಸ್ತಕವಾಗಿತ್ತು. ೧೮ ಚಿಕ್ಕ ಚಿಕ್ಕ ಅಧ್ಯಾಯಗಳಲ್ಲಿ ಹಂಡೆ ಅರಸರ ಚರಿತ್ರೆಯು ನಿರೂಪಣೆಗೊಂಡಿದೆ. ಇಲ್ಲಿ ಎರಡು ಕೈಫಿಯತ್ತುಗಳನ್ನು ಕೊನೆಯಲ್ಲಿ ಹಾಕಿದ್ದಾರೆ. ೧. ಬುಕ್ಕರಾಯ ಸಮುದ್ರಂ ೨. ಅನಂತಸಾಗರಂ ಈ ಊರುಗಳ ಕುರಿತಾದ ಕೈಫಿಯತ್ತುಗಳು ಸಂಕ್ಷಿಪ್ತವಾಗಿ ನಿರೂಪಣೆಗೊಂಡಿವೆ.

ಈ ಮೇಲಿನ ಕೃತಿಗಳಲ್ಲಿ ಅನಂತಪುರ ಕೈಫಿಯತ್ತು ನಾಗಸಂದ್ರ ವಾಸುದೇವ್‌ರಾವ್ ಬರೆದ ಹಂಡೆಮಂಡಲ ಚರಿತ್ರೆ ಕಥಲು, ಶ್ರೀಶೈಲ ಪೀಠ ದರ್ಶನ, ಸಿರಿಪಿ ಆಂಜನೆಯಲು ಬರೆದ ಕರಿಬಸವಸ್ವಾಮಿ ಕಾವ್ಯ ಈ ಗ್ರಂಥಗಳು ಹಂಡೆ ಅರಸರ ಕುರಿತು ಬಂದ ಕೃತಿಗಳಾಗಿದ್ದು, ಇವುಗಳ ಕುರಿತು ಅಧ್ಯಯನವಾಗಬೇಕಾಗಿದೆ. ಸದ್ಯಕ್ಕೆ ಈ ಕೃತಿಗಳು ಲಭ್ಯವಾಗಿಲ್ಲ.

ಟಿ.ಎಚ್.ಎಂ ಸದಾಶಿವಯ್ಯನವರು ರಚಿಸಿದ ಕರ್ನಾಟಕದ ಗಡಿಗೆರೆಗಳು ೧೯೪೯ ಈ ಕೃತಿಯಲ್ಲಿ ಅನಂತಪುರದಲ್ಲಿ ನ್ಯಾಯಾಧಿಶರಾಗಿದ್ದ ಟಿ.ಎಚ್.ಎಂ ಸದಾಶಿವಯ್ಯನವರು ಕರ್ನಾಟಕದ ಸಾಂಸ್ಕೃತಿ, ಪರಂಪರೆ, ಇತಿಹಾಸ ತುಂಬಾ ಆಸಕ್ತಿಯನ್ನು ಹೊಂದಿದ ಇವರು ಇತಿಹಾಸ

ಕಾರರಾಗಿ, ಸಂಶೋಧಕರಾಗಿ, ಸಾಹಿತಿಯಾಗಿ ಅನಂತಪುರ ಪ್ರಾಂತ್ಯವನ್ನೆಲ್ಲ ಸುತ್ತಾಡಿ ಅಧಿಕೃತವಾದ ಕರ್ನಾಟಕದ ಗಡಿಗೆರೆಗಳನ್ನು ಗುರುತಿಸಿದ್ದಾರೆ. ಅದಕ್ಕಾಗಿ ಅವರು ಮಾಡಿದ ಕ್ಷೇತ್ರಕಾರ್ಯದ ವಿವರಗಳನ್ನು ಈ ಗ್ರಂಥದಲ್ಲಿ ದಾಖಲಿಸಿದ್ದಾರೆ. ಇದಕ್ಕೆ ಮುಂಬೈ ಪ್ರಾಂತ್ಯದ ಕನ್ನಡಿಗ ನ್ಯಾಯಾಧೀಶ ವೀರಭದ್ರಪ್ಪ ಹಾಲಹರವಿಯವರು ಮುನ್ನುಡಿಯನ್ನು ಬರೆದಿದ್ದಾರೆ. ಈ ಗ್ರಂಥದಲ್ಲಿ ಪೂರ್ವಕರ್ನಾಟಕದ ರಾಜರ ಇತಿಹಾಸವನ್ನು ಶಾಸನಗಳ ಆಧಾರದಿಂದ ಕಟ್ಟಿಕೊಟ್ಟಿದ್ದಾರೆ. ವಿಶೇಷವಾಗಿ ಅನಂತಪುರ ಪ್ರದೇಶವನ್ನು ಆಳಿದ ಹಂಡೆ ಅರಸರ ಕುರಿತು ಮಹತ್ವದ ವಿವರಗಳನ್ನು ನೀಡಿದ್ದಾರೆ. ಇದೊಂದು ಮಹತ್ವದ ಆಕರ ಗ್ರಂಥವಾಗಿದೆ.

ಹಂಡೆ ಅರಸರ ಅಥವಾ ಹಂಡೆ ಪಾಳೆಗಾರರ ಕುರಿತು ಪಿಎಚ್.ಡಿ. ಮತ್ತು ಎಂ.ಫಿಲ್. ಅಧ್ಯಯನಗಳು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ನಡೆದಿವೆ. ಅಲ್ಲದೇ ಡಾ.ಎಂ.ಎಂ. ಕಲಬುರ್ಗಿಯವರು ಸಂಪಾದಿಸಿದ ಕರ್ನಾಟಕದ ಕೈಫಿಯತ್ತುಗಳು ಒಂದು ಮಹತ್ವದ ಗ್ರಂಥವಾಗಿದೆ. ಅಲ್ಲದೇ ಹಲವಾರು ಗ್ರಂಥಗಳು, ಲೇಖನಗಳು, ನಾಟಕಗಳು, ಕಾದಂಬರಿಗಳು ಬಂದಿವೆ. ಅವುಗಳೆಲ್ಲ ಸ್ವತಂತ್ರ ನಂತರ ದಿನಗಳಲ್ಲಿ ಕೈಫಿಯತ್ತುಗಳನ್ನು ಆಧರಿಸಿ ರಚನೆಗೊಂಡಿವೆ. ಅನಂತಪುರ ಕೈಫಿಯತ್ತು ಇತ್ತೀಚಿನ ದಿನಗಳಲ್ಲಿ ಲಭ್ಯವಾಗಿದ್ದು, ಆ ಕೈಫಿಯತ್ತಿನ ಅಧ್ಯಯನ ಇನ್ನೂ ಗಂಭೀರವಾಗಿ ವಿದ್ವತ್ ವಲಯದಲ್ಲಿ ನಡೆಯಬೇಕಾಗಿದೆ. ಇಲ್ಲಿ ಅನೇಕ ಲೇಖನಗಳು ಈ ಅರಸರ ಕುಲಮೂಲದ ಬಗ್ಗೆ ವಿಶೇಷವಾಗಿ ಹಂಡೆ ಶಬ್ದದ ಕುರಿತು ಹಲವಾರು ಜನರು ತಮ್ಮದೇ ಆದ ರೀತಿಯಲ್ಲಿ ಚರ್ಚಿಸಿದ್ದಾರೆ. ಇಲ್ಲಿ ನಾನು ಹಂಡೆ ಅರಸರ ಸಾಂಸ್ಕೃತಿಕ ಅಧ್ಯಯನಕ್ಕೆ ಹೆಚ್ಚಿನ ಮಹತ್ವವನ್ನು ನೀಡಿ ಅವರ ಕೊಡುಗೆ ಬಗೆಗೆ ಗಮನಹರಿಸಿದ್ದೇನೆ. ಆದರೆ ವಿದ್ವಾಂಸರಲ್ಲಿ ವಾದ-ವಿವಾದಗಳು ಇರುವ ಹಿನ್ನೆಲೆಯಲ್ಲಿ ಮೇಲಿನ ಅಂಶಗಳ ಕುರಿತು ಚರ್ಚಿಸುವ ಘೋಜಿಗೆ ಹೋಗಿಲ್ಲ. ಆದರೆ ಹಂಡೆ ಅರಸರ ಕುರಿತಾದ ಇತಿಹಾಸದ ಮಹತ್ವದ ಆಕರಗಳಾದ ಶಾಸನಗಳನ್ನು ಮಾತ್ರ ಇಲ್ಲಿ ವಿಶೇಷವಾಗಿ ಚರಿತ್ರೆಯನ್ನು ಕಟ್ಟುವ ಹಿನ್ನೆಲೆಯಲ್ಲಿ ಅಧ್ಯಯನಕ್ಕೊಳಪಡಿಸಲಾಗಿದೆ.

ಒಟ್ಟಾರೆಯಾಗಿ ಪ್ರಬಂಧವು ಒಂದು ನಿರ್ದಿಷ್ಟ ಜನಾಂಗದ ಮಾಹಿತಿಯನ್ನು ವಿವಿಧ ನೆಲೆಯಲ್ಲಿ ವಿವರಿಸಲಾಗಿ ಆ ಸಮುದಾಯಕ್ಕೆ ಅರ್ಥಪೂರ್ಣವಾದ ಕೊಡುಗೆ ನೀಡಲು ಈ ಪ್ರಬಂಧವು ಸಹಕರಿಸಿದೆ. ಅನೇಕ ಆಕರಗಳನ್ನು ಅಧ್ಯಯನಕ್ಕೆ ಬಳಸಿಕೊಂಡು ಹಂಡೆ ಅರಸರ ಸಾಂಸ್ಕೃತಿಕ ಮಹತ್ವವನ್ನು ವಿವರಿಸಲಾಗಿದೆ.

# ಅಧ್ಯಾಯ : ಮೂರು

## ಹಂಡೆ ಅರಸುಮನೆತನ : ಆಕರ ಸಾಮಗ್ರಿಗಳು

೩.೧. ಕಾವ್ಯ–ಪುರಾಣಗಳು

೩.೨. ಶಾಸನಗಳು

೩.೩. ಕಾಗದಪತ್ರಗಳು

೩.೪. ಕೈಫಿಯತ್ತುಗಳು

೩.೫. ವಂಶಾವಳಿ

೩.೬. ಭಟಾಂಗಿನಿ ಸಾಹಿತ್ಯ

ಅಧ್ಯಾಯ : ಮೂರು

# ಹಂಡೆ ಅರಸುಮನೆತನ : ಆಕರ ಸಾಮಗ್ರಿಗಳು

ಭಾಷೆ, ಸಾಹಿತ್ಯ, ಸಂಸ್ಕೃತಿ ಕ್ಷೇತ್ರಗಳಲ್ಲಿ ಕೈಗೊಳ್ಳುವ ಸಂಶೋಧನೆ, ಗತಕಾಲದ ವಿಷಯವನ್ನು ಕುರಿತು ಅನ್ವೇಷಣೆ ಮಾಡುವುದು, ಇವುಗಳ ವಸ್ತುನಿಷ್ಠ ವಿಶ್ಲೇಷಣೆಯಿಂದ ಅನೇಕ ವಿಭಿನ್ನ ವಿಷಯಗಳು ತಲೆದೋರುತ್ತವೆ. ಹೀಗಾಗಿ ಆಕರ ಸಾಮಗ್ರಿಗಳು ಸಂಶೋಧನೆಗೆ ಅವಶ್ಯವಾದ ಸಾಧನಗಳು. ಅವು ಪ್ರಮಾಣದ ದೃಷ್ಟಿಯಿಂದ ಅಧಿಕವಾಗಿದ್ದಷ್ಟೂ, ಗುಣದೃಷ್ಟಿಯಿಂದ ಪ್ರಾಮಾಣಿಕವಾಗಿದ್ದಷ್ಟೂ ಸಂಶೋಧನೆಗೆ ಇಂಬು ನೀಡುತ್ತವೆ. ಈಗಾಗಲೇ ಆಕರಗಳ ಹಿನ್ನೆಲೆಯಲ್ಲಿ ಉತ್ತಮವಾದ ಸಂಶೋಧನೆಗಳು ನಡೆದಿವೆ. ಹಂಡೆ ಅರಸು ಮನೆತನಕ್ಕೆ ಉಪಲಬ್ಧವಿರುವ ಆಕರಗಳನ್ನು ಬಳಸಿಕೊಂಡು ಈ ಮನೆತನದ ಸಾಂಸ್ಕೃತಿಕ ಅನನ್ಯತೆಯನ್ನು ತಿಳಿದುಕೊಳ್ಳಲಾಗುವುದು. ಆಕರಗಳನ್ನು ಸಾಹಿತ್ಯ ಮತ್ತು ಸಾಹಿತ್ಯೇತರ ಆಕರಗಳು ಎಂದು ವರ್ಗೀಕರಿಸಿಕೊಂಡು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಸಾಹಿತ್ಯ ಆಕರಗಳಲ್ಲಿ ಅಹೋಬಲ ವಿರಚಿತ ವಿರೂಪಾಕ್ಷ ವಸಂತೋತ್ಸವ ಚಂಪೂ, ಗಂಗೆಗೌರಿ ಸಂವಾದ, ಭಕ್ತಿರಸಸೋನೆ, ಬುಕ್ಕರಾಯ ಚರಿತ್ರೆ, ಶ್ರೀಶೈಲ ಪೀಠ ದರ್ಶನ, ತೆಲುಗು ಮೂಲದ ಸಾಹಿತ್ಯ ಕೃತಿಗಳಾದ ಹಂಡೆ ಅನಂತಪುರ ಚರಿತ್ರೆ, ಶ್ರೀಶೈಲ ಪಂಡಿತಾರಾಧ್ಯ ಚರಿತೆ ಮುಂತಾದ ಸಾಮಗ್ರಿಗಳನ್ನು ಸಾಹಿತ್ಯ ಆಕರಗಳಾಗಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಸಾಹಿತ್ಯೇತರ ಆಕರಗಳಲ್ಲಿ ಶಾಸನಗಳು, ಕೈಫಿಯತ್ತುಗಳು, ಸ್ಮಾರಕಗಳು, ಕೋಟೆ–ಕೊತ್ತಲು, ಕೆರೆ–ಬಾವಿಗಳಂತಹ ಆಕರಗಳ ಮುಖೇನ ಹಂಡೆ ಅರಸರ ಸಾಂಸ್ಕೃತಿಕ ಅನನ್ಯತೆಯನ್ನು ತಿಳಿಯಬಹುದು.

### ೩.೧. ಕಾವ್ಯ–ಪುರಾಣಗಳು

ವಿರೂಪಾಕ್ಷ ವಸಂತೋತ್ಸವ ಕೃತಿಯ ಕರ್ತೃ ಅಹೋಬಲ. ಕೃತಿಯ ವಸ್ತು ಹಂಪೆಯಲ್ಲಿ ನಡೆದ ವಸಂತೋತ್ಸವ ವರ್ಣನೆ ಮತ್ತು ವಸಂತೋತ್ಸವದ ಕಾರ್ಯದಲ್ಲಿ ಹಂಡೆ ಅರಸರು ಭಾಗಿಯಾದ ಸಂದರ್ಭದ ಉಲ್ಲೇಖ–

'ಬಲಾರಿನಗರಾಧೀಶ್ವರಃ ಶಿವ ರಥೋತ್ಸವವೋತ್ಸಲಕೋ ವರ್ತತೇ'

'ಶ್ರೀಸಿದ್ಧರಾಮೇಶ್ವರ ಪ್ರಸಾದಾನುಗುಣ- ಮಹೀಸುರ ಮಹಾನುಗ್ರಹ ವಜ್ರಕವಚಃ' ಬಲಾರಿನಗರಾಧೀಶ್ವರ....ಚೈತ್ರಯಾತ್ರಾರಂಭಕ-ಬೇರಿಕಾ ನಿನಾದ-ನಿರ್ಭಿನ್ನ ಹೃದಯ ಅರಾತಿ ಪುರೇಂಧನ-ಜ್ವಲಿತ-ಪ್ರತಾಪಾನಲೋ... ನಾನು ಸರಣಾಗತ... ಪ್ರಣತಸಾಮಂತ-ಸಮುದ್ಧರಣಕೃತ ದಯಾರ್ದ್ರಹೃದಯೋ ಮುಖಚಂದ್ರೋಲ್ಲಸದ್-ಅಮೃತ್ ಬಿಂದು ಸಂದೋಹ-ಬುದ್‌ಧ್ಯಾವಹ-ಸ್ವೇದಜಲಕಣೆ ಕಾಲಂಕ್ರಿಯ ಮಾಣೋ, ಮೃಗಮದಕಪೂರ್ರರಾಗರು-ಕುಂಕುಮರಸ ವಾಸನಾಸುರಭಿ-ಚಂದನಾನುಲಿಪ್ತಾಂಗ-ವಾರಾಂಗನಾಕರಧೃತ- ಚಾಮರವ್ಯಜನ-ವೀಜಿತೋ, ನಿಸ್ಸಾಪತ್‌ನ್ಯ-ತಯಾಮಾತ್ಯಾ ನಿರ್ವಾಹಿತ-ರಾಜ್ಯಭಾರ ಸಮಾನ ವಿದ್ಯಾವಯೋವಿನ ಯಸಂಪನ್ನೈ ಅತಿನಿಪುಣೈಃ ಕವಿಭಿಃ ಅಖ್ಯಾತಾಖ್ಯಾಯಿಕಾಖ್ಯಾನ-ಇತಿಹಾಸ-ಪುರಾಣ ವಿದಗ್ಧಮಂಡಲ-ಮಂಡನಸತ್ಕಾವ-ಪರಮಾರ್ಥ ಸಾಧಕ-ಶಾಸ್ತ್ರ ವಿಚಾರ-ಸಮುಪಜಾತಪರ ಮಾನಂದಭರ ಅಮೃತಾಸ್ವದ ಸಂತೃಪ್ತಮಾನಸೋ, ಧರಾಯಾಮಪಿ ದೇವೇಂದ್ರಭೋಗಶಾಲೀ ಬಲಾರಿನಗರಾಧೀಶ್ವರ ಶಿವರಥೋತ್ಸವವೋತ್ಸುಕೋ ವರ್ತತೆ।[೧]

ಅಹೋಬಲ ವಿರಚಿತ ವಿರೂಪಾಕ್ಷ ವಸಂತೋತ್ಸವ ಎಂಬ ಸಂಸ್ಕೃತ ಚಂಪೂ ಕೃತಿಯಲ್ಲಿ ವಿರೂಪಾಕ್ಷ ದೇವರ ವಸಂತೋತ್ಸವದ ಸಂದರ್ಭದಲ್ಲಿ ಆಗಮಿಸಿದ ಕೆಲವು ಐತಿಹಾಸಿಕ ವ್ಯಕ್ತಿಗಳಲ್ಲಿ ಬಳ್ಳಾರಿ ಪ್ರಾಂತದ ರಾಜನು ಒಬ್ಬನಾಗಿದ್ದಾನೆ. ಈ ಸಂರ್ಭದಲ್ಲಿ ಭಾಗವಹಿಸಿದ್ದ ರಾಜರುಗಳೆಲ್ಲ ಬಹುತೇಕ ವೀರಶೈವ ಧರ್ಮದ ಅನುಯಾಯಿಗಳೇ ಆಗಿದ್ದಾರೆ. ಬಳ್ಳಾರಿ ಪ್ರಾಂತದಿಂದ ಈ ಉತ್ಸವಕ್ಕೆ ಆಗಮಿಸಿದ್ದ ರಾಜನೆಂದರೆ ಬಳ್ಳಾರಿ, ಕುರುಗೋಡು, ತೆಕ್ಕಲಕೋಟೆಯ ವ್ಯಾಪ್ತಿಯಲ್ಲಿ ಕ್ರಿ.ಶ.೧೪೭೩ರಿಂದ ಕ್ರಿ.ಶ.೧೭೦೮ರವರೆಗೂ ಆಳ್ವಿಕೆ ನಡೆಸುತ್ತಿದ್ದ ಹಂಡೆ ಅರಸರ ದ್ಯಾವಪ್ಪ ನಾಯಕನೇ ಆಗಿದ್ದಾನೆ. ದ್ಯಾಮಪ್ಪನಾಯಕನ್ನು ಕವಿಯು ತನ್ನ ಕೃತಿಯಲ್ಲಿ 'ಶ್ರೀ ಸಿದ್ಧರಾಮೋ ಪ್ರಸಾದಾನುಗುಣೇ'[೨] ಎಂದು ಉಲ್ಲೇಖಿಸಿದ್ದಾನೆ. ಬಳ್ಳಾರಿ ಅರಸರಲ್ಲಿ ಸಾಂಸ್ಕೃತಿಕ ವ್ಯಕ್ತಿತ್ವ ಪಡೆದಿರುವ ದ್ಯಾಮಪ್ಪನಾಯಕನು ಗುಣಭಕ್ತಿಯುಳ್ಳವನೂ, ಅತ್ಯಂತ ಜನಪ್ರಿಯತೆಯನ್ನು ಪಡೆದವನೂ, ವೀರಶೈವ ಗುರುಗಳನ್ನು ಗೌರವಿಸುವ ಸಂಪ್ರದಾಯವುಳ್ಳವನೂ ಆಗಿದ್ದಾನೆ.

ಹಂಪೆಯಲ್ಲಿ ಒಂಬತ್ತು ದಿನಗಳ ಕಾಲ ನಡೆಯುವ ವಿರೂಪಾಕ್ಷ ವಸಂತೋತ್ಸವದಲ್ಲಿ ಭಾಗಿಯಾಗಲು ಬಳ್ಳಾರಿಯ ರಾಜ ಶ್ರೀ ಸಿದ್ಧರಾಮೇಶ್ವರನ ವರಪ್ರಸನ್ನರಾದ ಹಂಡೆ ಅರಸರು ಅರ್ಥಾತ್ ಇವರು ಸಿದ್ಧರಾಮೇಶ್ವರನ ಪರಮ ಭಕ್ತರು. ಈ ವಿರೂಪಾಕ್ಷ ವಸಂತೋತ್ಸವಕ್ಕೆ ಹಂಡೆ ಅರಸರು ಕಸ್ತೂರಿ, ಕರ್ಪೂರ, ಅಗರು, ಕುಂಕುಮ, ಸುಗಂಧಿಚಂದನಗಳನ್ನು ಅಂಗಗಳಿಗೆ ಲೇಪಿಸಿಕೊಂಡು ವಾರಾಂಗನೆಯರಿಂದ ಕೈಗಳಲ್ಲಿ ಅವರು ಹಿಡಿದಿರುವ ಚಾಮರವೆಂಬ

ಬೀಸಣಿಗೆಯಿಂದ ಬೀಸಲ್ಪಡುತ್ತಿರುವವನೂ, ಇಂತಹ ಅಭೂತಪೂರ್ವವಾದ ಗಳಿಗೆಯನ್ನು ಕಣ್ಣು ತುಂಬಿಕೊಳ್ಳಲು ಬಳ್ಳಾರಿ ನಗರಾಧೀಶ್ವರರು ಈ ರಥೋತ್ಸವದಲ್ಲಿ ಭಾಗಿಯಾಗಿರುವುದು ಎಂದು ತಿಳಿಯುತ್ತದೆ. ಈ ವಿರೂಪಾಕ್ಷ ರಥೋತ್ಸವದಲ್ಲಿ ಭಾಗಿಯಾದ ಇತರೆ ಅರಸರು ಮತ್ತು ರಾಜರುಗಳೆಂದರೆ ಮೈಸೂರು ಅರಸರು, ವಿದ್ಯಾನಗರದ ನರಪತಿರಾಜ, ಚಂದ್ರಗಿರಿ ಅರಸರು, ಕಾಶ್ಮೀರದ ಪ್ರಭುಗಳು, ಶಿರಸಿಯ ಒಡೆಯರು, ರಾಯದುರ್ಗದ ಪ್ರಭುಗಳು ಹಾಗೂ ಹರಿಹರದ ಒಡೆಯರು ಈ ಎಲ್ಲ ಅರಸರು ಉತ್ಸವದಲ್ಲಿ ಭಾಗಿಯಾಗುವುದರ ಮೂಲಕ ವಸಂತ ಋತುವಿನ ಒಂಬತ್ತು ದಿನಗಳ ನಡೆಯುವ ಸಾಂಸ್ಕೃತಿಕ ಚಟುವಟಿಕೆಯಲ್ಲಿ ಪಾಲ್ಗೊಂಡಿದ್ದ ವಿವರಗಳು ಕಂಡುಬರುತ್ತವೆ. ಹೀಗೆ ಸಾಂಸ್ಕೃತಿವಾದ ಕಾರ್ಯದಲ್ಲಿ ಭಾಗಿಯಾದ ಅರಸರು ವಿಜಯನಗರೋತ್ತರ ಕಾಲಕ್ಕೆ ಸ್ವತಂತ್ರವಾಗಿ ಆಳ್ವಿಕೆ ಮಾಡುವುದರ ಮೂಲಕ ಮತ್ತೊಮ್ಮೆ ವಿಜಯನಗರಕ್ಕೆ ಶ್ರೀರಕ್ಷೆಯಾಗಿ ನಿಂತವರು.

### ಗಂಗೆ-ಗೌರಿ ಸಂವಾದ

ಹಂಡೆ ಅರಸುಮನೆತನಕ್ಕೆ ಸಂಬಂಧಿಸಿದಂತೆ 'ಗಂಗೆ-ಗೌರಿ ಸಂವಾದ' ಎಂಬ ಕಾವ್ಯ ದೊರೆತಿದ್ದು, ಇದೊಂದು ಹಾಡುಗಬ್ಬ ಮತ್ತು ದ್ವಿಪದಿಯಲ್ಲಿ ರಚನೆಯಾಗಿರುವ ಕಾವ್ಯವಾಗಿದೆ. ಜನಪದ ಸಾಹಿತ್ಯದಲ್ಲಿ ಗಂಗೆ-ಗೌರಿ ಸಂವಾದವು ಹಲವಾರು ಪ್ರಕಾರಗಳಲ್ಲಿ ಕಂಡುಬಂದಿದೆ. ತ್ರಿಪದಿ, ಹಾಡು, ಕೋಲಾಟ, ದುಂದುವೆ, ಡೊಳ್ಳಿನಪದ ಹೀಗೆ ವಿವಿಧ ಮಜಲುಗಳಲ್ಲಿ ರೂಪ ತಾಳಿ ಬಂದಿರುವುದು ಈ ಕಥೆಯ ಹಂದರವಾಗಿದೆ. ಈ ಕಾವ್ಯವು ಸಂದರ್ಭಾನುಸಾರವಾಗಿ ಶ್ರುತಿ ವೇದಶಾಸ್ತ್ರಗಳಲ್ಲಿ, ಜನಪದ ಮಹಾಕಾವ್ಯಗಳಲ್ಲಿ, ಬ್ರಹ್ಮಾಂಡ ಪುರಾಣಗಳಲ್ಲಿ ಕಂಡುಬಂದಿದೆ. ಹೀಗಾಗಿ ಈ ಕಾವ್ಯವು ಪಂಡಿತಪಾಮರರೆಲ್ಲರಿಗೂ ಅಚ್ಚುಮೆಚ್ಚಿನದೆಂಬುದು ಸ್ಪಷ್ಟವಾಗುತ್ತದೆ. ಇದನ್ನು ರಚಿಸಿದವರು ಶಿವಗಂಗೆಯ ಹಿರಿಯ ಸಿಂಹಾಸನದ ವಿರಕ್ತಮಠದ ಗುರುಪರಂಪರೆಯ ಗುರು ಸಂಗಮೇಶ್ವರನ ಕರಕಮಲ ಸಂಜಾತ 'ತರುಳ ಚರಪತಿ'. ಈತನ ಕಾಲ ಕ್ರಿ.ಶ. ೧೭೦೦ ಎಂದು ಕವಿಚರಿತೆಕಾರ ಆರ್. ನರಸಿಂಹಾಚಾರ್ ಅವರ ಅಭಿಪ್ರಾಯವಾಗಿದೆ.[೩] ಕವಿ ಮತ್ತು ಕಾವ್ಯದ ರಚನೆಯ ಕಾಲಮಾನವು ೧೭ನೆಯ ಶತಮಾನ ಹಾಗೂ ಹಂಡೆ ಮಲ್ಕಪ್ಪನಾಯಕನ ಕಾಲಮಾನವು ಕ್ರಿ.ಶ.೧೭೪೦ ಆಗಿರುವುದು. ಈತನು ಬಳ್ಳಾರಿ, ಅನಂತಪುರ, ಕುಂದರ್ಪಿ ಭಾಗಗಳಲ್ಲಿ ಆಳ್ವಿಕೆ ನಡೆಸಿದ ಮಾಹಿತಿ ಸಿಗುತ್ತದೆ. ಈತನು ಶಿವನ ಆರಾಧಕನಾಗಿದ್ದು ತನ್ನ ಆಸ್ಥಾನದಲ್ಲಿ ಶರಣರಿಗೆ ದಾಸೋಹದ ಕಾರ್ಯಗಳನ್ನು ನಡೆಸುತ್ತಿದ್ದನು. ಕೈಲಾಸಯಾತ್ರಿಗಳಿಗೆ ಧನಸಹಾಯ ಹಾಗೂ ಆಶ್ರಯವನ್ನು ನೀಡುತ್ತಿದ್ದನು. ಈ ದೃಷ್ಟಿಯಿಂದ ಹಂಡೆ ಮಲ್ಕಪ್ಪನಾಯಕನ ನಿಷ್ಠೆ ಮತ್ತು ಸ್ನೇಹಪರತೆಯನ್ನು ಕಂಡು ಈತನನ್ನು ಕುರಿತು ಶಿವನಿಗೆ ಸಮೀಕರಿಸಿ ಈ

ಕಾವ್ಯದಲ್ಲಿ ಉಲ್ಲೇಖಿಸಿರುವುದು ಕಂಡುಬರುತ್ತದೆ. ಕವಿಗೆ ಕೆಲಕಾಲ ಹಂಡೆ ಮಲಕಪ್ಪನಾಯಕನ ಆಸ್ಥಾನದಲ್ಲಿ ಅವಕಾಶ ದೊರೆತಿರಬೇಕು. 'ಹಂಡೆ ಮಲುಕ ಉಂಡ ಮನೆಗೆ ಎರಡ ಬಗೆಯ' ಎಂಬ ಒಕ್ಕಣಿಕೆಯನ್ನು ಇರಿಸಿಕೊಂಡಿದ್ದಾನೆ. ಈ ಮೂಲಕ ಹಂಡೆ ಮನೆತನದ ಮಲಕಪ್ಪನಾಯಕನ ಬಗ್ಗೆ ಮತ್ತು ಅವನ ವ್ಯಕ್ತಿತ್ವವನ್ನು ನಿರೂಪಿಸುವಲ್ಲಿ ಗಂಗೆ-ಗೌರಿ ಸಂವಾದವು ಬೆದಂಡೆ ರೂಪದಲ್ಲಿ ಬರುವ ಪದ್ಯವಾಗಿದೆ. ತರುಳ ಚರಪತಿಯ ಗಂಗೆ-ಗೌರಿ ಸಂವಾದವು ನಾಲ್ಕನೇ ಭಾಗದಲ್ಲಿ ಬರುವ ಪದ್ಯದ ಸಂಖ್ಯೆ ೨೭ರಲ್ಲಿ ಕಂಡುಬರುವಂತೆ ಹಂಡೆ ಅರಸುಮನೆತನದ ನಾಯಕನನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

"ಹಂಡೆಮಲುಕನೊಡೆಯ ಕೇಳು ಎಲೆ ತಂಗಿ, ಆತ
ಉಂಡ ಮನೆಗೆ ಎರಡ ಬಗೆಯನೆಲೆ ತಂಗಿ
ಉಂಡು ನಾವು ಸುಖದೊಳಲೆ ತಂಗಿ! ಶಿವನ
ಕೊಂಡಾಡುವ ಜಗಳ ಬೇಡ ಎಲೆ ತಂಗಿ"[೪]

ಹಂಡೆ ಮಲ್ಕಪ್ಪನಾಯಕನ ಕುರಿತಾದ ಈ ಕಾವ್ಯವು ಶಿವನ ಸತಿಯರಾದ ಗಂಗೆ ಮತ್ತು ಗೌರಿಯರ ನಡುವಿನ ಕಲಹದ ಹಿನ್ನೆಲೆಯಲ್ಲಿ ಮೂಡಿಬಂದಿದೆ. ಗಂಗೆ-ಗೌರಿ ವಾಗ್ವಾದದ ಹಿನ್ನೆಲೆಯಲ್ಲಿ ಕಂಡುಬರುವ ಕಾವ್ಯವು ಶಿವನನ್ನು ವರಿಸಿಕೊಳ್ಳುವ ಪ್ರಯತ್ನದ ಪ್ರತೀಕವಾಗಿಯೂ ಕಂಡುಬರುತ್ತದೆ. ಹಂಡೆ ಅರಸರ ಪ್ರಮುಖನಾದ ಮಲ್ಕಪ್ಪನಾಯಕನ ನಿಷ್ಠೆ ಮತ್ತು ವ್ಯಕ್ತಿತ್ವವನ್ನು ಕುರಿತು ಕಾವ್ಯದಲ್ಲಿ ಚರ್ಚಿಸಲಾಗಿದೆ. ಹಂಡೆ ಮಲ್ಕಪ್ಪನಾಯಕನು ಅತ್ಯಂತ ನಿಷ್ಠೆಯ ಶಿವಭಕ್ತನಿದ್ದಂತೆ ತೋರುತ್ತದೆ. ಕಾವ್ಯದಲ್ಲಿ ಶಿವನು ಗಂಗೆಯನ್ನು ಮದುವೆಯಾಗಿ ಬರುತ್ತಿರುವ ಸುದ್ದಿ ಕೇಳಿದ ಗೌರಿ "ಹಂಡೆ ಮಲಕನೊಡೆಯ ಕೇಳು ಎಲೆ ಎಲೆ ತಂಗಿ! ಆತ ಉಂಡ ಮನೆಗೆ ಎರಡು ಬಗೆಯನೆಲೆ ತಂಗಿ!"[೫] ಎಂಬ ಉದ್ಗಾರದ ಮಾತುಗಳಲ್ಲಿ ಶಿವನ ಏಕಪತ್ನಿ ನಿಷ್ಠೆ ಜೊತೆಗೆ ಮಲ್ಕಪ್ಪನಾಯಕನು ನಿಷ್ಠೆಯುಳ್ಳ ಶಿವಭಕ್ತನೆಂಬುದು ತಿಳಿದುಬರುತ್ತದೆ. ಪ್ರಾಯಶಃ ಶಿವಭಕ್ತನಾದ ಈತನ ಆಶ್ರಯದಲ್ಲಿ ಶಿವಸ್ತುತಿ ಪರವಾದ ಈ ಕೃತಿ ರಚನೆಯಾಗಿರಬೇಕು ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಇನ್ನೂ ತರುಳ ಚರಪತಿ ಕವಿಯು ಗಂಗೆ-ಗೌರಿ ಸಂವಾದ ಕಾವ್ಯದ ಸಾರವನ್ನು ಒಂದೇ ಪದ್ಯದಲ್ಲಿ ಕಟ್ಟಿಕೊಟ್ಟಿದ್ದಾನೆ.

ಅಂಬರದ ಗಂಗೆಯನು ಬೊಂಬೆರೂಪನೆ ಮಾಡಿ
ಅಂಬಿಗ ಶರಣನಾತ್ಮಜಳೆದೆನಿಸುವೆ
ಕುಂಭಿನಿಗೆ ಚೋದ್ಯವೆನಿಸುವ ಸಿವಗಂಗೆಯನು
ಹಂಬಲಿಸಿ ತಂದ ಹರುಷಾಬ್ಧಿ ಕಥೆಯ!

ಆಕಾಶ ಗಂಗೆಯನು ಏಕರೂಪನೆ ಮಾಡಿ
ಸಂಕಾರ ರತ್ನಗಿರಿಯೊಳಿರಿಸುತ
ಓಂಕಾರ ರೂಪ ಶಿವ ಜೋಗಿರೂಪನೆ ತಾಳಿ
ಬೇಕೆಂದು ತಂದ ಶ್ರೀ ಗಂಗೆ ಕಥೆಯ!!

ಕೈಲಾಸದಲ್ಲಿ ಒಡ್ಡೋಲಗ ನೆರೆದಿದೆ. ಶಿವನು ಸಭೆಯ ಮಧ್ಯದಲ್ಲಿ ವಿರಾಜ ಮಾನನಾಗಿದ್ದಾನೆ. ಅವನ ತೊಡೆಯ ಮೇಲೆ ಗೌರಿ ಮಂಡಿಸಿದ್ದಾಳೆ. ದೇವಾನುದೇವತೆಗಳಿಂದ ಸಭೆಯು ಕಿಕ್ಕಿರಿದು ತುಂಬಿದೆ. ಸಭೆಯ ಕಾರ್ಯಕಲಾಪಗಳು ನಿತ್ಯದಂತೆ ನಡೆಯುತ್ತವೆ. ಶಿವನಿಗೆ ಒಮ್ಮಿಂದೊಂಮ್ಮೆಲೆ ಏನೋ, ಯಾವುದೋ ನೆನಪಾಗುತ್ತದೆ. ಗಿರಿಜಗೆ ಮಕ್ಕಳಾಗಲಿಲ್ಲವೆಂದು ಮರುಗಿ ಅವಳನ್ನು ಅರಮನೆಗೆ ಕಳಿಸುವನು. ಮಕ್ಕಳಾಗುವುದು ಹೇಗೆ? ಮತ್ತೊಬ್ಬ ಮಡದಿಯನ್ನು ತಂದರೆ ಆ ಕೊರತೆ ಪೂರೈಸಬಹುದೆಂದು ಯೋಚಿಸುವನು. ಕೂಡಲೇ ಸಭೆಯನ್ನು ವಿಸರ್ಜಿಸಿ, ಅಲ್ಲಿಂದ ತ್ರಿಲೋಕ ಸಂಚಾರ ಕೈಗೊಳ್ಳುವನು. ಹೀಗೆ ಗಂಗೆಗೌರಿ ಸಂವಾದ ಕಾವ್ಯವು ಶಿವ ಮತ್ತು ಗಂಗೆಗೌರಿಯವರ ಪ್ರಸಂಗಗಳು ಅನೇಕ ಉಪಕಥೆಗಳಾಗಿ ಕಾಣಿಸಿಕೊಂಡಿವೆ. ಈ ಕಾವ್ಯವು ವೈವಿಧ್ಯತೆಯನ್ನು ಕಂಡುಕೊಳ್ಳಲು ಕವಿಯು ಒಂದೇ ಒಂದು ಪದ್ಯದ ಭಾಗದಲ್ಲಿ ಈ ಕಾವ್ಯದ ಹಂದರವನ್ನು ಹೆಣೆದಿದ್ದಾನೆ. ಒಟ್ಟಾರೆಯಾಗಿ ಗಂಗೆ–ಗೌರಿ ಕಾವ್ಯವು ಅಧ್ಯಯನಕ್ಕೆ ಪೂರಕವಾಗಿದ್ದು, ಹಂಡೆ ಮಲ್ಕಪ್ಪನಾಯಕನ ಕುರಿತು ನೆನಪಿಸುವುದು ಕಂಡುಬರುತ್ತದೆ.

**ಭಟಾಂಗಿನಿ ಸಾಹಿತ್ಯ**

ಕನ್ನಡ ಸಾಹಿತ್ಯ ಪ್ರಕಾರಕ್ಕೆ ಭಟಾಂಗಿನಿ ಸಾಹಿತ್ಯವೆಂಬುದು ಹೊಸ ಪ್ರಕಾರವಾಗಿದೆ. ಆದರೆ ಭಟಾಂಗಿನಿ ಸಾಹಿತ್ಯದ ರೂಪವು ಪ್ರಾಚೀನ ಸಾಹಿತ್ಯದಲ್ಲಿ ಹೊಗಳಿಕೆ--ಸ್ತುತಿ ಭಾಗಗಳಾಗಿ ಕಾಣಿಸುತ್ತವೆ. ಹಲ್ಮಿಡಿ ಶಾಸನ (ನರಿದಾವಿಳೆನಾಡಿನ ಅಧಿಕಾರಿಗಳಾದ ಮೃಗೇಶ ಮತ್ತು ನಾಗರ ಎಂಬ ಹೊಗಳಿಕೆಯಿದೆ). ಗುಣಮಧುರನ ತಮಟಕಲ್ಲು ಶಾಸನವು(ಕನ್ನಡದ ಪ್ರಥಮ ಪೂರ್ಣ ಹೊಗಳಿಕೆ ಶಾಸನ) ಬಾದಾಮಿ ಶಾಸನವು(ಹೊಗಳು ಶಾಸನಕ್ಕೆ ಅತ್ಯುತ್ತಮವಾದದ್ದು) ಹಾಗೂ ಕಪ್ಪೆ ಅರಭಟ್ಟನೆಂಬುವವನನ್ನು ಹೊಗಳುವ ಈ ಶಾಸನವೂ ಕನ್ನಡದ ಮೊದಲ ತ್ರಿಪದಿ ಪ್ರಯೋಗದ ಶಾಸನವು ಹೌದು. ಹೀಗಾಗಿ ಕನ್ನಡ ಸಾಹಿತ್ಯದಲ್ಲಿ ಹೊಗಳಿಕೆಯ ಸಾಹಿತ್ಯಕ್ಕೆ ಸುದೀರ್ಘವಾದ ಇತಿಹಾಸವಿದೆ. ಈ ಸಾಲಿಗೆ ಸೇರುವ ಮತ್ತೊಂದು ಕಾವ್ಯವೆಂದರೆ 'ಭಟಾಂಗಿನಿ ಸಾಹಿತ್ಯ'. ಸಂಪಾದಕರೇ ಹೇಳುವಂತೆ ಹಂಡೆ ಅರಸನಾದ ಚಿಕ್ಕಮಲಕಪ್ಪನಾಯಕನನ್ನು ಅನೇಕ ವಿಧಗಳಲ್ಲಿ ಹೊಗಳಿರುವ ಈ ಕೃತಿಯು ಕಂದ, ವೃತ್ತ ಮತ್ತು ಗದ್ಯಗಳಿಂದ ಕೂಡಿದ ಕಾವ್ಯವಾಗಿದೆ.

ಈ ಕಾವ್ಯದ ಕುರಿತಾಗಿ "ಕರ್ನಾಟಕ ಕೈಫಿಯತ್ತು" ಕೃತಿಯಲ್ಲಿ ಬರುವ 'ಕುರುಗೋಡು ಕೈಫಿಯತ್ತಿ'ನಲ್ಲಿ ಹಂಡೆ ಅರಸರ ಪ್ರಮುಖನಾದ ಚಿಕ್ಕಮಲ್ಲಪ್ಪ ನಾಯಕನ ಕುರಿತಾದ ಹೊಗಳಿಕೆ ಕಾವ್ಯವಾದ ಭಟಾಂಗಿನಿ ಸಾಹಿತ್ಯದ ಉಲ್ಲೇಖವನ್ನು ಕಾಣಬಹುದು.[೬] ಕಾವ್ಯದ ಉದ್ದಕ್ಕೂ ಚಿಕ್ಕಮಲ್ಲಪ್ಪನಾಯಕನನ್ನು ಹೊಗಳಿದ ವಿವರವನ್ನು ನೋಡಬಹುದು.

ವೈಭವ ಸಿದ್ಧರಾಮೇಶ ಪಾದಪದ್ಮ ಕಾಮರಸ ಭೃಂಗ ಅಪ್ರಮಾನಮರ್ಧನ ಸಮರ ವಿಜಯ ಜಯಸಾರ್ವಭೌಮ ಸ್ವಾಮಿ ಹಂಡೆಯದೇವ ಭೂಪಾಲಾ(ಲ) ಕುಲರತ್ನ ಸಾಮಭೇದ–ಸದ್ಗುಣೋಪಾಯ ಚಾರುರತ ಕಾಮಿತಾರ್ಥವ ಕೊಡು ಕವಿಜನದ ಕಲ್ಪತರು ದೀರ್ಘಾಯುರಸ್ತು ಸಂತತಂ[೭]

ಮೊದಲಿಗೆ ವೈಭವವನ್ನು ಹೊಂದಿದ ಶ್ರೀ ಸಿದ್ಧರಾಮೇಶನ ಪಾದಪದ್ಮಗಳೆಂಬ ಕಮಲಗಳಲ್ಲಿ ಸಂಚರಿಸುವ ದುಂಬಿಯಂತಿರುವವನು, ಯಾರಿಂದಲೂ ಸೋಲಿಸಲಾಗದವನು, ವಿಜಯಿಯಾದ ವನು, ಜಯಸಾರ್ವಭೌಮನಾದ ಸ್ವಾಮಿ ಹಂಡೆಯ ದೇವರಾಜನು ಕುಲದಲ್ಲಿ ಶ್ರೇಷ್ಠ ರತ್ನನೆನಿಸಿದ್ದಾನೆ. ಆತನು ಸಾಮ, ಭೇದ ಮುಂತಾದ ಚತುರೋಪಾಯಗಳನ್ನು ಬಲ್ಲವನಾಗಿದ್ದು ಎಲ್ಲ ರೀತಿಯಲ್ಲಿ ಕೇಳಿದವರಿಗೆ ಕೇಳಿದುದನ್ನು ಕೊಡಬಲ್ಲವನಾಗಿದ್ದಾನೆ. ಆತನಿಗೆ ಯಾವಾಗಲೂ ಸಿದ್ಧರಾಮೇಶನು ದೀರ್ಘಾಯುವನ್ನು ನೀಡಲಿ ಎಂದು ಕವಿ ಪ್ರಾರ್ಥಿಸಿದ್ದಾನೆ.

ಧರೆಗೆ ಧರ್ಮಜನು ಅಂಕುಶ
ಪರ ಬಲದೊಳೆ(ಳ್) ಭೀಮದೇವಾರ್ಜುನರಾಮನೂ
ದುರಧೀರನುನಕುಲ ಮಲ್ಕನು
ನರೆಗೆಲೆ ಸಹದೇವಾ ಚಿಕ್ಕಮಲ್ಕ ವಜೀರಾ[೮]

ಹಂಡೆ ವಂಶದ ಚಿಕ್ಕಮಲ್ಕವಜೀರನನ್ನು "ಧರ್ಮರಾಯನಂತಿದ್ದಾನ, ಭಯಂಕರ ಶೂರ, ಆನೆಗಳನ್ನು ಪಳಗಿಸುವ ಅಂಕುಶದಂತೆ, ವೈರಿಗಳನ್ನು ಪಳಗಿಸುವ ಅಂಕುಶವನ್ನು ಹಿಡಿದಿರುವ ಈತನು ಬಲದಲ್ಲಿ ಭೀಮದೇವ, ಅರ್ಜುನ, ರಾಮನಂತೆ ಪರಾಕ್ರಮವನ್ನು ಉಳ್ಳವನಾಗಿದ್ದಾನೆ" ಎಂದು ಪುರಾಣದ ಪಾತ್ರಗಳಿಗೆ ಹೋಲಿಸಿ ಬಣ್ಣಿಸಿರುವುದು ಕಾಣಬಹುದು.

ನಿಗಳದ ಬೆಂಬೆಮೇ ಕುಸಲೆ ನಿನ್ನಯ ತೇಜದ ಬಾಯಹಳಿದೆಯಾ
ಬಗೆಬಗೆವರ್ಣಡಾ(ದಾಂ ಭಾರಿ ಪುರುಂದನನರ್ಜಿ ಗುಡಾರಿ ಹಂಡೆಯಾ
ಜಗದಿ ಬಿರುದಾಂಕಧೀರ ಬಹುಚಲ್ವಶಿಖಾಮಣಿ ಹನುಮನಾಯಕನ
ಸುಗುಣ ಕುಮಾರ ಬಾಳು ರಣ ಶೂರನುಮಲ್ಕಧರಾದಿನಾಯಕಾ(ಕ)[೯]

ಶೂರ ಮಲ್ಕನು ಧರೆಗೆ ಅಧಿನಾಯಕನಾಗಿದ್ದಾನೆ. ಬಗೆಬಗೆಯ ಬಣ್ಣದ ಮುತ್ತು ರತ್ನಗಳ, ವಜ್ರಗಳು ಮುಂತಾದ ಧನ-ಕನಕಗಳಿಂದ ತುಂಬಿದ ಹಂಡೆಯ ಮಲ್ಕನು ಜಗತ್ತಿಗೆ ಬಿರುದಿನ ಅಂಕಧೀರ(ಯೋಧ)ನೆನಿಸಿದ್ದಾನೆ. ಅತ್ಯಂತ ಚೆಲುವರಲ್ಲಿ ಚೆಲುವನಾಗಿದ್ದನು, ಶಿಖಾಮಣಿ(ಶ್ರೇಷ್ಠರಲ್ಲಿ ಶ್ರೇಷ್ಠ)ಯಾಗಿದ್ದನು. ಚಿಕ್ಕಮಲ್ಕನು ಉತ್ತಮ ಗುಣಗಳನ್ನು ಹೊಂದಿರುವ ಈತನು ಹನುಮಪ್ಪ ನಾಯಕನ ಪ್ರೀತಿಯ ಪುತ್ರನಾಗಿದ್ದನು ಎಂದು ತಿಳಿಸುತ್ತದೆ.

> ಮದವೆರ್ಧ ವೈರಿಗಂಕುಶ
> ಕದನದೊಳ್ ಶತ್ರುಗಳ ಗಜಗಂಕುಶ ಹದೂರಭೂ
> ಭುಜರಿಗೆ ಅಂಕುಶ ಮದಕರಿಮಸ್ತಕೆ
> ಅಂಕುಶವು ಹಂಡೆ ಅಂಕುಶರಾಮಾ[೧೦]

ಚಿಕ್ಕಮಲ್ಕಪ್ಪನಾಯಕನ ಶೌರ್ಯ ಪರಾಕ್ರಮವನ್ನು ಹೊಗಳುವ ಈ ಪದ್ಯವು ವೈರಿಗಳಿಗೆ ಅಂಕುಶರಾಮನು ಅಂಕುಶದಂತಿದ್ದಾನೆ. ವೈರಿಗಳಿಗೆ ವೈರಿಯಾಗಿ, ಸಾಮಂತ ನಾಯಕರಿಗೆ ಸಾಮಂತ ನಾಯಕನಾಗಿ ಪ್ರೀತಿಯಿಂದ ಕಂಡವನು. ವೈರಿಗಳಿಗೆ ಮದವೆದ್ದ ಆನೆಗಳ ಮಸ್ತಕಕ್ಕೆ(ತಲೆಗೆ) ಅಂಕುಶದ ರೀತಿಯಲ್ಲಿ ಹಂಡೆ ಅಂಕುಶರಾಮನಿದ್ದಾನೆ ಎಂದು ಪದ್ಯಭಾಗದಿಂದ ತಿಳಿಯುತ್ತದೆ.

> ಮಡ(ದ)ತನದಿಂದ ಹಳದಿಯನೂ
> ಕಡಾಯಕೆ ಹಾಕಿ ಬಂದ
> ಕಡುಕೆಲು ಗಾಣ್ಯದಿ ಆದಡಿ ಸಲಾಬದ ಖಾನನ
> ಬಡಿ ಮೊದಲಾಗಿ ಶಳಕ(ಕೊ)ಂಡೆ
> ಪ್ರೇಮಾ ಹಂಡೆಯದೇವಾ[೧೧]

"ನಿಜಾಮ ಅರಸನು ಸಾಮಂತ ಅರಸರ ಶೌರ್ಯ ಸಾಹಸಗಳನ್ನು ಮೆಚ್ಚಿ ನೀಡುವ ಹಳದಿ ಪತಾಕೆಯ ಗೌರವದ ಧ್ವಜವನ್ನು ಧಿಕ್ಕರಿಸಿ ಅದನ್ನು ಎಣ್ಣೆಯ ಬಾಂಡಲಿಗೆ ಹಾಕಿದನು. ಹಂಡೆಯ ದೇವನು ಸೊಲಾಬತ್ ಖಾನನ ಸೈನ್ಯವನ್ನು ನಾಶ ಮಾಡಿದವನು ಹಂಡೆಯ ದೇವನಾದ ಚಿಕ್ಕಮಲ್ಕನು" ಎಂದು ಹಂಡೆ ಅರಸರ ಶೌರ್ಯ ಪರಾಕ್ರಮವನ್ನು ತಿಳಿಸುತ್ತದೆ.

> ಗರುಬುತ ಸೊಲಾಬತ ಖಾನನ
> ನೆರೆ ಹಳದಿಯಾ ಸುರಸುರವಿ ಬಸಿದಲಿ ಹಾಕಿ ಸೀಟಿಸುತ
> ಹೊಗಲು ಕರಿತುರಗ ಕೈಶೆರೆ
> ಬಿರಿದೆನಿಸಿದೆ ಹಂಡೆಯ ದೇವ ಪರಬಲಬೀಮಾ[೧೨]

ಪರಾಕ್ರಮಿಯಾದ ಹಂಡೆ ಚಿಕ್ಕಮಲ್ಲಪ್ಪ ನಾಯಕನು ಮುಸ್ಲಿಂ ಅರಸನಾದ ಸೋಲಾಬತ್ ಖಾನನನ್ನು ಸೋಲಿಸಿ ಅವನ ಮೇಲೆ ವಿಜಯ ಸಾಧಿಸಿರುವ ಸಂಗತಿ ಮೇಲಿಂದ ಮೇಲೆ ಉಲ್ಲೇಖಿಸಿ ವರ್ಣಿಸಿರುವುದು ಕಂಡುಬರುತ್ತದೆ. ಬಹುಮುಖ್ಯವಾಗಿ ನಿಜಾಂ ಅರಸರನ್ನು ತನ್ನ ಶೌರ್ಯ, ಸಾಹಸಗಳಿಂದ ಮೆಚ್ಚಿಸಿ ಅವರು ಪ್ರೀತಿಯಿಂದ ಸಾಮಂತರಿಗೆ ನೀಡುವ ಹಳದಿ ಬಣ್ಣದ ಧ್ವಜವನ್ನು ಗೌರವದ ಸಂಕೇತವಾಗಿ ಪಡೆದಿದ್ದನು. ಇದರಿಂದಾಗಿ ದೆಹಲಿ, ದೌಲತಾಬಾದ್, ವಿಜಯಪುರ ಮುಂತಾದ ರಾಜರು ಕಾಶಿ ಕ್ಷೇತ್ರದಿಂದ ಹಿಡಿದು ಪರಂಗಿ ಪಠಾಣ ರಾಷ್ಟ್ರದಲ್ಲಿ ಇರುವ ಎಲ್ಲರೂ ಈತನ ಪ್ರತಾಪವನ್ನು ಹೊಗಳಿ, ಮೆಚ್ಚಿಕೊಂಡಿದ್ದಾರೆಂದು ಮೇಲಿನ ಪದ್ಯದ ವಿವರಣೆಯನ್ನು ಕಾಣಬಹುದು

> ಸುರ ಭಾವಿಂದರೆ ಚಾಪಮಾಗಲು
> ಉರುಗೇಂದ್ರರಾ ಮೌ ನೀನಾ ಕುಮುದ ಕಿಲ್ಲಾಗಲೂ ಮಿಂದು
> ಧರ ಸರ್ವರಗೆಲ್ದಾ ಮಹಾದೇವ ಶಂ
> ಕರನಿವಂ ಶಿಸುಗಾನಿಗಂ ವಿಜಯ ಲಕ್ಷ್ಮೀ ಸ್ತುತಿಸಲೈಶ್ವರ್ಯಂ[೧೩]

ದೇವತೆಗಳೆಲ್ಲರೂ ನಿನ್ನ ಬಿಲ್ಲಾದರು ಭೂಮಿಯನ್ನು ಆಳುವ ಅರಸರೆಲ್ಲರಿಗೂ ನೀನು ಕಮಲವಿದ್ದಂತೆ, ಚಂದ್ರನನ್ನು ಧರಿಸಿದ ಸಾಕ್ಷಾತ್ ಶಿವನಿದ್ದಂತೆ, ಎಲ್ಲರನ್ನೂ ಗೆದ್ದಿರುವ ಆ ಮಹಾದೇವ ಶಂಕರನೇ ನೀನು ಎಂದು ವರ್ಣಿಸಿದ್ದಾನೆ.

> ವಜ್ರದ ಭಾಸಿಂಗವ ಕಟ್ಟಿ ಮಜರೆ
> ಮಜವೆದ್ದ ಮನ್ಯರ ಮಭಾಸರ ಮೇಲೆ
> ಘರ್ಜಿಸಿ ಪಡಗಿದರಾಂತೆನೊ ರಣ
> ಸರ್ಜನಿವ ಹಂಡೆಯಾ ರಾಮಾ ಪರಬಲಭೀಮಾ[೧೪]

ವಜ್ರಗಳಿಂದ ಅಲಂಕೃತಗೊಂಡ ಬಾಸಿಂಗವನ್ನು ಹಣೆಗೆ ಕಟ್ಟಿಕೊಂಡು ಸೊಕ್ಕಿನಿಂದ ಮೆರೆಯುತ್ತಿರುವ ಸಾಮಂತ ವೀರರ ಮೇಲೆ ಘರ್ಜಿಸುವವನು ನೀನು. ನಿನ್ನ ಘರ್ಜನೆಯಿಂದ ಅವರನ್ನು ಅಡಗುವಂತೆ ಮಾಡಿರುವೆ. ರಣಭೂಮಿಯಲ್ಲಿ ಅಪರಿಮಿತ ಶೌರ್ಯವನ್ನು ಹೊಂದಿರುವ ಬಲಿಷ್ಠನಾದ ಹಂಡೆಯ ರಾಮ ವೈರಿಗಳ ಬಲಕ್ಕೆ ನೀನು ಭೀಮನಂತಿರುವೆ.

> ತಾರೆಗಳು ಲಕ್ಷವಿದ್ದರೆ
> ತೋರುವದೇ ತೇಜ ಚಂದ್ರಮನಬ್ಬಿಂಗಲ್ಲದೆ
> ನೂರಾರು ಕುಮಾರಿರಿದ್ದರ್‍ಯಾತಕೆ ರಣ
> ಧೀರನೂ ಅಂಕುಶನ ತನುಜರಾಮಾ ರಣಸರ್ಜಾ[೧೫]

ಗಗನದಲ್ಲಿ ನಕ್ಷತ್ರಗಳು ಲಕ್ಷಲಕ್ಷವಿದ್ದರೆ ಏನೂ ಉಪಯೋಗವಿಲ್ಲ. ಅವುಗಳೆಲ್ಲವೂ ಬೆಳಕನ್ನು ನೀಡುವುದಿಲ್ಲ. ಆದರೆ ಅವುಗಳ ನಡುವೆ ಚಂದ್ರನು ಮಾತ್ರ ಬೆಳಕನ್ನು ನೀಡುವುದರ ಮೂಲಕ ಶೋಭಿಸುತ್ತಾನೆ. ಸಮುದ್ರ ಉಕ್ಕೇರುವುದಕ್ಕೆ ಲಕ್ಷಲಕ್ಷ ತಾರೆಗಳು ಸಹಕಾರಿಯಾಗುವುದಿಲ್ಲ. ಆದರೆ ಹುಣ್ಣಿಮೆಯ ಚಂದಿರ ಮಾತ್ರ ಅದನ್ನು ಉಕ್ಕೇರುವಂತೆ ಮಾಡುತ್ತಾನೆ. ಅಂತೆಯೇ ಒಬ್ಬ ತಂದೆ ಧೀರರಲ್ಲದ ನೂರಾರು ಮಕ್ಕಳಿರುವುದು ದೊಡ್ಡಸ್ತಿಕೆಯಲ್ಲ. ಅವರಲ್ಲಿ ಶೂರನಾದವನು ಒಬ್ಬನಿದ್ದರೂ ಸಾಕು. ಹನುಮಪ್ಪನಾಯಕನ ಮಗನಾದ ನೀನೂ ಸಹ ಯುದ್ಧದಲ್ಲಿ ಶೂರನೇ ಆಗಿರುವೆ ಎಂದಿರುವ ಕವಿಯ ಮಾತುಗಳು ಕಾವ್ಯಾತ್ಮಕ ಶೈಲಿಗೆ ಮಾದರಿಯಾಗಿವೆ.

ಧಾರುಣಿಯೊಳು ಹಂಡೆಕುಲ। ಪಾವನ ನಿನ್ನಯಾ ಕೀರ್ತಿ ಕಾಂತೆಯು।
ಕೇರಳ ಗುಜ್ಜರಾಂಕೆಯು। ಕಡುತೆಂಕಣ ಚೋಳ ಪದಾಬ್ಜನ್ನೈ।
ವೀರಲಲಾಟ ವಿಶೇಷ ರಾಜ್ಯದೊಳ್ ಸುವರ್ಣದಿಂದೆ ಬಂದು।
ಸೆಲೆ ಚೆಲ್ವನು ವಜೀರನು। ಹಂಡೆಮಾದೇವ ಭೂಪರಾ[೧೬]

ಈ ಭೂಮಿಯಲ್ಲಿ ನೀನು ಸಂಪಾದಿಸಿದ ಕೀರ್ತಿಯೆಂಬ ಕನ್ನಿಕೆಯ ಹೆಸರಿನಿಂದ ಹಂಡೆಕುಲವು ಪಾವನವಾಯಿತು. ಕೇರಳರಾಜ್ಯ, ಗುರ್ಜರದೇಶ, ತೆಂಕಣರಾಜ್ಯ, ಚೋಳರಾಜ್ಯದ ದೊರೆಗಳು ನಿನ್ನ ಪಾದತಲಕ್ಕೆ ತಮ್ಮ ಅಭಿನಂದನೆಯನ್ನು ಸಲ್ಲಿಸುವರು. ಆ ಮಟ್ಟದ ಕೀರ್ತಿ ನಿನ್ನದಾಗಿದೆ. ವೀರನಾದ ನಿನಗೆ ಆ ದೊರೆಗಳು ಬಂಗಾರದ ಕಾಣಿಕೆಗಳನ್ನು ನೀಡುತ್ತಾರೆ. ನೀನು ಯಾವಾಗಲೂ ಚೆಲುವಿನಿಂದ ಕೂಡಿರುವ ವಜೀರನಾಗಿರುವೆ. ಹಂಡೆಯ ಮಹದೇವನೇ ನಿನಗೆ ಬಹುಪರಾಕ್, ಬಹುಪರಾಕ್ ಎಂದು ಬಣ್ಣಿಸಿದ್ದಾರೆ.

ಒಟ್ಟಾರೆಯಾಗಿ ಭಟಾಂಗಿನಿ ಕಾವ್ಯದ ಒಟ್ಟು ವಸ್ತುವಿನ ಕೇಂದ್ರ ಬಿಂದು ಹಂಡೆ ಅರಸ ಚಿಕ್ಕಮಲ್ಲನಾಯಕ. ಅತ್ಯಂತ ಪರಾಕ್ರಮಶಾಲಿಯಾದ ಈತನನ್ನು ಅನೇಕ ಗುಣಗಳಿಂದ ಹೊಗಳಿರುವ ಕಾವ್ಯವಿದು. ಭಟಾಂಗಿನಿ ಸಾಹಿತ್ಯವು ರಾಜರು ಕೊಡುವ ಭೂಮಿ, ಬಂಗಾರ ವಸ್ತ್ರಗಳನ್ನು ಪಡೆದು ಅವರನ್ನು ಹೊಗಳಿ ಬರೆದ ಸಾಹಿತ್ಯವೆಂದು ಕಡೆಗಣ್ಣಿನಿಂದ ನೋಡಬೇಕಾಗದ ಅಗತ್ಯವಿಲ್ಲ. ಮುಖ್ಯವಾಗಿ ಚಿಕ್ಕಮಲ್ಕಪ್ಪನಾಯಕನಿಗೆ ಕವಿಯು ಪ್ರೀತಿಯಿಂದ ಹೊಗಳಿಕೆಯ ಸ್ತುತಿಗಳ ಮೂಲಕ ಆತನ ಕರ್ತವ್ಯ ನಿಷ್ಠೆ, ಸಾಹಸ ಹಾಗೂ ಗುಣಸ್ವಭಾವಗಳನ್ನು ಕುರಿತು ಸ್ಮರಿಸಿರುವುದು ಕಂಡುಬರುತ್ತದೆ. ಹೀಗಾಗಿ ಚಿಕ್ಕಮಲ್ಲಪ್ಪನಾಯಕನ ಹೊಗಳಿಗೆ ಪ್ರಧಾನವಾದ ಕೆಲವೊಂದು ಪದ್ಯಗಳನ್ನು ಅಧ್ಯಯನದ ಅನುಕೂಲತೆಗಾಗಿ ವಿಶ್ಲೇಷಿಸಲಾಗಿದೆ.

'ಗಂಗೆ-ಗೌರಿ' ಮತ್ತು 'ಭಟಾಂಗಿನಿ' ಈ ಎರಡು ಕಾವ್ಯಗಳನ್ನು ಗಮನಿಸಿದರೆ ಹಂಡೆ ಮಲ್ಲಪ್ಪನಾಯಕನ ಕುರಿತಾದ ಕಾವ್ಯಗಳಾಗಿವೆ. ಮುಖ್ಯವಾಗಿ ಗಂಗೆಗೌರಿ ಕಾವ್ಯದಲ್ಲಿ ಶಿವನ

ಹಿನ್ನೆಲೆಯಲ್ಲಿ ಹಂಡೆ ಮಲ್ಕಪ್ಪನಾಯಕನನ್ನು ಹೊಗಳಿದ ಸ್ತುತಿಗಳು ಕಂಡುಬರುತ್ತವೆ. ಹಾಗೆಯೇ ಭಟಾಂಗಿನಿ ಸಾಹಿತ್ಯದಲ್ಲಿ ಇದೇ ಅರಸನ ಕುರಿತಾಗಿ ಹೊಗಳಿದ ಹೇಳಿಕೆಗಳು ಕಂಡುಬರುತ್ತವೆ.

**ಭಕ್ತಿರಸ ಸೋನೆ**

ಡಾ. ಬಿ.ವಿ. ಶಿರೂರು ಸಂಪಾದನೆಯ ಭಕ್ತಿರಸ ಸೋನೆ ಎಂಬ ಗ್ರಂಥವು ಕ್ರಿ.ಶ. ೧೭೭೮ರಲ್ಲಿ ರಚನೆಯಾಗಿದ್ದು, ಈ ಕೃತಿಯನ್ನು ಶ್ರೀ ತೋಂಟದ ಸಿದ್ಧೇಶ್ವರ ದೇವರ ಸಂಪ್ರದಾಯಕರಾದ ವಿರಕ್ತಮಠದ ನೀಲಕಂಠ ಸ್ವಾಮಿಗಳವರಿಗೆ ತಮ್ಮ ಕಾರುಣ್ಯಪ್ರಿಯ ಭಕ್ತರಾದಂಥ ದೇವರ ವರಪ್ರಸನ್ನರಾದ ರಾಜಾಧಿರಾಜ ಶ್ರೀ ಹಂಡೆ ರಾಮಪ್ಪನಾಯಕರು ಭಕ್ತಿಯಿಂದ ಬರೆಸಿ ನಮಸ್ಕರಿಸಿದಂತಹ 'ಭಕ್ತಿರಸ ಸೋನೆ' ಎಂಬ ಕಾವ್ಯವು ಬಸವಣ್ಣನ ಚರಿತ್ರೆಯನ್ನೊಳಗೊಂಡ ರಚಿತವಾದ ಸಾಂಗತ್ಯ ಕೃತಿಯಾಗಿದೆ.

ಬಸವಣ್ಣನ ಚರಿತ್ರೆಯನ್ನು ಪ್ರಧಾನವಾಗಿ ನಿರೂಪಿಸುವ ಈ ಕೃತಿ ಅನೇಕ ಪೌರಾಣಿಕ ಹಾಗೂ ಚಾರಿತ್ರಿಕ ವ್ಯಕ್ತಿಗಳ ಕಥೆಗಳನ್ನೊಳಗೊಂಡಿದೆ. ಬಹುಶಃ ಈ ಕೃತಿಯನ್ನು ಹಂಡೆ ರಾಮಪ್ಪನಾಯಕ ಆಶ್ರಯದಲ್ಲಿ ಪ್ರತಿಕರಣವಾಗಿದೆ. ಒಟ್ಟಾರೆಯಾಗಿ ಈ ಕಾವ್ಯವನ್ನು ಬರೆಸಿದ ಕೀರ್ತಿಯು ಹಂಡೆ ಮನೆತನಕ್ಕೆ ಸಲ್ಲುತ್ತದೆ(ಕಾವ್ಯದ ಉಲ್ಲೇಖ: ಕಾಗದ ಪ್ರತಿ ನಂ. ೨೫೮೨ ಅ(ಅ) ಅಂತ್ಯದ ಪ್ರಶಸ್ತಿ). ಕ್ರಿ.ಶ. ವರ್ಷಗಳು ೧೭೭೮ನೆಯ ಬಹುಧಾನ್ಯ ನಾಮ ಸಂವತ್ಸರದ ಶ್ರಾವಣ ಶು. ೧೦ ಸೋಮವಾರ ಅಭಿಜಿನ್ಮುಹೂರ್ತ ಶುಕ್ರನ ಹೊರೆಯಲ್ಲು ಮುಗಿದ ಭಕ್ತಿರಸ ಸೋನೆಯ ಪುಸ್ತಕಕ್ಕೆ ಶುಭಮಸ್ತು ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ ಮದ್ವೇದ ವೇದಶಿರ ಶಿವಾಗಮ ಪುಣ್ಯ ಪುರಾಣ ಪ್ರಭುತಿ ಪ್ರತಿಪಾದ್ಯ ಮಾನ ಸಚ್ಚಿದಾನಂದ ನಿಷ್ಕಳ ಸ್ವಯಂ ಜ್ಯೋತಿಪ್ರಕಾಶರುಮಪ್ಪ ಪರಮ ಪುರಾತನಗೀತ ಜಾತಕಂಜಾತ ವಿಕಾಸ ವಿಧಿಮಾರ್ತಂಡಾಯ ಮಾನರುಮಪ್ಪ ಶಿವಜ್ಞಾನ ಶಿವಯೋಗ ಶಿವವ್ರತ ಶಿವಸಮಾಧಿ ಶಿವಾರ್ಚನ ಶಿ(ವ) ಪ್ರಸಾ(ದ) ನಿರತಿಶಯ ನಿಜಾನಂದ ತೃಣೀಕೃತ ಬೈಂದವಾನಂದಾದಿ ಭೋಗಸಮೂಹರುಮಪ್ಪ ಶರಣಗಣ ಹೃದಯಾಂ ಬೋಧಿಶ ಶಾಂಕರುಮಪ್ಪ ತೋಂಟದ ಸಿದ್ಧೇಶ್ವರ ದೇವರ ಸಂಪ್ರದಾಯಕರಾದ ವಿರಕ್ತಮಠದ ನೀಲಕಂಠಸ್ವಾಮಿಗಳವರಿಗೆ ತಮ್ಮ ಕಾರುಣ್ಯಪ್ರಿಯ ಭಕ್ತರಾದಂಥ ಶ್ರೀಮನ್ಮಹಾರಾಜಾಧಿ ರಾಜ ಹಂಡೆ ಯಶವಂತ ಪರದಳವಿಭಾಡ ಅರಿರಾಯಮಾನ ಮರ್ದನ ಸದಾಶ್ರೀ ದೇವರವರ ಪ್ರಸನ್ನರಾದ ರಾಜಾಧಿರಾಜ ಶ್ರೀ ಹಂಡೆ ರಾಮಪ್ಪ ನಾಯಕರು ಭಕ್ತಿಯಿಂದ ಬರಸಿ ನಮಸ್ಕರಿಸಿದಂಥ ಭಕ್ತಿರಸಸೋನೆಯ ಪುಸ್ತಕಕ್ಕೆ ಶುಭಮಸ್ತು ಶೋಭನಮಸ್ತು ಆಯುರಾರೋಗ್ಯ ಅಯಿಶ್ವರ್ಯಮಸ್ತು ಶ್ರೀ ಶ್ರೀ ಶ್ರೀ.

ಈ ಪುಸ್ತಕವ ಬರೆದಾತ ಪ. ಬಳ್ಳಾರಿ ಮಹಾನಾಡಿನ ಶಾನಭೋಗ ಮಲ್ಲಪ್ಪನ ಸುಹಸ್ತ ಬರಹವು. ಇವನು ಹಂಡೆ ರಾಮಪ್ಪನಾಯಕನು ಬಳ್ಳಾರಿ, ಕುರುಗೋಡು, ತೆಕ್ಕಲಕೋಟೆ ಆಳುತ್ತಿರುವಾಗ ಆತನ ಆಸ್ಥಾನದಲ್ಲಿ ಶಾನುಭೋಗರಾಗಿ ವೃತ್ತಿನಿರತನಾಗಿದ್ದದ್ದು ಕಂಡುಬರುತ್ತದೆ. ಈ ಕಾಗದದ ಪ್ರತಿಯನ್ನು ಹಂಡೆ ರಾಮಪ್ಪನಾಯಕನ ಆಜ್ಞೆಯ ಮೇರೆಗೆ ಬರೆದಿರಬೇಕೆಂದು ತಿಳಿಯುತ್ತದೆ. ಹಂಡೆ ಅರಸರು ಸಾಹಿತ್ಯ ಪ್ರಿಯರಾಗಿದ್ದರು ಎಂದು ಇದರಿಂದ ಗುರುತಿಸಬಹುದಾಗಿದೆ.

## ಬುಕ್ಕರಾಯ ಚರಿತ್ರೆ

ಹಂಡೆ ಅರಸುಮನೆತನಕ್ಕೆ ಸಂಬಂಧಿಸಿದಂತೆ ಸಾಹಿತ್ಯ ಕೃತಿಗಳಲ್ಲಿ ಪ್ರಮುಖವಾದದ್ದು ಬುಕ್ಕರಾಯ ಚರಿತ್ರೆ, ಈ ಕೃತಿಯು ಈಗಿನ ಆಂಧ್ರ ಪ್ರದೇಶದ ಹಂಡೆ ಅನಂತಪುರದ, ಹಂಡೆ ಅರಸುಮನೆತನದ ವಂಶಾವಳಿಯನ್ನು ಹೊಂದಿದ ಒಂದು ಕೈಫಿಯತ್ತು. ಹೆಸರೇ ಸೂಚಿಸುವಂತೆ 'ಬುಕ್ಕರಾಯ ಚರಿತ್ರೆ' ಬುಕ್ಕಪಟ್ಟಣವನ್ನು ಆಳಿದ ರಾಜರ ಚರಿತ್ರೆಯಾಗಿದೆ. ಈ ಬುಕ್ಕಪಟ್ಟಣವು ಇಂದಿನ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ 'ಹಂಡೆ ಅನಂತಪುರವು' ಈಗ ಜಿಲ್ಲೆಯ ಕೇಂದ್ರಸ್ಥಾನವಾಗಿದೆ. 'ಹಂಡೆ ಅನಂತಪುರದ' ಪೂರ್ವದ ಹೆಸರು ಅನಂತಸಾಗರವು. ಕ್ರಿ. ಶ. ೧೩೬೮ರಲ್ಲಿ ವಿಜಯನಗರದ ಬುಕ್ಕರಾಯನ ದಿವಾನನಾದ ಚಿಕ್ಕಪ್ಪ ಒಡೆಯರು ಇಲ್ಲಿ ಒಂದು ತಟಾಕವನ್ನು ನಿರ್ಮಿಸಿದನು. ಅದರ ಎಡಬಲಗಳಲ್ಲಿ ಬುಕ್ಕರಾಯನ ಹೆಸರಿನ ಬುಕ್ಕರಾಯ ಸಮುದ್ರವನ್ನು ಆತನ ಹೆಂಡತಿಯಾದ ಅನಂತಮ್ಮನ ಹೆಸರಿನಲ್ಲಿ ಅನಂತಸಾಗರವನ್ನೂ ನಿರ್ಮಿಸುತ್ತಾನೆ. ಈ ಕೆರೆಯ ಬಳಿ ಇರುವ ದೇವರಕೊಂಡವೆಂಬ ಗುಡ್ಡದ ಮೇಲಿರುವ ಒಂದು ಶಾಸನದಿಂದ ಇದು ತಿಳಿದುಬರುತ್ತದೆ. ಕ್ರಿ.ಶ. ೧೩೨೪ರ ಬುಕ್ಕರಾಯ ಸಮುದ್ರವೆಂಬ ಪಟ್ಟಣವು ಮುಂದೆ ಬುಕ್ಕಪಟ್ಟಣವೆಂದು ನಂತರದಲ್ಲಿ ಅನಂತಪುರವೆಂದು ಹಂಡೆ ಅರಸರ ಕೈವಶವಾದ ಮೇಲೆ ಈ ಪಟ್ಟಣವು ಹಂಡೆ ಅನಂತಪುರವೆಂದು ಕರೆಯಿಸಿಕೊಂಡಿದೆ. ಈ ಪ್ರದೇಶವನ್ನು ಆಳಿದ ಹಂಡೆ ಅರಸರ ವಂಶಾವಳಿಯ ಚರಿತ್ರೆಯೇ ಪ್ರಸ್ತುತ ಬುಕ್ಕರಾಯ ಚರಿತ್ರೆಯ ಕಥಾಹಂದರವಾಗಿದೆ.

ಈ ಕೃತಿಯ ರಚನೆಯ ಕಾಲವು ಮುಖ್ಯವಾಗಿ ಮೈಸೂರು ಓರಿಯಂಟಲ್ ಲೈಬ್ರರಿಯ ಸಂಗ್ರಹದಲ್ಲಿರುವ ಈ ಹಸ್ತಪ್ರತಿ(ಏ.೦. ೧೨೭ ಪ್ರಕಾರ–ಗದ್ಯ ಹಸ್ತಪ್ರತಿ ಉದ್ದ೧೩xಅಗಲ೮.೧. ಪತ್ರ ೧–೨೯ ಗರಿ ೩೩ ಫಂಕ್ತಿ ೩೮ ಅಕ್ಷರ) ಇದರ ಕಾಲ ಕೃತಿಯಲ್ಲಿ ಉಕ್ತವಾದಂತೆ ಶಾಲಿವಾಹನ ಶಕ ೧೭೩೩ ಅಂದರೆ ಕ್ರಿ.ಶ ೧೮೧೧ ಆಗಿದ್ದು ಇದು ಗದ್ಯ ಪ್ರಕಾರದಲ್ಲಿ ರಚನೆಯಾಗಿದೆ. ಕೃತಿಯ ರಚನಾಕಾರನ ಹೆಸರು ಗ್ರಂಥದಲ್ಲಿ ಕಂಡುಬಂದಿಲ್ಲ. ಆದರೆ "ಕರ್ನಲ್ ಮನ್ರೋ

ಅವರು ಸಿದ್ದಪ್ಪನಾಯಕನಿಗೆ ನಿಮ್ಮ ಪೂರ್ವಜರ ಕೈಫಿಯತ್ತು ಬರೆದು ಪಟ್ಟಿ ತೆಗೆದುಕೊಂಡು ಬಾಯೆಂದು ಅಪ್ಪಣೆ ಕೊಟ್ಟಿದ್ದರಿಂದ ಅದೇ ಪ್ರಕಾರ ಹಳೆಯ ರೈತರು ನಾಲ್ವರನ್ನು ಕುಳ್ಳಿರಿಸಿ ವಕೀಲ ಕೊತ್ತಚರಪುಯಿಂದ ಹೊಸಕೆರೆ ಶಿನಪ್ಪ, ಬಾಳಪ್ಪ ರಾಮಣ್ಣನ್ನವರ ನರಸಪ್ಪ ದೇಸಾಯಿ ತಿಮ್ಮನವೆಂಕಟಪ್ಪ ಮುಂತಾದವರನ್ನು ಕುಳ್ಳಿರಿಸಿಕೊಂಡು ಪರಂಪರೆ ಯಾವತ್ತು ಪೂರ್ವೋತ್ತರ ಬರೆಸಿಕೊಟ್ಟಿದ್ದರಿಂದ ರಾಜ ಶ್ರೀ ಮನ್ರೋ ಸಾಹೇಬರು ಅದನ್ನು ಆದರಿಸಿ ತಿಂಗಳು ೧ಕ್ಕೆ ಕಂಠರಾಯ ೭೫ ವರಹ ಸಂಬಳ ನಿಷ್ಕರ್ಷೆ ಮಾಡಿ ಬುಕ್ಕಪಟ್ಟಣದ ಸಮೀಪದಲ್ಲಿ ಇರುವ ಸಿದ್ಧರಾಮಪುರವು ಅವರಿಗೆ ಸಲ್ಲುವ ಉಪಗ್ರಾಮಗಳು ಇದಲ್ಲದೆ ಪ್ರತಿ ಗ್ರಾಮದಲ್ಲಿ ಯಿದ್ದ ರುಸ್ತುಂ ಜಪ್ತಿಮಾಡಿ ಪೂರ್ವದಲ್ಲಿ ಬರೆದ ಪ್ರಕಾರ ತಿಂಗಳು ತಿಂಗಳಿಗೆ ಸಂಬಳ ಕೊಟ್ಟು ರಸೀದಿ ತೆಗೆದುಕೊಳ್ಳುವ ಹಾಗೆ ರಾಜಶ್ರೀ ಮಂಡ್ರೋಲ್ ಸಾಹೇಬರು ಹುಕುಂ ಮಾಡಿ ಸನದ್ದು ಬರೆಸಿ ತಮ್ಮ ಸೈನಿಸಿ ಕೊಟ್ಟರು." ಎಂಬ ವಿವರ ಬುಕ್ಕರಾಯ ಚರಿತ್ರೆಯಲ್ಲಿ ಬರುತ್ತದೆ. ಹೀಗೆ ನಾಲ್ಕಾರು ಜನ ಕೂಡಿ ಈ ವಂಶದ ಚರಿತ್ರೆಯನ್ನು ಬರೆಸಿರುವುದು ಕಂಡುಬರುತ್ತದೆ.

ಶಾಸನಗಳನ್ನು ಬರೆದವರು ಪಂಡಿತರು, ಶಿಷ್ಟರು. ಕೈಫಿಯತ್ತುಗಳನ್ನು ಬರೆದವರು ಸ್ಥಳೀಯ ಸಾಮಾನ್ಯರು ಇಲ್ಲವೇ ಸಾಮಾನ್ಯರಿಂದ ಕೇಳಿ ಬರೆದ ಶಿಷ್ಟರು. ಹೀಗಾಗಿ ಆಯಾಸ್ಥಳದ ಐತಿಹ್ಯ(Legend), ಪುರಾಣ(Myth), ಇತಿಹಾಸಗಳು(History) ಇಲ್ಲಿ ಸೇರಿಕೊಂಡಿವೆ. ಜನರಿಂದ ಕೇಳಿ ಬರೆದುದೇ ಇಲ್ಲಿ ಅಧಿಕ ಪ್ರಮಾಣದಲ್ಲಿರುವುದರಿಂದ ಇದು, "ಮೌಖಿಕ ಇತಿಹಾಸ"(Oral history) ವರ್ಗಕ್ಕೆ ಸೇರುತ್ತದೆ. ಇತಿಹಾಸ ರಚನೆಗೆ ಮೌಖಿಕ ಸಾಮಗ್ರಿಯನ್ನು ಬಳಸಿಕೊಳ್ಳಲು ಇಂದು ಇತಿಹಾಸಶಾಸ್ತ್ರ ಹೆಚ್ಚು ಒಲವು ತೋರಿಸುತ್ತಲಿದೆ. ಈ ದೃಷ್ಟಿಯಿಂದ ಕೈಫಿಯತ್ತುಗಳು ಖಂಡಿತವಾಗಿಯೂ ನಮ್ಮ ಕರ್ನಾಟಕದ ಸಾಂಸ್ಕೃತಿಕ ಇತಿಹಾಸ ರಚನೆಗೆ ಹೊಸ ಬಗೆಯ ಆಕರ ಸಂಪತ್ತಾಗಿ ನಮ್ಮೆದುರಿಗೆ ಇದೆ ಎನಿಸುತ್ತದೆ.

ಬುಕ್ಕರಾಯ ಚರಿತ್ರೆಯಲ್ಲಿ ಬಳಸಿದ ಭಾಷೆ ಸಮಕಾಲೀನ ಆಡುಭಾಷೆಯಾಗಿದ್ದು ಆ ಸಂದರ್ಭದಲ್ಲಿ ಕನ್ನಡ, ಮುಸಲ್ಮಾನರ ಉರ್ದು, ಮರಾಠರ ಮರಾಠಿ, ಆಂಗ್ಲರ ಇಂಗ್ಲಿಷ್ ಭಾಷೆ ಮತ್ತು ಆಂಧ್ರದ ತೆಲುಗು, ಭಾಷೆಯ ಪದಗಳು ಹೇರಳವಾಗಿ ಬಳಕೆಯಾಗಿರುವುದು ಕಂಡುಬರುತ್ತದೆ. ಇಂತಹ ಆಡುಭಾಷೆಯ ಮಿಶ್ರಣವನ್ನು ಹೊಂದಿರುವ ಬುಕ್ಕರಾಯ ಚರಿತ್ರೆಯು ಅಪ್ಪಟ ದೇಶಿಶೈಲಿಯ ಭಾಷೆಯನ್ನು ಒಳಗೊಂಡಿದೆ.

'ಬುಕ್ಕರಾಯ ಚರಿತ್ರೆ' ಈ ಹೆಸರು ಅಲ್ಲಿಯ ಸ್ಥಳೀಯ ಊರಿನಿಂದ ಬಂದುದು. ಆದರೆ ಇದರ ವಸ್ತುವೆಲ್ಲ ಕೈಫಿಯತ್ತಿನದು. ಮೂಲ ಕೈಫಿಯತ್ತನ್ನು ತೆಗೆದುಕೊಂಡು ಇಲ್ಲಿ ಅದಕ್ಕೆ ಹೆಸರನ್ನು ಮಾತ್ರ ಬುಕ್ಕರಾಯ ಚರಿತ್ರೆ ಎಂದು ಕರೆಯಲಾಗಿದೆ. ಸಂಧಿಗಳನ್ನು ಮಾಡಿಕೊಂಡು

ಪ್ರತಿ ಸಂಧಿ ಮುಗಿದಾಗ ಮುಕ್ತಾಯ ಮಂಗಳ ಮಹಾ ಶ್ರೀ ಎಂದಿದೆ. ಬುಕ್ಕರಾಯ ಚರಿತ್ರೆಯಲ್ಲಿ ಒಟ್ಟು ಒಂಬತ್ತು ಸಂಧಿಗಳಿವೆ. ಇಲ್ಲಿ ಬರವಣಿಗೆಕಾರ ಹಿಂದಿನ ಪುರಾಣ ಮುಂತಾದ ಗದ್ಯ ಕೃತಿಗಳನ್ನು ಅನುಸರಿಸಿ ಇದನ್ನು ಬರೆಯುವ ಪ್ರಯತ್ನ ಮಾಡಿರುವುದು ಕಂಡುಬರುತ್ತದೆ. ಇದಕ್ಕೆ ಉದಾಹರಣೆಯಾಗಿ ಮೊದಲಿಗೆ ಗಣೇಶ, ಸರಸ್ವತಿಯರನ್ನು ಸ್ತುತಿಸಿಯೇ ಈ ಚರಿತ್ರೆ ಪ್ರಾರಂಭವಾಗುತ್ತದೆ. ಪ್ರತಿಯೊಂದು ಸಂಧಿಯು ಘಟನೆ, ವಿಷಯ, ಚರಿತ್ರೆ, ಪುರಾಣ ಹಾಗೂ ಆಶಯವನ್ನು ಒಳಗೊಂಡ ಸಂಧಿಕಾರ್ಯವಾಗಿದೆ. ಜಾನಪದ ಶೈಲಿಯಲ್ಲಿ ನಿರೂಪಿತವಾಗಿರುವ ಕೃತಿಯ ಒಂದೊಂದು ಭಾಗವನ್ನು ಕೆಳಗಿನಂತೆ ವಿವರಿಸಲಾಗಿದೆ.

ಕೃತಿಯು ದೇವರ ಸ್ತುತಿಯನ್ನು ಸ್ಮರಿಸುತ್ತ ಅಂದರೆ ಶ್ರೀ ಸಿದ್ಧಿವಿನಾಯಕಸ್ವಾಮಿ ಪಾದಾರವಿಂದವೆ ಗತಿ ಶ್ರೀ ಶಾರದಾಂಭಾಯನಮಃ ಶುಭಮಸ್ತು ನಿರ್ವಿಘ್ನ ಮಸ್ತೂ ಎಂಬ ದೇವರ ಸ್ಮರಣೆಯನ್ನು ನೆನೆಯುತ್ತ ಕೃತಿಯು ಮುಂದುವರಿಯುತ್ತದೆ. ಪಂಪಾತೀರದಲ್ಲಿರುವ ವಿದ್ಯಾನಗರವನ್ನು ಬುಕ್ಕರಾಯರು ಆಳುತ್ತಿರುವಾಗ ಈತನ ಪ್ರಧಾನಿಯಾದ ಚಿಕ್ಕಪ್ಪ ಒಡೆಯರು ಕ್ರಿ.ಶ. ೧೩೬೪ರಲ್ಲಿ ವಿದ್ಯಾನಗರಕ್ಕೆ ತೆಂಕಲು ಪ್ರಾಂತ್ಯದಲ್ಲಿ ನಂದೇಲ ತಾಲೂಕಿನ ದೇವರ ಗುಡ್ಡದೊಳಗೆ ಹುಟ್ಟಿ ಬರುತ್ತಿದ್ದ ಪಾಂಡುನದಿಯನ್ನು ನೋಡಿ ಅದನ್ನು ಆ ದೇವರಗುಡ್ಡಕ್ಕೆ ಅಡ್ಡಗಟ್ಟಿ ತಟಾಕ ಒಂದನ್ನು ನಿರ್ಮಾಣ ಮಾಡಿದ. ಆ ತಟಾಕದ ಎರಡು ತೂಬುಗಳಿಗೆ ಎರಡು ಗ್ರಾಮಗಳನ್ನು ನಿರ್ಮಾಣ ಮಾಡಿದರು. ಮೂಡಲು ತೂಬು ಇದ್ದ ಗ್ರಾಮಕ್ಕೆ ಅನಂತಸಾಗರವೆಂದು ತಮ್ಮ ದೊರೆಸಾನಿಯ ಹೆಸರು ಇಟ್ಟು ಬುಕ್ಕರಾಯ ಸಮುದ್ರದ ಸಮೀಪಕ್ಕೆ ಯಲಮಂಚಿನಾಡು ತಾಲೂಕದೊಳಗೆ ವರಗಿರಿ ವೆಂಕಟೇಶ್ವರನ ಗುಡ್ಡದೊಳಗೆ ಹುಟ್ಟಿ ಪ್ರವಾಹ ಹರಿಯುತ್ತ ಇರುವುದನ್ನು ನೋಡಿ. ಚಿತ್ರಾವತಿ ನದಿಯನ್ನು ನೋಡಿ ಅಲ್ಲಿಯೂ ಒಂದು ತಟಾಕವನ್ನು ನಿರ್ಮಾಣ ಮಾಡಿಸಿ ಅದಕ್ಕೆ ಮೂಡಲ ತೂಬಿನ ಬಳಿಯಲ್ಲಿ ಇದ್ದ ಗ್ರಾಮಕ್ಕೆ ಅನಂತಪಟ್ಟಣವೆಂದು ಹೆಸರಿಟ್ಟು ಆ ಸ್ಥಳದಲ್ಲೆ ಅದೃಶ್ಯವಾಗಿ ಹೋದರು.

ಈ ಬುಕ್ಕರಾಯ ಚರಿತ್ರೆ ಕಾವ್ಯದಲ್ಲಿ ಕೆರೆಗೆ ಹಾರ ಕೊಡುವ ಪದ್ಧತಿಯನ್ನು ನೋಡಬಹುದು. ಬುಕ್ಕರಾಯ ಸಮುದ್ರದ ಕೆರೆಯ ನೀರು ತುಂಬಿ ಎರಡು ತೂಬುಗಳಲ್ಲಿ ನೀರು ಹರಿಯುತ್ತಿತ್ತು. ಈ ಸಂದರ್ಭದಲ್ಲಿ ಊರಿನ ಎಲ್ಲಾ ಜನರು ಮತ್ತು ಆಯಗಾರರು ಸೇರಿರುವಾಗ ಸ್ತ್ರೀಯು ಗಂಗಾ ಭವಾನಿಯು ನರಬಲಿ ಬೇಡಿರುವುದಾಗಿಯೂ ನನಗೆ ನರಬಲಿ ಕೊಟ್ಟರೆ ನಿಲ್ಲುತ್ತೇನೆ ಇಲ್ಲದಿದ್ದರೆ ನಿಲ್ಲುವುದಿಲ್ಲ ಎಂಬ ಉದ್ಗಾರವನ್ನು ತೆಗೆದಳು. ಮುಂದೆ ಗ್ರಾಮಸ್ಥರು ಎಲ್ಲರೂ ಯೋಚನೆ ಮಾಡುತ್ತಿರುವಾಗ ಬುಕ್ಕರಾಯ ಸಮುದ್ರದೊಳಗಿದ್ದ ಬಸಿರೆಡ್ಡಿಯ ಏಳನೇ ಸೊಸೆಯಾದ 'ಮುದುಕವ್ವ' ಎಂಬ ಹುಡುಗಿಯನ್ನು ಗಂಗಾದೇವರಿಗೆ ನೀನು ಬಲಿಯಾಗಿ ಬರಬೇಕೆಂದು

ಹೇಳಿದರು. ಅವಳು ಅದೇ ಪ್ರಕಾರ ಬಲಿಗೆ ಸಿದ್ಧವಾಗಿ ಅರಿಸಿಣ ಕುಂಕುಮ ಹಚ್ಚಿಕೊಂಡು ತೊಳೆದ ಮಡಿ ಸೀರೆ ಕಟ್ಟಿಕೊಂಡು, ನಿಂಬೆ ಹಣ್ಣುಗಳನ್ನು ಕೈಯೊಳಗೆ ಹಿಡಿದುಕೊಂಡು, ಮನೆಯಿಂದ ಹೊರಟು ಯೇರಿ ಮೇಲಕ್ಕೆ ಬಂದು ಮಾವನಾದ ಬಸಿರೆಡ್ಡಿಯ ಕಾಲಿಗೆ ಸಾಷ್ಟಾಂಗವೆರಗಿ, ಊರಿನ ಜನರಿಗೆಲ್ಲಾ ನಮಸ್ಕಾರ ಮಾಡಿ ನನಗೆ ಗಂಗಾಭವಾನಿಯ ಅಪ್ಪಣೆ ಆಯಿತು. ನಾನು ಬಲಿಯಾಗಿ ಹೋಗುತ್ತೇನೆಂದು ಹೇಳಿ ಕೆರೆಯ ಯೇರಿಯ ತೂಬಿಗೆ ಮೂವತ್ತು ಪಾದಗಳು ಮೇಲೆ ತೂತು ಬಿದ್ದು ಆ ತೂತಿನೊಳಗೆ ಯೇರಿಕೊರೆದಿದ್ದ ಜಾಗದಿಂದ ಒಳಗೆ ಹೋಗಿ ನಿಂತಿದ್ದರಿಂದ ಆ ಯೇರಿಯ ಮೇಲೆ ಮಣ್ಣು-ಕಲ್ಲು ಹಾಕಿದರು. ಇದರಿಂದ ತೂಬು ಬಿದ್ದ ಯೇರಿಯು ನಿಂತಿತು ಎಂಬ ಪ್ರತೀತಿಯಿದೆ.

ಆ ಮರುದಿವಸ ಬಲಿಯಾಗಿ ಹೋದ ಮುದುಕವ್ವ ಆ ಗ್ರಾಮದೊಳಗೆ ಜನಗಳ ಮೇಲೆ ಆವೇಶ ಬಂದು ಶಿಲಾರೂಪವಾಗಿ ತನ್ನ ಪ್ರತಿಮೆಯನ್ನು ಮಾಡಿ ಗಿಡದ ಕೆಳಗಿಟ್ಟು ಪೂಜಿಸಿರೆಂದು ಹೇಳಿದದ್ದರಿಂದ ಆ ಪ್ರಕಾರವೇ ಊರಿನ ಜನರೆಲ್ಲಾ ಪೂಜಿಸುತ್ತ ಬಂದಿದ್ದಾರೆ. ಒಂದೊಮ್ಮೆ ಕೆರೆಯ ಯೇರಿಯ ಮೇಲೆ ನಡೆಯುವಾಗ ಮುದುಕವ್ವಾ...! ಎಂದು ಕರೆದರೆ ವೋ...! ಎಂದು ಕೂಗುತ್ತಾಳೆ. ಹೀಗಿರುವಾಗ ಒಂದು ದಿವಸ ರಾತ್ರಿ ಹುಲ್ಲಿಗೆ ಹೋಗುವವರು ಅದೇ ಪ್ರಕಾರ ಕರೆದರೆ ವೋ ಎಂದಳು, ಅದನ್ನು ಕೇಳಿದವರು ನಕ್ಕು ಇನ್ನೂ ನಿನ್ನ ಸೊಲ್ಲು(ಸೊಕ್ಕು) ಅಡಗಲಿಲ್ಲವೆ ಎಂದು ಅವರು ಕೂಗಿ ಹೇಳಿದ್ದರಿಂದ ಆ ದಿನದಿಂದ ಯಾರದಾರೂ ಕೂಗಿದರೆ ವೋ ಎನ್ನುವುದಿಲ್ಲ. ಮುಂದೆ ಮುದುಕವ್ವಗೆ ಮೊದಲಿನಿಂದಲೂ ಪೂಜಾಕಾರ್ಯ ನೆರವೇರಿಸಿ ಕೊಂಡು ಹೋಗುತ್ತಿರುವುದು ಕಂಡುಬರುತ್ತದೆ. ಪ್ರಸ್ತುತ ಈ ಕೆರೆಗೆ ಹಾರ ಕೊಡುವ ಪದ್ಧತಿಯು ಒಂದು ಮೂಢನಂಬಿಕೆಯಾಗಿ ಅದು ರೂಢಿಸಂಪ್ರದಾಯವಾಗಿಯೂ ನಂಬಿಕೆ-ಆಚರಣೆಯಾಗಿ ಕಂಡುಬಂದಿರುವುದು ನೋಡಬಹುದು.

ಬುಕ್ಕರಾಯ ಸಮುದ್ರ, ಅನಂತಸಾಗರವೆಂಬ ಗ್ರಾಮಗಳ ಕೆರೆಗಳು ಬೇರೆ ಎಲ್ಲಿಯೂ ಇಲ್ಲ. ಮುಂದೆ ವಿದ್ಯಾನಗರವನ್ನು ಬುಕ್ಕರಾಯರ ವಂಶಸ್ಥನಾದ ಕೃಷ್ಣರಾಯರು ರಾಜ್ಯ ಪರಿಪಾಲನೆ ಮಾಡುತ್ತಾ ಇರುವಾಗ ಕ್ರಿ.ಶ. ೧೫೩೦ರಲ್ಲಿ ಮೃತನಾದನು. ಈತನ ಹೆಂಡತಿಯರಾದ ಚಿನ್ನಾದೇವಿ ಮತ್ತು ತಿರುಮಲದೇವಿ ಇವರಿಗೆ ಹೆಣ್ಣುಮಕ್ಕಳು ಮಾತ್ರ ಹುಟ್ಟಿದ್ದರಿಂದ ತಿರುಮಲದೇವಿ ಮಗಳನ್ನು ಅಳಿಯ ರಾಮರಾಯನಿಗೆ, ಚಿನ್ನಾದೇವಿಯ ಮಗಳನ್ನು ಆತನ ತಮ್ಮನಾದ ತಿರುಮಲರಾಯ ಮದುವೆ ಮಾಡಿಕೊಂಡರು. ಮುಂದೆ ದೊರೆಸಾನಿಗಳಿಬ್ಬರೂ ಅಳಿಯನಾದ ರಾಮರಾಯನಿಗೆ ಪಟ್ಟವ ಕಟ್ಟಬೇಕೆಂದು ನಿರ್ಣಯಿಸಿದ್ದರು.

ತರುವಾಯ ವಿಜಯನಗರ ಸಂಸ್ಥಾನದಲ್ಲಿರುವ ಬೊಕ್ಕಸದ ಗೊಲ್ಲನಾದ ತಿಮ್ಮಯ್ಯನೆಂಬುವನು ರಾಜ್ಯವು ಅರಾಜಕತೆಯಿಂದ ಕೂಡಿರುವಾಗ ಬೊಕ್ಕಸ ತನ್ನ ಸ್ವಾಧೀನದಲ್ಲಿ ಇದ್ದುದರಿಂದ ಚತುರಂಗದ ಬಲವನ್ನು ಭದ್ರಮಾಡಿಕೊಂಡು ರಾಮರಾಯನನ್ನು ಮತ್ತು ತಿರುಮಲರಾಯನನ್ನು ಸೆರೆಯಲ್ಲಿ ಹಿಡಿಯಬೇಕೆಂದು ಯೋಚಿಸಿದ. ಈ ವರ್ತಮಾನವನ್ನು ತಿಳಿದ ರಾಮರಾಯ ಮತ್ತು ತಿರುಮಲರಾಯರು ಸಕಲ ಸೇನಾಸಮೇತರಾಗಿ ಬೊಕ್ಕಸದ ತಿಮ್ಮಯ್ಯನನ್ನು ಬಂದು ವಿದ್ಯಾನಗರಕ್ಕೆ ದೂರ ಉಳಿದರು. ಈ ಸಮಯದಲ್ಲಿ ವಿಜಾಪುರದ ಮುತ್ತಗಿ ಪ್ರದೇಶದ ಶೂರನಾಗಿದ್ದ ಹಂಡೆ ಬಾಲದ ಹನುಮಪ್ಪ ನಾಯಕನ ಸಹಾಯವನ್ನು ಪಡೆದುಕೊಂಡು ಮುಂದೆ ರಾಮರಾಯನ ಅಪ್ಪಣೆಯ ಮೇರೆಗೆ ಬೊಕ್ಕಸದ ತಿಮ್ಮಯ್ಯನನ್ನು ಸೆರೆ ಹಿಡಿದನು.

ಅಳಿಯ ರಾಮರಾಯ ಮತ್ತು ತಿರುಮಲರಾಯನ ಅಪ್ಪಣೆ ಮೇರೆಗೆ ಹಂಡೆ ಬಾಲದ ಹನುಮಪ್ಪನಾಯಕನು ವಿಜಾಪುರ ಸುಲ್ತಾನನಾದ ಅದಿಲ್‌ಶಾಹಿಯ ವಿರುದ್ಧ ಜಯಸಿ ಬಂದರೆ ನಿನ್ನ ಮನಸ್ಸಿನ ಪ್ರಕಾರ ರಾಜ್ಯವನ್ನು ನೀಡಲಾಗುವುದು ಎಂದರು. ಈ ಪ್ರಕಾರ ಹಂಡೆ ಬಾಲದ ಹನುಮಪ್ಪ ನಾಯಕನು ಸುಲ್ತಾನನೊಂದಿಗೆ ಹೋರಾಡಿ ಜಯಿಸಿ ಬಂದನು. ನುಡಿದ ಮಾತಿನಂತೆ ಅಳಿಯ ರಾಮರಾಯನು ಮೂಡಲು ದೆಸೆಯಲ್ಲಿ ಇದ್ದ ನಂದೇಲ ಗ್ರಾಮ, ಬುಕ್ಕರಾಯಸಮುದ್ರ, ಧರ್ಮಾವರಂ, ಕಣಿಕಲ್ಲು, ಪಶ್ಚಿಮಕ್ಕೆ ಇರುವ ಬಳ್ಳಾರಿ, ಕುರುಗೋಡು ಈ ಗ್ರಾಮಗಳನ್ನು ಉಂಬಳಿಯಾಗಿ ನೀಡಿದನು. ಹೀಗೆ ಕ್ರಿ.ಶ. ೧೫೬೮ರಲ್ಲಿ ಹಂಡೆ ಬಾಲದ ಹನುಮಪ್ಪನಾಯಕನು ನಂದೇಲಕ್ಕೆ ಬಂದನು. ಇಲ್ಲಿಂದ ಬುಕ್ಕರಾಯಸಮುದ್ರಕ್ಕೆ ಬಂದು ಅಲ್ಲಿನ ತಟಾಕವನ್ನು ನೋಡಿ ದೊಡ್ಡ ಕೆರೆಯೆಂದು ತಿಳಿದು ಈ ಗ್ರಾಮದೊಳಗೆ ಕೋಟೆಯ ಮುಂದೆ ರಾಜಗೃಹವನ್ನು ಕಟ್ಟಿಸಿ, ಹಿಂದೆ ಸುತ್ತ ಕೋಟೆ ನಿರ್ಮಾಣ ಮಾಡಿಕೊಂಡು ಎರಡು ರಾಜ್ಯವನ್ನು ವಿಚಾರಿಸುತ್ತಾ ಕ್ರಿ.ಶ. ೧೫೮೨ನೆಯ ಇಸ್ವಿಯಲ್ಲಿ ಹಂಡೆ ಬಾಲದ ಹನುಮಪ್ಪ ನಾಯಕನು ಮೃತನಾದನು.

ಹಂಡೆ ಬಾಲದ ಹನುಪ್ಪನಾಯಕನು ಮೃತನಾದ ಮೇಲೆ ಆತನ ಮಕ್ಕಳಾದ ಇಮ್ಮಡಿ ಹಂಪನಾಯಕನು ಆಳ್ವಿಕೆ ನಡೆಸಿದ. ಈತನ ತರುವಾಯ ಹಂಡೆ ಮಲಕಪ್ಪನಾಯಕನು ರಾಜ್ಯಭಾರ ಮಾಡುತ್ತಿರುವ ಸಮಯದಲ್ಲಿ ವಿದ್ಯಾನಗರದ ಅಧಿಪತಿ ತಿರುಮಲರಾಯರ ಮಗನು ಶ್ರೀರಂಗ ರಾಯರು ಚಂದ್ರಗಿರಿ ಕಡೆ ರಾಜ್ಯ ವಿಚಾರಣ ಮಾಡಲಿಕ್ಕೆ ಹೋಗಿ ಮತ್ತೆ ಬಾದಷಹನ ಸೈನ್ಯವು ವಿದ್ಯಾನಗರವನ್ನು ತೆಗೆದುಕೊಳ್ಳಬೇಕೆಂದು ಬಂದು ಕಲ್ಯಾಣ ಕಲಬುರ್ಗಿಯಲ್ಲಿ ಇಳಿಯಿತು. ಈ ವರ್ತಮಾನವನ್ನು ಶ್ರೀ ರಂಗರಾಯರು ಕೇಳಿ ತಾನು ತ್ವರಿತವಾಗಿ ವಿದ್ಯಾನಗರವನ್ನು ತಲುಪಿ ಅಲ್ಲಿ ಇದ್ದ ಸೈನ್ಯಸಮೇತ ಕಲ್ಯಾಣ ಕಲುಬುರ್ಗಿ ಪ್ರಾಂತ್ಯಕ್ಕೆ ಬಂದನು. ಈ ಬುಕ್ಕರಾಯ ಸಮುದ್ರದೊಳಗೆ ಇದ್ದ ಮಲಕಪ್ಪನಾಯಕನೆ ಸೇನಾಸಮೇತವಾಗಿ ಕರೆಸಿಕೊಂಡು ಹೋಗಿ,

ಯುದ್ಧವನ್ನು ಮಾಡಿ ಬಾದಷಾಹನನ್ನು ಪರಾಜಿತ ಮಾಡಿದನು. ತರುವಾಯ ಶ್ರೀ ರಂಗರಾಯರ ಅಪ್ಪಣೆ ಮೇರೆಗೆ ಬುಕ್ಕರಾಯಸಮುದ್ರದೊಳಗೆ ಬಂದು ಹೊಸದಾಗಿ ಪೇಟೆ ಕಟ್ಟಿಸಿ ಈ ಸ್ಥಳದಲ್ಲಿ ಇದ್ದರು. ಈ ಮಲಕಪ್ಪನಾಯಕನಿಗೆ ಸಂತಾನವಿಲ್ಲದ ಕಾರಣ ಚಿನ್ನಪ್ಪರೆಡ್ಡಿ ವಂಶಸ್ಥರಾದ ಯಲ್ಲಾರಡ್ಡಿಜನ ಅವರನ್ನು ನೋಡಲಾಗಿ ಅವರ ಪ್ರಕಾರ ತಾಂಬೂಲವನ್ನು ತೆಗೆದುಕೊಂಡು ಹೋಗೆಂದು ಬಿನ್ನಹ ಮಾಡಿದರು. ಮಂದೆ ಯಲ್ಲಾರೆಡ್ಡಿಯನ್ನು ತಮ್ಮ ಮನೆಗೆ ಕರೆಯಿಸಿಕೊಂಡು ನೀವು ಇರುವ ಸ್ಥಳ ನಮಗೆ ಬೇಕಾಗಿದೆ ಕೊಡಬೇಕೆಂದು ಕೇಳಲಾಗಿ ನಿಮ್ಮ ಸ್ಥಳ ನಿಮಗೆ ಕೊಡುವುದಕ್ಕೆ ಚಿಂತೆಯೇನು ದಯಮಾಡಿ ಎಂದರು. ಈ ಪ್ರಕಾರವಾಗಿ ಆತನಿಗೆ ವಸ್ತ್ರ-ತಾಂಬೂಲ ಬಹುಮಾನಗಳ ಕೊಟ್ಟು ಕಳುಹಿಸಿ ಮತ್ತು ಹತ್ತು ದಿನಗಳು ಹೋದ ತರುವಾಯ ಈ ಯಲ್ಲಾರೆಡ್ಡಿಯವರ ಮನೆಮಗ್ಗುಲಲ್ಲಿ ಮನೆಕಟ್ಟಿಸಿ ಅಲ್ಲಿಯೇ ನೆಲೆ ನಿಂತರು. ಮುಂದೆ ಈ ಗ್ರಾಮಕ್ಕೆ 'ಹಂಡೆ ಅನಂತಪುರ'ವೆಂಬ ಹೆಸರು ಉಂಟಾಯಿತು.

ಈ ಮಲಕಪ್ಪನಾಯಕನ ಪಟ್ಟದ ಹೆಂಡತಿ ಶಿದ್ದರಾಮಮ್ಮನವರಿಗೆ ದೇವಪ್ಪನಾಯಕ, ಚಿಕ್ಕರಾಮಪ್ಪನಾಯಕ, ನಿಚ್ಚಮದ ಲಿಂಗಪ್ಪನಾಯಕ, ಹಂಪನಾಯಕ ಎಂದು ನಾಲ್ವರು ಮಕ್ಕಳಾದರು. ಈ ನಾಲ್ಕು ಜನ ಮಕ್ಕಳಲ್ಲಿ ಮೊದಲನೆಯ ಮಗನಿಗೆ ನಂದೇಲ ಸೀಮೆ, ಎರಡನೇ ಮಗನಾದ ಚಿಕ್ಕರಾಮಪ್ಪನಾಯಕನಿಗೆ ಬಳ್ಳಾರಿ ಮತ್ತು ಕುರುಗೋಡು ಸೀಮೆ, ೩ನೆಯ ಮಗನಾದ ನಿಚ್ಚಮದ ಲಿಂಗಪ್ಪನಾಯಕನಿಗೆ ಕುಂದರ್ಪಿಸೀಮೆ, ನಾಲ್ಕನೆಯ ಮಗನಿಗೆ ಹಂಪನಾಯಕನಿಗೆ ಅನಂತಪುರ, ಬುಕ್ಕಸಾಗರ, ಬುಕ್ಕಪಟ್ಟಣ, ಧರ್ಮಾವರ, ಸೀಮೆಗಳನ್ನು ಹಂಚಿಕೆ ಮಾಡಿದನು. ಹೀಗೆ ಆಳುತ್ತಿರು ವಾಗ ಹಂಡೆ ಮಲಕಪ್ಪನಾಯಕನು ಕ್ರಿ.ಶ. ೧೬೪೦ರಲ್ಲಿ ಮೃತನಾದನು. ಮುಂದೆ ನಾಲ್ಕನೆಯ ಮಗನಾದ ಹಂಪನಾಯಕನು ರಾಜ್ಯಭಾರಕ್ಕೆ ಬಂದನು. ಪ್ರಸನ್ನ ಸಿದ್ದಪ್ಪನಾಯಕನು, ಸಿದ್ದರಾಮವ್ವ, ಸಿದ್ದಪ್ಪನಾಯಕ ಅನಂತಪುರದೊಳಗೆ ಆಳ್ವಿಕೆ ನಡೆಸಿದವರಲ್ಲಿ ಪ್ರಮುಖರು.

ಪ್ರಸನ್ನಪ್ಪನಾಯಕನು ಮತ್ತು ಪವಾಡಪ್ಪನಾಯಕರು ಕ್ರಿ.ಶ. ೧೮೪೮ರಲ್ಲಿ ಪಟ್ಟಕ್ಕೆ ಬರುತ್ತಾರೆ. ರಾಜ್ಯ ಪರಿಪಾಲನೆ ಮಾಡುತ್ತಿರುವಾಗ ಕ್ರಿ.ಶ. ೧೭೧೧ರಲ್ಲಿ ಕಡಪದ ನವಾಬರಿಗೂ ಪ್ರಸನ್ನಪ್ಪನಾಯಕರಿಗೂ ಯುದ್ಧ ನಡೆಯುತ್ತದೆ. ಈ ಸಂದರ್ಭದಲ್ಲಿ ಅನಂತಪುರದ ವಿಚಾರಣೆಗೆ ಸಿರಿಯಪ್ಪ ಬಣಜಿನನ್ನು ಮಾಡಿ ಆ ಶಿರಿಯಪ್ಪನ ಸಂಗಡ "ರಾಜ್ಯದ ಮೇಲೆ ಒಂದು ಕಣ್ಣು ಕೆರೆಯ ಮ್ಯಾಲೆ ಒಂದು ಕಣ್ಣು" ಇರುಸು ಎಂದು ದೊರೆ ಅಪ್ಪಣೆ ಕೊಟ್ಟರು. ವೈಶಾಖ ಸಂದರ್ಭದಲ್ಲಿ ಮಳೆ ಸುರಿದುದ್ದರಿಂದ ಪ್ರವಾಹವು ಬಂದು ಎರಡು ತೂಬಿನೊಳಗು ನೀರು ಪ್ರವಾಹಿಸಿ ಮೂಡಲು ದೆಸೆಯಲ್ಲಿ ಒಂದು ತೂತು, ಪಡುವ ದೆಸೆಯಲ್ಲಿ ಒಂದು ತೂತು ಬಿದ್ದಿದು ಈ ಶಿರಯಪ್ಪ ಈ ವರ್ತಮಾನವನ್ನು ಕಂಡು ಪ್ರಸನ್ನಪ್ಪನಾಯಕರಿಗೆ ಕಾಗದ ಬರೆದು

ಕಳಿಸುತ್ತಾನೆ. ಈ ಎರಡು ತೂತುಗಳಿಗೆ ಹಂತರ ಹಾಕಿಸಿ ಗ್ರಾಮದೊಳಗೆ ಇದ್ದ ಒಕ್ಕಲಿಗರು, ಶಾನುಭೋಗರು ಹಾಗೂ ಪ್ರಜೆಗಳನ್ನು ಕರೆಕಳುಹಿಸಿ ರಾತ್ರಿ-ಹಗಲು ತೂಬುಗಳಿಗೆ ಹುಲ್ಲುಕಲ್ಲು, ಮಣ್ಣು ಹಾಕಿ ಕೆರೆ ಕಟ್ಟಿಸುತ್ತಾ ಇದ್ದನು. ಈ ಪ್ರಕಾರವಾಗಿ ಕೆರೆಕಟ್ಟೆ ಮೇಲೆ ಬರುತ್ತಿದ್ದ ಶಿರಿಯಪ್ಪ ಅಧೈರ್ಯ ಬಿದ್ದು ನಿಂತ ನಿಲುವಿನಲ್ಲಿಯೇ ಕೆಳಗೆ ಬಿದ್ದು ವದ್ದಾಡಿಕೊಂಡು ಸತ್ತುಹೋದನು. ಈ ವರ್ತಮಾನವನ್ನು ತಿಳಿದ ಪ್ರಸನ್ನಪ್ಪನಾಯಕನು ಕೆಲವು ದ್ರವ್ಯಕೊಟ್ಟು ಅವನ ಶವ ಸಂಸ್ಕಾರ ಮಾಡಿಸಿ ತಾನು ಅನಂತಪುರದೊಳಗೆ ಬಾರದೆ ಆ ಸಮೀಪದಲ್ಲಿ ಬಿಡಾರ ಹಾಕಿಕೊಂಡು ಹಗಲು-ರಾತ್ರಿ ಅಲ್ಲಿಯೇ ಇದ್ದು ಎರಡು ತೂತುಗಳನ್ನು ಮುಚ್ಚಿಸಿ ನಂತರ ಶಾಂತಿ ಮಾಡಿಸಿ ಅನಂತಪುರ ಗ್ರಾಮದೊಳಗೆ ಹೋಗುವುದೆಂದು ನುಡಿದರು.

ಸಿದ್ದಮ್ಮನವರಿಗೆ ರಾಮಪ್ಪನಾಯಕನು ಹುಟ್ಟಿ ನಾಲ್ಕು ವರುಷ ಚಿಕ್ಕವನಾಗಿರುವಾಗ ತಾಡಿಮರಿಯಿಂದ ವಸಂತವ್ವ ಲಚ್ಚವ್ವ ಎಂಬ ಪರಸ್ತ್ರೀಯವರು ಇಬ್ಬರು ಅನಂತಪುರಕ್ಕೆ ಬಂದು ತಮ್ಮ ಮೈಕಷ್ಟ ಮಾಡಿಕೊಂಡು ಇರುತ್ತಿದ್ದರು. ಆ ಗ್ರಾಮದೊಳಗೆ ಇದ್ದ ಜನರು ಅರಸನ ಮನೆಗೆ ಕೂಸುಗಳಿಗೆ ಹಾಲು ಮಜ್ಜಿಗೆಗೋಸ್ಕರ ಹೋಗುತ್ತಿರುವಾಗ ಅವರ ಸಂಗಡ ವಸಂತವ್ವ ಮಜ್ಜಿಗೆ ದೆಸೆಯಿಂದ ಹೋದುದರಿಂದ ಪ್ರಸನ್ನಪ್ಪನಾಯಕರು ಅವಳ ರೂಪಕ್ಕೆ ಮೋಡಿಯಾಗಿ ಅವಳನ್ನು ಮೋಹಿಸಿ ನಂತರ ಯಾರೆಂದು ಕೇಳಿದರೆ ಅವಳು ಭೋಗಶ್ರೀ ಎಂದು ವಿವರಿಸುತ್ತಾಳೆ. ಮುಂದೆ ಅವಳ ವೃತ್ತಾಂತವನ್ನು ಕೇಳಿದ ಪ್ರಸನ್ನಪ್ಪನಾಯಕನು ನೀನು ನಮ್ಮ ಬಳಿಯಲ್ಲೇ ಇರಬೇಕೆಂದು ವಿವರಿಸಿ ಅವಳಿಗೆ ಪ್ರತ್ಯೇಕವಾದ ವಸತಿಗೃಹವನ್ನು ನೀಡಿ ಅನ್ನವಸ್ತ್ರಕ್ಕೆ ಏರ್ಪಡು ಮಾಡಿದರು.

ವಸಂತಮ್ಮ ಲಚ್ಚವ್ವನ್ನನ್ನು ಬಿಟ್ಟಿರಲಾರಳು ಎಂಬ ವಿಷಯವನ್ನು ತಿಳಿದ ಪ್ರಸನ್ನಪ್ಪನಾಯಕನು ಅವಳನ್ನು ತನ್ನ ಜೊತೆಯಲ್ಲಿಯೇ ಬುಕ್ಕರಾಯ ಸಮುದ್ರಕ್ಕೆ ಹೋಗುವಾಗ ಕರೆದುಕೊಂಡು ಹೋಗುತ್ತಿದ್ದನು. ಈ ವರ್ತಮಾನವ ಅರಿತ ವಸಂತವ್ವಳು ಏನಾದರೂ ತೊಂದರೆ ಆಗಬಹುದೆಂದು ತಿಳಿದು ನೇರವಾಗಿ ತಾಡಿಮರಿಗೆ ಪ್ರಯಾಣ ಬೆಳೆಸಿದಳು. ತಾಡಿಮರಿಯ ದೊರೆಯಾದ ತಿರುಮಲ ನಾಯಕನ ಬಳಿ ಬಂದು ಸೇರಿದಳು. ಲಚ್ಚವ್ವಳು ತನ್ನ ತಂಗಿಗೆ ಮರೆಮಾಚಿ ಕೊಂಡಿರುವುದು ಸರಿಯಲ್ಲ ನೀನು ಇದ್ದ ಸ್ಥಳದಿಂದ ದ್ರವ್ಯವನ್ನು ಸಂಗ್ರಹಿಸಿಕೊಂಡು ಬಾ ಎಂದು ವರ್ತಮಾನವನ್ನು ಕಳುಹಿಸಿದಳು. ಮುಂದೆ ವಸಂತವ್ವಳು ಈ ವಿಷಯ ತಿಳಿದ ನಂತರ ಹಲವು ಸೈನ್ಯದೊಂದಿಗೆ ಅನಂತಪುರ ದೇವರಗುಡ್ಡದ ವೆಂಕಟೇಶ್ವರನ ದರುಶನಕ್ಕೆ ಒಂದು ಹರದಾರಿ ದೂರದಲ್ಲಿ ತಾಡಮರಿ ತಾಲೂಕು ಎಂಬ ಗ್ರಾಮಕ್ಕೆ ಇದರಿಂದ ಜನರನ್ನು ಕಟ್ಟಿಕೊಂಡು ದೇವರಗುಡ್ಡಕ್ಕೆ ಬಂದಳು. ಹೀಗಿರುವಾಗ ವಸಂತವ್ವಳು ಪ್ರಸನ್ನಪ್ಪನಾಯಕನಿಗೆ

ನಮ್ಮ ಅಕ್ಕ ದೇವರ ದರುಶನಕ್ಕೆ ಬಂದಿದ್ದಾಳೆ ತಾವು ಅಪ್ಪಣೆ ಕೊಟ್ಟರೆ ನಾನು ಅವಳ ದರುಶನವನ್ನು ಮಾಡಿಕೊಂಡು ಬರುತ್ತೇನೆ ಎಂದು ಬಿನ್ನವಿಸಿದಳು. ಈ ಪ್ರಕಾರವಾಗಿ ಪ್ರಸನ್ನಪ್ಪ ನಾಯಕನು ಕೆಲವು ಆಭರಣಗಳನ್ನು ಮತ್ತು ಹಲವು ಸೈನಿಕರನ್ನು ಅವಳ ಜೊತೆಗೆ ಕಳುಹಿಸಿ ಸಂಜೆಯೊಳಗೆ ಹಿಂದಿರುಗಬೇಕೆಂದು ಅಪ್ಪಣೆ ಕೊಟ್ಟನು. ಈ ಖುಷಿಯಿಂದ ವಸಂತವ್ವ ಒಂದೆರಡು ಮೈಲು ದೂರ ಹೋಗಿರುವಾಗಲೆ ಪ್ರಸನ್ನಪ್ಪನಾಯಕನಿಗೆ ಅನುಮಾನ ಬಂದುದರಿಂದ ತನ್ನ ಸೈನ್ಯದಿಂದ ಮತ್ತೆ ಅವಳೊಂದಿಗೆ ಹತ್ತು ಜನರನ್ನು ಕಳುಹಿಸಿ ಹಿಂದಕ್ಕೆ ಕರೆದುಕೊಂಡು ಬರುವಂತೆ ಹೇಳುತ್ತಾನೆ. ವಸಂತವ್ವಳಿಗೆ ಮುಂದೆ ನಿಮ್ಮ ಅಕ್ಕ ಇರುವ ಸ್ಥಳಕ್ಕೆ ಕಳುಹಿಸಿಕೊಡುತ್ತೇನೆ ಎಂದನು. ಇದರಿಂದ ತನ್ನ ಅಕ್ಕನ ಮುಖವನ್ನು ಕಾಣದೆ ವಾಪಸು ಆಗುತ್ತಾಳೆ. ಈ ಸಂದರ್ಭ ದಿಂದ ಅವಳ ಮನಸ್ಸು ಚಂಚಲವಾಗಲು ಕಾರಣವಾಯಿತು. ಮುಂದೆ ಪ್ರಸನ್ನಪ್ಪನಾಯಕನು ಮಲಗಿರುವಾಗ ಅಲ್ಲಿರುವ ಆಭರಣಗಳನ್ನು ನಡಕ್ಕೆ ಹಾಗೂ ತೊಡೆಗೆ ಕಟ್ಟಿಕೊಂಡು ಹಾಸಿಗೆ ಮೇಲೆಯಿದ್ದ ಕತ್ತಿಯನ್ನು(ಕಠಾರಿ) ತೆಗೆದುಕೊಂಡು ಪ್ರಸನ್ನಪ್ಪನಾಯಕನ ಕೊರಳ ಕೊಯ್ದು ಹೊರಟು ಹೋಗುವಾಗ ಕಣ್ಣುಗಳು ಕಾಣದೆ ದಾರಿಯ ಮಧ್ಯೆದಲ್ಲಿಯೇ ಸುತ್ತುತ್ತಿದ್ದಳು.

ಆ ಸಮಯದಲ್ಲಿ ಪ್ರಸನ್ನಪ್ಪನಾಯಕನ ಸರದಾರರು, ದಳವಾಯಿಗಳು ಹಾಗೂ ಹಾವಿನಾಯಕ ಮುಂತಾದವರು ಪ್ರಸನ್ನಪ್ಪನಾಯಕನ ಕಂಠಗತ ಪ್ರಾಣರಾಗಿ ಇದ್ದದ್ದನ್ನು ಕಂಡು ಅದೇ ಸಮಯದಲ್ಲಿ ವಸಂತವ್ವ ಮನೆಯಿಂದ ಹೊರಗಡೆ ಬಂದಿದ್ದನ್ನು ಕಂಡರು. ಹೀಗಿರುವಾಗ ಅವಳನ್ನು ಹಿಡಿದುಕೊಂಡು ಮನೆಗೆ ಕರೆತಂದರು. ಅರಮನೆಯಲ್ಲಿದ್ದ ಇಬ್ಬರು ಸ್ತ್ರೀಯರನ್ನು ಕರೆದು ಅವಳನ್ನು ಶೋಧಿಸಿದರು. ಇದರಿಂದ ವಸಂತವ್ವನ ಸೀರೆಯಿಂದ ನಗ-ನಾಣ್ಯಗಳು ತೆಗೆದು ಎಲ್ಲ ಆಭರಣಗಳನ್ನು ದಳವಾಯಿ ಮೊದಲಾದವರ ಕೈಯಲ್ಲಿ ಕೊಟ್ಟರು. ಮುಂದೆ ಈ ವಿಷಯವನ್ನು ಬುಕ್ಕಪಟ್ಟಣದ ಪ್ರಸನ್ನಪ್ಪನಾಯಕನ ತಮ್ಮನಾದ ಪವಾಡಪ್ಪನಾಯಕನಿಗೆ ನಡೆದ ಎಲ್ಲ ವರ್ತಮಾನವನ್ನು ತಿಳಿಸಿದರು. ಈ ವಿಷಯ ತಿಳಿದ ಕೂಡಲೇ ಪವಾಡಪ್ಪನಾಯಕನು ಬುಕ್ಕಪಟ್ಟಣಕ್ಕೆ ಬಂದನು. ಕೆರೆಯ ಏರಿಯ ಮೂಲಕ ಅನಂತಪುರಕ್ಕೆ ಕಳುಹಿಸಿದರು. ವಸಂತವ್ವನ್ನು ಕೋಟೆಯೊಳಗೆ ಇರಿಸಲಾಗಿ ಆ ಮುಂದೆ ಆದೇ ಕೋಟೆಯೊಳಗೆ ಮೃತಳಾದಳು.

ತರುವಾಯ ರಾಮಪ್ಪನಾಯಕ ಹಾಗೂ ಪವಾಡಪ್ಪನಾಯಕ ಅವರಳ ನಡುವೆ ಅನೇಕ ಘಟನೆಗಳು ಸಂಭವಿಸುತ್ತವೆ. ಅವು ವಸಂತವ್ವ ಮತ್ತು ಲಚ್ಚವ್ವವರ ನಡುವಿನ ಸಂಬಂಧಗಳಾಗಿರ ಬಹುದು. ಮುಂದೆ ಅನಂತಪುರದಲ್ಲಿ ಇರುವಾಗ ಮತ್ತೊಮ್ಮೆ ಅನಂತಪುರದಲ್ಲಿ ಬಾರಿ ಮಳೆ ಸುರಿದದ್ದರಿಂದ ಕೆರೆಗಳ ಏರಿಯು ಒಡೆದು ಪ್ರವಾಹ ಬಂದು ಎರಡು ತೂಬುಗಳಿಂದ ಬಾರಿ ಪ್ರಮಾಣದ ನೀರು ಊರ ಒಳಗೆ ಬಂದಿದ್ದು, ಊರ ಒಳಗೆ ಅನೇಕ ಕ್ರಿಮಿಕೀಟಗಳು

ಹಾವುಗಳು ಬಂದು ಸೇರಿದವು. ರಾಮಪ್ಪನಾಯಕನು ಕೆರೆಯನ್ನು ಎರಡು-ಮೂರು ತಿಂಗಳು ಹೋದ ನಂತರ ಭದ್ರಪಡಿಸಿದರು. ಹೀಗೆ ಸಾಮಾಜಿಕ ಕಾರ್ಯಗಳಿಗೆ ಹೆಚ್ಚಿನ ಆದ್ಯತೆಯನ್ನು ನೀಡಿದ ರಾಮಪ್ಪನಾಯಕನು ಜನಕಲ್ಯಾಣಕ್ಕಾಗಿ ಮತ್ತು ಧಾರ್ಮಿಕ ಕಾರ್ಯಗಳಿಗೆ ಆದ್ಯತೆ ನೀಡಿದನು.

ಪ್ರಸನ್ನಪ್ಪನಾಯಕರ ಮಗನಾದ ರಾಮಪ್ಪನಾಯಕರು ಸಮೀಪದಲ್ಲಿದ್ದ ಪವಾಡಪ್ಪನಾಯಕನ ಮಗ ಸಿದ್ದಪ್ಪನಾಯಕನಿಗೆ ಹೊಸಕೆರೆ ಬಳಿಯಲ್ಲಿ ಕ್ರಿ.ಶ.೧೭೩೮ರಲ್ಲಿ ಪಟ್ಟಾಭಿಷೇಕವಾಗಿ ರಾಜ್ಯಭಾರ ಮಾಡುತ್ತಿದ್ದನು. ಅನಂತಪುರದಲ್ಲಿ ಇದ್ದ ಪ್ರಸನ್ನಪ್ಪನಾಯಕನ ಹೆಂಡತಿ ಸಿದ್ದವ್ವ ತನ್ನ ಮಗನಿಗೆ ಪಟ್ಟಾಭಿಷೇಕವಾಗಿ ರಾಜ್ಯವಾಳುವ ಹಕ್ಕು ಇದ್ದರೂ ಅದನ್ನು ತಪ್ಪಿಸಿ ಮೈದುನ ಮಗನಿಗೆ ಪಟ್ಟ ಕಟ್ಟಿದರು. ಇದರಿಂದ ನಮಗೆ ತೊಂದರೆ ಆಗಬಹುದೆಂದು ತಿಳಿದು ತನ್ನ ಮಗನಾದ ರಾಮಪ್ಪ ನಾಯಕನನ್ನು ಕರೆದುಕೊಂಡು ಅನಂತಪುರ ಬಿಟ್ಟು ತಮ್ಮ ಸಂಸ್ಥಾನಕ್ಕೆ ಆಪ್ತನಾಗಿದ್ದ ಹೊಸೂರು ಮುದ್ದಮಲ್ಲಪ್ಪನವರ ಬಳಿಗೆ ಹೋದರು. ಆತನು ಬಹಳ ಪ್ರೀತಿಯಿಂದ ಸಂರಕ್ಷಿಸುತ್ತಾ ಇದ್ದನು. ಎರಡು ತಿಂಗಳ ಕಾಲ ಸಿದ್ದಮ್ಮ ಮತ್ತು ಮಗನಾದ ರಾಮಪ್ಪನಾಯಕನು ಇಲ್ಲಿಯೇ ಇರುತ್ತಿದ್ದರು.

ಮುಂದೆ ವೈವಾಹಿಕ ಸಂಬಂಧದಿಂದ ಹೊಸಕೆರೆಯೊಳಗೆ ಇದ್ದ ಸಿದ್ದಪ್ಪನಾಯಕನು ಅನಂತಪುರಕ್ಕೆ ಹೋಗಿ ಬಳ್ಳಾರಿ ರಾಮಪ್ಪನಾಯಕನ ಹೆಂಡತಿ ಸಿದ್ದಮ್ಮನ ತಂಗಿಯಾದ ಭದ್ರವ್ವನನ್ನು ಮದುವೆ ಮಾಡಿಕೊಂಡನು. ಮದುವೆಯಾದ ಕೆಲವೇ ದಿನಗಳಲ್ಲಿ ಸಿದ್ದಪ್ಪನಾಯಕನು ಮದ್ಯಪಾನ ಕುಡಿಯುವನು. ಇದರಿಂದ ಕಾಮೋದ್ರೇಕಿಯಾಗಿ ಗ್ರಾಮದೊಳಗೆ ಇದ್ದ ಸಂಸಾರಿ ಗಳೊಳಗೆ ಎಲ್ಲಿ ಚೆಲುವೆಯರು ಇರುತ್ತಾರೆ ಅವರನ್ನು ಬಲಾತ್ಕಾರದಿಂದ ಕೆಡಿಸುತ್ತಾ ಇದ್ದನು. ಈ ಪ್ರಸಂಗವನ್ನು ನೋಡಿದ ಅನಂತಪುರ ಮತ್ತು ಬುಕ್ಕರಾಯ ಸಮುದ್ರದ ಜನರು ಈ ಪ್ರಭು ದುರ್ಮಾರ್ಗ ಪ್ರವರ್ತನೆ ನಡೆಸುತ್ತಿದ್ದಾನೆ. ಇದರಿಂದ ಜನರು ಮನೆ ಮಠ ಬಿಟ್ಟು ಹೋದದ್ದರಿಂದ ಈ ವರ್ತಮಾನವು ರಾಜ್ಯದ ಮೇಲೆ ಹರಡಿಹೋಯಿತು. ಈ ರಾಜ್ಯದಲ್ಲಿದ್ದ ರೆಡ್ಡಿ, ಗೌಡಗಳು, ಶಾನುಭೋಗರು, ಕಿಲ್ಲೇದಾರರು, ಇವರು ಈ ರಾಜ್ಯದಲ್ಲಿ ಎಷ್ಟು ದಿವಸಗಳು ಇದ್ದರೂ ಅಪಕೀರ್ತಿ ಬಾರದಂತೆ ಈ ಸಂಸ್ಥಾನವು ಹೋಗಲಾಡಿಸಿಕೊಳ್ಳಬಾರದು ತಾವು ತಮ್ಮೊಳಗೆ ಇದ್ದ ಪಟ್ಟಣಕ್ಕೆ ಹಕ್ಕುದಾರ ಪ್ರಸನ್ನಪ್ಪನಾಯಕನ ಮಗ ರಾಮಪ್ಪನಾಯಕನ ಹೊಸೂರು ಮುದ್ದು ಮಲ್ಲಪ್ಪನವರ ಮತ್ತು ರಾಮಪ್ಪನಾಯಕರ ಸಂಗಡವು ಇಲ್ಲಿ ನಡೆಯುವ ವಿದ್ಯಮಾನಗಳಿಗೆ ಯೋಚನೆ ಮಾಡದೇ ಈ ರಾಮಪ್ಪನಾಯಕನ ನಮ್ಮ ಜೊತೆಗೆ ಕಳುಹಿಸಿ ಎಂದು ಮುದ್ದುಮಲ್ಲಪ್ಪನಿಗೆ ಹೇಳಲಾಯಿತು. ಹೀಗಾಗಿ ಭರವಸೆಯಿಂದ ರಾಮಪ್ಪ ನಾಯಕನನ್ನು ಸಂಗಡವೇ ಕರೆದುಕೊಂಡು ಕೊಡಕೊಳ್ಳಿಗೆ ಬಂದು ಮುಟ್ಟಿದರು. ಹೀಗೆ ರಾಮಪ್ಪನಾಯಕನು ಕೊಡಕೊಳ್ಳಕ್ಕೆ ಸೇರಿದ

ವರ್ತಮಾನವು ಕೇಳಿ ತಾವು ದಯಮಾಡಿ ಅನಂತಪುರ ಮತ್ತು ಬುಕ್ಕರಾಯ ಸಮುದ್ರ ಈ ಎರಡು ಗ್ರಾಮಗಳ ಕಾಣ ಹಾಕಿಸಿಕೊಂಡರೆ ನಾವು ಈ ಗ್ರಾಮದೊಳಗೆ ಇರುತ್ತೇವೆ. ಇಲ್ಲವಾದರೆ ನಾವು ಈ ಊರು ಬಿಟ್ಟು ಹೋಗುತ್ತೇವೆ ಎಂದು ವಿನಂತಿಸಿಕೊಂಡರು. ಮುಂದೆ ರಾಮಪ್ಪ ನಾಯಕನು ಊರ ಜನರನ್ನು ಕರೆದುಕೊಂಡು ಬಂದು ಠಾಣೆ ಹಾಕಿಕೊಂಡರು. ಮುಂದೆ ಸಿದ್ದಪ್ಪನಾಯಕನು ತಮ್ಮ ಹಿರಿಯರು ಗಳಿಸಿದ ಆಯುಧಗಳನ್ನು ತೆಗೆದುಕೊಂಡು ಗ್ರಾಮ ಬಿಟ್ಟು ತಾಡಿಮರಿಯಲ್ಲಿ ರಾಜ್ಯಭಾರ ಮಾಡುತ್ತಿದ್ದ ತಿರುಮಲನಾಯಕರ ಬಳಿಗೆ ಹೋಗುತ್ತಾನೆ. ಮುಂದೆ ತಿರುಮಲನಾಯಕನು ಮತ್ತು ಆತನ ಪ್ರಧಾನಿಯಾದ ಅಲೇಟಿ ಪೆದ್ದಣ್ಣನು ಅ ಸಿದ್ದಪ್ಪನಾಯಕನಿಗೆ ಸಹಾಯ ಮಾಡುತ್ತಾನೆ. ಸಿದ್ದಪ್ಪನಾಯಕ ಹಾಗೂ  ರಾಮಪ್ಪನಾಯಕರು ಕೆಲವೊಂದು ಅನ್ಯಕಾರ್ಯ ನಿಮಿತ್ತ ದ್ವೇಷವನ್ನು ಬೆಳೆಸಿಕೊಳ್ಳುತ್ತಾರೆ. ಈ ಪ್ರಕಾರವಾಗಿ ಸಿದ್ದಪ್ಪನಾಯಕನು ಸೈನ್ಯಸಮೇತನಾಗಿ ರಾಮಪ್ಪನಾಯಕನ ಮೇಲೆ ಎರಗುವ ಸಂದರ್ಭದಲ್ಲಿ ರಾಮಪ್ಪನಾಯಕನು ಹಿಂದೂರಾಯರ ಮಗನಾದ ಮುರಾರಿರಾಯರು ಸೈನ್ಯಸಮೇತವಾಗಿ ಹೊರಟನು.

ಮುರಾರಿರಾಯರು ಅದೇ ಪ್ರಕಾರವಾಗಿ ರಾಮಪ್ಪನಾಯಕರ ಸಂಗಡ ಸೈನ್ಯ ಸಮೇತವಾಗಿ ಬಂದು ಆ ತಾಡಿಮರಿಯವರ ಫೌಜಿನ ಮೇಲೆ ಊರು ಲೂಟಿ ಮಾಡುತ್ತಿರುವಾಗ ರಾಮಪ್ಪ ನಾಯಕನ ಪ್ರತ್ಯೇಕ ದಂಡು ಬಂತು. ಸಿದ್ದಪ್ಪನಾಯಕನನ್ನು ಸಹಕರಿಸಿದ್ದ ಅಲೇಟಿ ಹಿರಿಯಣ್ಣ ಪೆದ್ದಣ್ಣನ ಸೈನ್ಯದ ಮೇಲೆ ಯುದ್ಧ ಮಾಡಲಾಯಿತು. ತಾಡಿಮರಿಯಿಂದ ಬಂದ ಸೈನಿಕರು ಹೋರಟುಹೋದರು. ಮುಂದೆ ಮುರಾರಿರಾಯರ ಫೌಜು ಎರಡು ಭಾಗವಾಗಿ ಉಪ್ಪಾರಹಳ್ಳಿ ಮಾರ್ಗವಾಗಿ ಗುಂಡಾಯಂಬ ಗುಡ್ಡದ ಕಡೆಗೆ ಇನ್ನೊಂದು ದಂಡು ದೇವರಗುಡ್ಡದ ಕಡೆಗೆ ಹೋಯಿತು. ಮುಂದೆ ಸಿದ್ದಪ್ಪನಾಯಕನು ದೇವರಗುಡ್ಡದ ಬಳಿ ಸಿಕ್ಕಿದ್ದರಿಂದ ರಾಮಪ್ಪನಾಯಕನು ಕರೆದುಕೊಂಡು ಬಂದು ಕೋಟೆಯೊಳಗೆ ಜೋಪಾನ ಮಾಡುತ್ತಿರುವಾಗ ಸಿದ್ದಪ್ಪನಾಯಕನು ಬಹಳ ರೋಷದಿಂದ ಅನ್ನವನ್ನು ತ್ಯಜಿಸಿದ್ದರಿಂದ ತೀರಿಹೋದನು. ಹೀಗಿರುವಾಗ ಜನರು ಸಿದ್ದಪ್ಪನಾಯಕನನ್ನು ಕತ್ತು ಕಿವಿಚಿ ಕೊಂದರೆಂದು ಹೇಳಿಕೊಳ್ಳುತ್ತಿದ್ದರು. ಕ್ರಿ.ಶ. ೧೭೪೫ ರಲ್ಲಿ ಅನಂತಪುರದ ಪ್ರವಾಹ ಬಂದು ಕೆರೆಗೆ ತೂತು ಬಿದ್ದುದರಿಂದ ರಾಮಪ್ಪನಾಯಕನು ಅದನ್ನು ಬಂದೋಬಸ್ತು ಪಡಿಸಿದನು.

ತರುವಾಯ ಈ ಪವಾಡಪ್ಪ ನಾಯಕನ ಕ್ರಿ.ಶ. ೧೭೬೦ರಲ್ಲಿ ರಾಜ್ಯ ಪರಿಪಾಲನೆ ಮಾಡುವಾಗ ಫೌಜುದಾರರಾದ ಸರದಾರ ಖಾನ್, ಅಲ್ಲಿಖಾನ್, ಮಹಮ್ಮದ್ ಖಾನ್ ಇವರು ಕಡಪದ ನವಾಬರ ನಡೆಯಿಂದ ಅನಂತಪುರದ ಹತ್ತಿರದ ಜೂಟೂರು ಹಳ್ಳದ ದಿಬ್ಬೆಯಲ್ಲಿ ವಸತಿಯನ್ನು ನಿರ್ಮಿಸಿಕೊಂಡು ಇದ್ದರು. ಆ ಫೌಜುದಾರರು ರಾಮಾಜಿಯನ್ನು ವರ್ತಮಾನದಲ್ಲಿ ನಡೆದ

ಎಲ್ಲ ವಿಷಯಗಳನ್ನು ಕೇಳಲಾಗಿ ಆತನ ಡೈಮುದಾರನು ಅಲ್ಲಿ ಬಲವೇನು ಇಲ್ಲ, ನೀವು ನೀವು ಧಣಿ ದರುಶನವು ಆಗುತ್ತದೆಂದು ಅಪ್ಪಣೆ ಕೊಟ್ಟರೆ ನಾನು ಪವಾಡಪ್ಪನಾಯಕರಿಗೆ ಈ ವರ್ತಮಾನವನ್ನು ಹೇಳಿ ನೀವು ದರುಶನಕ್ಕೆ ಬರುವುದಕ್ಕೆ ಅವಕಾಶ ಕಲ್ಪಿಸಿಕೊಡುತ್ತೇನೆ. ನೀವು ಬಂದು ದರ್ಶನವಾದ ತರುವಾಯ ನಿಮ್ಮ ಸಂಸ್ಥಾನದ ಹಣಗಳು ಮೂರು ನಾಲ್ಕು ವರುಷಗಳಿಂದ ಬಾಕಿ ಇದ್ದುದ್ದರಿಂದ ನಮ್ಮ ಧಣಿ ಅಪ್ಪಣೆ ಆಯಿತು.

ನೀವು ಹಣ ಕೊಟ್ಟರೆ ಸರಿ ಇಲ್ಲದಿದ್ದರೆ ನಮ್ಮ ಸಂಗಡ ಬಂದರೆ ಸರಿ ಎಂದ್ದೇಳಿ ಸರದಾರನನ್ನು ಮೋಸದಿಂದ ಕುಳ್ಳಿರಿಸಿ ಆಮೇಲೆ ನಿಮ್ಮ ರಾಜ್ಯ ಸ್ವಾಧೀನವಾಗುವುದೆಂದು ಕೆಟ್ಟ ವಿಚಾರಗಳನ್ನು ಹೇಳಿ ಅವರ ಬಳಿಯಲ್ಲಿ ಅಪ್ಪಣೆ ತೆಗೆದುಕೊಂಡು ಕೋಟೆಯೊಳಗೆ ಬಂದು ಇಲ್ಲಿ ಪವಾಡಪ್ಪನಾಯಕನ ಸಂಗಡ ಸೇನಾನಾಯಕರು ನಿಮ್ಮ ದರುಶನಕ್ಕೆ ಬರಬೇಕೆಂದು ಬಹಳ ವಿಧವಾಗಿ ಹೇಳಿ ಕಳುಹಿಸಿದರು. ಇಲ್ಲಿ ನಡೆದ ಎಲ್ಲ ವಿಚಾರಗಳನ್ನು ಪವಾಡಪ್ಪನಾಯಕನ ಅಪ್ಪಣೆ ಆಯಿತು. ಫೌಜುದಾರರು, ವಕೀಲುಗಳು ತಮ್ಮ ದರುಶನಕ್ಕೆ ಅನಂತಪುರಕ್ಕೆ ಬರಲು ಅಪ್ಪಣೆಯೊಂದಿಗೆ ಭೇಟಿಯಾಗಿ ಮುಂದೆ ಪವಾಡಪ್ಪನಾಯಕನ ಹಣ ಖಂಡಿತ ಕೊಟ್ಟರೆ ಸರಿ. ಇಲ್ಲವಾದರೆ ನಮ್ಮ ಸಂಗಡ ಕಡಪ ನವಾಬರೆ ರಾಜ್ಯಕ್ಕೆ ಬರಬೇಕೆಂದು ಹೇಳಲಾಯಿತು. ಅದಕ್ಕೆ ಸಾಹೇಬರವರು ಹೇಳಿದ್ದು ಹಣವನ್ನು ಕೊಡುವುದಾಗಿ ನವಾಗ ಸಾಹೇಬರವರು ಸನ್ನದ್ದು ಇದ್ದರೆ ಕೊಡಿ ಎಂದು ನಿಮ್ಮ ಸಂಗಡ ಬರುವುದಾಗಿ ತಿಳಿಸುತ್ತಾನೆ.

ಅವರಿಗೆ ಕೋಪವು ಬಂದು ನಾವು ಬಂದದ್ದು ಸಾಲದೆ, ಸನ್ನದ್ದು ಬೇಕೇ, ಆದರೆ ಚಿಂತೆಯಿಲ್ಲ ನೀವು ನಮ್ಮ ಸಂಗಡ ಬರಲೇಬೇಡ. ನಾಲ್ಕು ವರ್ಷಗಳಿಂದ ಕೊಡಬೇಕಾದ ಹಣವನ್ನು ಸಂದಾಯ ಮಾಡಿ ಮೋಸದಿಂದ ಕೂಡಿ ಹಾಕಿ ಬಹಳ ಸಂಕಟಪಡಿಸಿದ್ದರಿಂದ ಆ ಮೋಸದ ನಿರ್ಬಂಧ ಮಾಡಿ ಅನ್ನಕ್ಕೆ ನೀರಿಗೆ ಸಹ ತೊಂದರೆ ಕೊಟ್ಟ ವರ್ತಮಾನವನ್ನು ಹೊಸಕೆರೆ ಮಠದಲ್ಲಿ ಇರುವ ನಿಡುಮಾಮಿಡಿ ಸ್ವಾಮಿಗಳವರು ಕೇಳಿ ಬುಕ್ಕಪಟ್ಟಣಕ್ಕೆ ಸಮೀಪ ಹೊಕೆರೆಯೊಳಗೆ ಇದ್ದ ಯಾವತ್ತು ಜನರನ್ನು ತೆಗೆದುಕೊಂಡು ಅನಂತಪುರಕ್ಕೆ ಬಂದು ದೊರೆಯವರ ಗೃಹಕ್ಕೆ ಪಶ್ಚಿಮಭಾಗದಲ್ಲಿರುವ ದೊರೆ ಭಾವ ಮೈದುನ ಚನ್ನಬಸಪ್ಪನನ್ನು ಕರಸಿಕೊಂಡು ಈ ಎರಡು ಸಂಸ್ಥಾನವು ಮುಳುಗಿಸುವುದಕ್ಕೆ ರಾಮಾಜಿ ಮಾಡಿದ ಕೃತ್ಯವೆಂದು ಯಾವುದೇ ವರ್ತಮಾನವು ತಿಳಿಯ ಮಾಡಿ ದೊರೆಯವರನ್ನು ತೆಗೆದುಕೊಂಡು ಹೋಗುವುದಕ್ಕೆ ಪ್ರಯತ್ನ ಪಟ್ಟು ಇರುತ್ತಾರೆ. ನಾವು ಇದನ್ನು ತಪ್ಪಿಸತಕ್ಕ ಉಪಾಯ ಮಾಡಬೇಕೆಂದು ಯೋಚಿಸಿ ಚನ್ನಬಸಪ್ಪನನ್ನು ದಿಡ್ಡಿ ಬಾಗಿಲು ಹೊರಗೆ ಇರುವ ಹೂವಿನ ತೋಟದೊಳಗೆ ಶಿವಪೂಜೆಗೆ ಹೂವುಗಳ ನಿಮಿತ್ಯವೆಂದು ಸಂಗಡ ಕರೆದುಕೊಂಡು ಹೋಗಿದ್ದರು.

ಗ್ರಾಮದಲ್ಲಿದ್ದ ಸಿಂಗರಾಯನ ತಿಮ್ಮಯ್ಯ ಚಿಕ್ಕಚನ್ನಯ್ಯ ಪಾಪಯ್ಯ ಇವರು ಬುಕ್ಕರಾಯ ಸಮುದ್ರದೊಳಗೆ ಇದ್ದದ್ದು ಕಂಡುಬರುತ್ತದೆ. ಇಂತಹ ಬಲಾಢ್ಯರನ್ನು ಸಂಸ್ಥಾನದೊಳಗೆ ಇರುವಾಗ ಯೋಗ ಬಂದಿರುತ್ತದೆ. ದೊರೆಯನ್ನು ಅನ್ನಕ್ಕೆ ವೀರಾಗೆ ಬಿಡದೆ ಇಕ್ಕಟ್ಟು ಪಡಿಸಬಾರದೆಂದು ಇದು ಧರ್ಮವೆಂದು ಹೇಳಲಾಗುವುದಿಲ್ಲ. ಹೀಗಿರುವಾಗ ಫೌಜುದಾರರು ಹತ್ತಿರ ಬಂದು ನಾವು ಏನನ್ನಾದರೂ ತೊಂದರೆ ಮಾಡಿದ್ದರೆ ನಮ್ಮ ಧಣಿ ಮತ್ತು ನಮ್ಮನ್ನು ಏಕೆ ಬಂದನು ಕೇಳುತ್ತಾರೆ. ಚನ್ನಬಸಪ್ಪನ ಸಂಗಡ ಹೇಳಿದ ಯೋಚನೆಯನ್ನು ದಿಡ್ಡಿ ಬಾಗಿಲವರೆಗೆ ಅವರ ಸ್ವಾತಂತ್ರ್ಯವಿಲ್ಲ ನಮ್ಮ ಸ್ವಂತ ಜೀತಗಾರರು ಹುಲ್ಲಕೊಯ್ದು ದನಗಳಿಗೆ ರಾಜಗೃಹದಲ್ಲಿ ಕಟ್ಟಿಕೊಂಡು ಹೋಗುವಂತೆ ಚನ್ನಬಸಪ್ಪ ಸ್ವಾಮಿ ಹೇಳಿದರು. ಹೀಗಿರುವಾಗ ಸಾಗಿಹೋಗಿ ಆಯುಧಗಳನ್ನು ಹುಲ್ಲಿನವರೆಗಳಲ್ಲಿ ಕಟ್ಟಿಕೊಂಡು ನಮ್ಮ ಬಿಕ್ಕಲುಗಾರರ ಸಂಗಡ ಕೂಡಿ ದಾಮಹಟ್ಟಿ ಹಳೇರಾಜರು ಗೃಹಕ್ಕೆ ಬಂದು ಕೂಡಿದರೆ ನಿಮಗೆ ಅನ್ನವು ಅರಮನೆಯಿಂದಲೆ ಕೊಡಲಾಗುವುದು ಎಂದು ಹೇಳಿ ಪಟ್ಟಣದೊಳಗಿರುವ ಕುಮಾರನಿಗೆ ಹೇಳಿ ಕಳುಹಿಸಿದರು, ರಾಜಗೃಹದಲ್ಲಿ ಇರುವಾಗ ಪಡಸಾಲೆಯ ಮೂಲೆಯಿಂದ ಸರದಾರ ದಿಟ್ಟಿ ಚಲುಕರಗಳು ಹಾಗೂ ಅಗ್ಯಗಳನ್ನು ಕೊರೆದು ಒಳಗೆ ಮಾರ್ಗ ಮಾಡಿದರು. ಇಷ್ಟರೊಳಗೆ ಪಹರೆಯಿದ್ದ ಸಿಪಾಯಿಗಳು ಮೋಸವಾಯಿತೆಂದು ಗಲಭೆ ಮಾಡಿದದು ಕೇಳಿ ದಿವಾನ ಪಾವಟಿಗಳ ಮೇಲೆ ನಿಂತು ಕೆಲವರನ್ನು ನೋಡುತ್ತಿರುವಾಗ ರಾಮೇಶ್ವರರ ಮಾಳಿಗೆ ಹತ್ತಿ ತುಬಾಕಿಗಳಿಂದ ಬೀಲ ಸುಡಲಾಗಿ ಆ ೧೦೦ ಸಿಪಾಯಿಗಳು ಸತ್ತರು. ಈ ಫೌಜುದಾರರು ಸತ್ತ ಸುದ್ದಿಯನ್ನು ಕೇಳಿದ ತಮ್ಮ ಜನಗಳು ಆಯುಧಗಳಿಂದ ಅರಮನೆಗೆ ನುಗ್ಗಿ ದೊರೆಯನ್ನು ಬಡಿಯಬೇಕೆಂದು ಬರುವಾಗ ಚನ್ನಬಸಪ್ಪ ಸ್ವಾಮಿಯು ಅಪಾರ ಅರಗಳದಲ್ಲಿ ಇದ್ದುದರಿಂದ ಬಾಗಿಲನ್ನು ಬಂದು ಮಾಡಿಸಿದನು. ಈ ವರ್ತಮಾನವನ್ನು ತಿಳಿದ ಪವಾಡಪ್ಪನಾಯಕನ ಸರದಾರರಿಗೂ ಪೌಜುದಾರರ ಜನಗಳ ನಡುವೆ ಯುದ್ದ ಪ್ರಾರಂಭವಾಗಿ ಫೌಜುದಾರರ ಫೌಜುಮುರಿದು ರಾತ್ರಿ ಊರ ಹೊರಗಿನ ಬಾಗಿಲಿಗೆ ನಿಂತರು. ಚನ್ನಬಸಪ್ಪ ತನ್ನ ಬಳಿಯಲ್ಲಿ ಬಂದ ಜನರನ್ನು ಕಲ್ಲು ಬಾಗಿಲು ಮೇಲೆ ಅತ್ತಿಸಿ ಮಾಳಿಗೆ ಮೇಲೆ ಇರುವ ಕಲ್ಲುಗಳನ್ನು ಕೀಳಿಸಿ ಕೋದಾರದೊಳಗಿದ್ದ ಮದ್ದಿನ ಚೀಲಗಳನ್ನು ತರಿಸಿ ತಮ್ಮ ಬಳಿಯ ಇರುವು ತುಬಾಕಿಗಳಿಂದ ಸುಡಿಸಲಾಗಿ ಫೌಜುದಾರರ ನಿರ್ವಾಣ ಮಾಡಲಾರದೆ ತನ್ನ ಬಳಿಯಿರುವ ವಾಲೆಕಾರ ಜವಾನನನ್ನು ಕರೆಸಿ ತುಬಾಕಿಯಿಂದ ಫೌಜುದಾರರನ್ನು ಸುಡಿಸಿದ. ಹಿಗಿರುವಾಗ ಚನ್ನಬಸಪ್ಪನ ಮಂದಿ ಮತ್ತು ಫೌಜುದಾರನ ಮಂದಿ ಯುದ್ಧವು ನಡೆಯುತ್ತಾ ಪೇಟೆಯೊಳಗಿರುವ ವಿರುಪಾಕ್ಷೇಶ್ವರನ ದೇವಾಲಯದ ಬಳಿ ಬಂದರು. ಅಷ್ಟರೊಳಗೆ ಸರದಾರರು ಮತ್ತು ಪವಾಡಪ್ಪನಾಯಕನವರು ಅರಮನೆಯಿಂದ ಹೊರಟು ಬಂದು ಒಬ್ಬ ಸರದಾರನಿಗೆ ಕಣ್ಣಿಗೆ ಗುಂಡು ತಾಕಿದ್ದುದರಿಂದ ಅವನನ್ನು ಕುದುರೆ ಮೇಲೆ ಕರೆದುಕೊಂಡು ಹೋಗಿ ತನ್ನ ಸ್ವಾಧೀನ

ಪಡಿಸಿಕೊಂಡನು. ತರುವಾಯ ಫೌಜುದಾರರ ೩ ಶವಗಳನ್ನು ಹೂಳಿಸಿ ಅವರ ಬಳಿಯಲ್ಲಿದ್ದ ತುಬಾಕಿಗಳನ್ನು ವಶಪಡಿಸಿಕೊಂಡರು. ಈ ವರ್ತಮಾನ ಎಲ್ಲವೂ ಕಡಪ ನವಾಬರ ವಕೀಲರಾದ ರಾಮಾಜಿ ಇತ್ತ ಮದುವೆ ತಯಾರಿಯಲ್ಲಿ ಇರುವಾಗ ಆತನನ್ನು ಕರೆ ಕಳುಹಿಸಿ ನೀನು ಮಾಡಿದ ತಪ್ಪಿನಿಂದ ನಮ್ಮ ಸಂಸ್ಥಾನ ತೆಗೆಯುವ ಪ್ರಯತ್ನ ಮಾಡಿದ್ದು ಈ ಹಿನ್ನೆಲೆಯಲ್ಲಿ ಮದುವೆ ಕೆಲಸಕ್ಕೆ ಅಡ್ಡಿ ಮಾಡಿ ಆತನನ್ನು ಸೆರೆಯಲ್ಲಿ ಕೂಡಿಸಿ ಮನೆಯನ್ನು ವಶಪಡಿಸಿ ಕೊಳ್ಳಲಾಯಿತು. ಈ ದೊರೆ ಪವಾಡಪ್ಪನಾಯಕನು ಬುಕ್ಕರಾಯ ಸಮುದ್ರದಿಂದ ವೀರಭದ್ರ ಸ್ವಾಮಿಯವರ ದರ್ಶನಕ್ಕೆ ಹೋಗುತ್ತಿರುವಾಗ ರಾಮಾಜಿಯನ್ನು ಮೋಸದಿಂದ ಜೊತೆಗೆ ಕರೆದುಕೊಂಡು ಹೋಗಿ ಕಿಲ್ಲೆದಾರನಾದ ಬಸಪ್ಪನಿಗೆ ರಾಮಾಜಿಯನ್ನು ಒಪ್ಪಿಸಲಾಗಿ ಮುಂದೆ ಅನಂತಪುರಕ್ಕೆ (ಹೊರಟನು) ಬಂದನು. ನಂತರ ೪ ದಿವಸಗಳ ಮೇಲೆ ಈ ರಾಮಾಜಿಯನ್ನು ಕರೆಕಳುಹಿಸಿ ನೀನು ಸ್ವಾಮಿ ದ್ರೋಹಿ ಎಂದು ಸಂದರ್ಭಗಳಿಂದ ಕಠಿಣವಾಗಿ ನುಡಿಯಲಾಗಿ ಆತನ ನಾಲಗೆಯನ್ನು ಕೊಯಿಸಿದರು. ಹೀಗಾಗಿ ರಾಮಾಜಿಯು ನಾಲಗೆಯನ್ನು ಬುಡದಿಂದ ಕಿತ್ತುಕೊಂಡು ಸತ್ತನು. ಅ ಹೆಣವನ್ನು ಒಂದು ಕಾಟೀರದಲ್ಲಿ ಹಾಕಿ ಮಣ್ಣು ಮುಚ್ಚಿದರು.

ಪವಾಡಪ್ಪನಾಯಕನಿಗೆ ತಗುಲಿದ್ದ ಬ್ರಹ್ಮಹತ್ಯ ಹೇಗೆ ಬಿಟ್ಟು ಹೋಗಬೇಕೆಂದು ಆಲೋಚಿಸಿ ದಾಗ ಇದಕ್ಕೆ ಪರಿಹಾರಾತ್ಮವಾಗಿ ಬ್ರಾಹ್ಮಣರನ್ನು ಕೇಳಿದಾಗ ಗೋಕರ್ಣ ಯಾತ್ರೆ ಮಾಡಿಬಂದರೆ ಬಿಡುವುದೆಂದು ಹೇಳಿದರು. ಈ ಪ್ರಕಾರ ಜಮಾದಾರ ಖಾನ್ ಮತ್ತು ಮಲ್ಲಪ್ಪನನ್ನು ಜೊತೆಯೊಂದಿಗೆ ತನ್ನ ಹೆಂಡತಿಯಾದ ದೇವವ್ವ ಗಿರಿಜವ್ವ ಹಾಗೂ ಮಗನಾದ ಸಿದಪ್ಪನಾಯಕನನ್ನು ಜೊತೆಗೆ ಕರೆದುಕೊಂಡು ಪ್ರಯಾಣ ಬೆಳೆಸಿದರು. ಪವಾಡಪ್ಪನಾಯಕನು ಗೋಕರ್ಣಕ್ಕೆ ಹೋದರೆ ತನ್ನ ಅಧಿಕಾರವು ಸಾಗದೆಂದು ನೆನಪಿಸಿ ಆತನಿಗೆ ದುರ್ಬುದ್ಧಿ ತುಂಬಿ ಆತನ ಕೈಗಳಿಂದಲೆ ಕುತ್ತಿಗೆ ಕೊಯಿಸಿಕೊಂಡು ಸಾಯುವ ಹಾಗೆ ಮಾಡಿತು. ಇವನ ಸಂಗಡದೊಂದಿಗೆ ಇದ್ದ ಜಮಾದಾರ ಖಾನ್ ಮತ್ತು ಮಲ್ಲಪ್ಪ ನೀವು ರೋದನ ಪಡಬೇಡಿರಿ ನಾವು ರಾಜ್ಯದೊಳಗೆ ಇದ್ದೇವೆ ಮುಂದೆ ರಾಜ್ಯದ ಕೆಲಸ ಕಾರ್ಯಗಳನ್ನು ಕೆಟ್ಟು ಹೋಗದಂತೆ ಚೆನ್ನಾಗಿ ನೋಡಿಕೊಳ್ಳುತ್ತೇವೆ ಎಂದು ಹೇಳಿ ಪವಾಡಪ್ಪನಾಯಕನ ಆಸೆಯಂತೆ ಹೊಸಕೆರೆ ಕಟ್ಟೆಗೆ ಪಡವಲಾಚೆ ಇದ್ದ ನಿಡುಮಾಮಿಡಿ ಸ್ವಾಮಿಗಳವರ ಮಠದೊಳಗೆ ಈ ಪವಾಡಪ್ಪನಾಯಕ ಶಾಲಿವಾಹನ ಶಕೆ ವರುಷ ೧೬೪೯ ಅಂದರೆ ಕ್ರಿ.ಶ. ೧೭೩೭ರಲ್ಲಿ ಆತನ ಸಮಾಧಿಯನ್ನು ಮಾಡಲಾಯಿತು. ಮುಂದೆ ಸಿದ್ದಮ್ಮ ರಾಮಪ್ಪನಾಯಕನಿಂದ ಆರಂಭವಾದ ಈ ಸಂಧಿಯು ವಸಂತಮ್ಮ ಮತ್ತು ತನ್ನ ಅಕ್ಕಳಾದ ಲಚ್ಚವ್ವ ಇವರುಗಳ ಮಧ್ಯ ಪ್ರಸನ್ನಪ್ಪನಾಯಕನ ಸಂಬಂಧದಿಂದ ಕಂಡುಬರುವುದು. ತರುವಾಯ ಪ್ರಸನ್ನಪ್ಪನಾಯಕ ಮೃತನಾದ ಮೇಲೆ ಪವಾಡಪ್ಪನಾಯನು ಅಧಿಕಾರಕ್ಕೆ ಬರುತ್ತಾನೆ.

ಪವಾಡಪ್ಪನಾಯಕನು ಅಧಿಕಾರಕ್ಕೆ ಬಂದಾಗ ರಾಜ್ಯವು ಅನೇಕ ಏರಿಳಿತಗಳನ್ನು ಕಾಣುತ್ತದೆ. ಮುಖ್ಯವಾಗಿ ಕಡಪ ನವಾಬರನ್ನು ಸೋಲಿಸಿದ್ದು ಮತ್ತು ನವಾಬನ ವಕೀಲನಾಗಿದ್ದ ರಾಮಾಜಿಯು ಸ್ವಾಮಿದ್ರೋಹ ಮಾಡಿದ್ದರಿಂದ ಅವನನ್ನು ಶಿಕ್ಷಿಸಿದ್ದು ಇವರ ಪ್ರಮುಖ ಹೆಗ್ಗಳಿಕೆಯಾಗಿವೆ. ಪವಾಡಪ್ಪನಾಯಕನ ಆಸೆಯಂತೆ ತನ್ನ ಆರಾಧ್ಯ ದೈವನಾದ ನಿಡುಮಾಮಿಡಿ ಮಠದಲ್ಲಿ ಕ್ರಿ.ಶ. ೧೭೩೭ರಲ್ಲಿ ಆತನ ಸಮಾಧಿಯನ್ನು ಮಠದಲ್ಲಿ ಮಾಡಲಾಯಿತು.

ಪವಾಡಪ್ಪನಾಯಕನ ನಂತರ ಬಂದ ಬಳ್ಳಾರಿಯ ರಾಮಪ್ಪನಾಯಕನು ಆಳ್ವಿಕೆ ನಡೆಸುವ ಸಂದರ್ಭದಲ್ಲಿ ತೊಂದರೆಗೆ ಒಳಗಾಗಿದ್ದ. ಜನರು ರಾಮಪ್ಪನಾಯಕನನ್ನು ನೋಡಬೇಕೆಂಬ ಹಂಬಲದಿಂದ ಚಿಕ್ಕ ದೊರೆಗಳು ನಮಗೆ ದರುಶನ ನೀಡಬೇಕೆಂದು ಕೇಳಿ ಕೊಂಡರು. ಈ ಪ್ರಕಾರವಾಗಿ ರಾಮಪ್ಪನಾಯಕನ ಸಂಬಂಧಿಕರಾದ ದೊಡ್ಡವಾರದ ದಳವಾಯಿ ಇಜ್ಜಲಮಲಕಪ್ಪನ ಸಂಗಡ ಬಳ್ಳಾರಿಗೆ ಹೋಗಿ ಅಣ್ಣನವರ ದರುಶನ ಮಾಡಿಕೊಂಡು ಬರುತ್ತೇನೆ ಎಂದು ರಾಜ್ಯದ ಉಸ್ತುವಾರಿಯನ್ನು ಸರದಾರರಿಗೆ ವಹಿಸಿ ಮುಂದೆ ಸಕಲ ಸೈನ್ಯಸಮೇತವಾಗಿ ರಾಮಪ್ಪನಾಯಕನನ್ನು ಬೇಟಿಯಾಗಲು ಅನಂತಪುರಕ್ಕೆ ಬಂದನು.

ಅನಂತಪುರದ ರಾಮಪ್ಪನಾಯಕನು ಮತ್ತು ಬಳ್ಳಾರಿಯ ರಾಮಪ್ಪನಾಯಕನು ಬೇಟಿಯಾಗಲು ಬಳ್ಳಾರಿಯ ರಾಮಪ್ಪನಾಯಕನು ತನ್ನ ಜೊತೆಗೆ ಕರೆದುಕೊಂಡು ಅನಂತಪುರದ ರಾಮಪ್ಪನಾಯಕನ ಪಟ್ಟಣಕ್ಕೆ ಬಂದ ಹಾಗೆ ಆಯಿತು ಎಂದು ತಿಳಿದು ನಾಗಲಕೆರೆಗೆ ಹೋಗುವ ಮೈದಾನದಲ್ಲಿ ತನ್ನ ಸೈನ್ಯಸಮೇತ ಸ್ಥಳವನ್ನು ಹಾಕಿಕೊಂಡರು. ತರುವಾಯ ಅನಂತಪುರದ ರಾಮಪ್ಪನಾಯಕರ ಮನಸ್ಸಿಗೆ ಸಂಶಯಯ ಹುಟ್ಟಿತೆಂದು ಕಳುಹಿಸಿ ನೆಮ್ಮದಿಯಿಂದ ಇದ್ದನು. ಸಂಶಯವು ದೂರವಾಗಿ ಒಬ್ಬರನೊಬ್ಬರು ಭೇಟಿಯಾಗಲು ಬಂದಿದ್ದ ಅನಂತಪುರದ ರಾಮಪ್ಪನಾಯಕನು ಮತ್ತು ಬಳ್ಳಾರಿಯ ರಾಮಪ್ಪನಾಯಕರ ಸಂಗಡ ನಾನು ಬಂದು ಹತ್ತು ದಿನಗಳು ಆಯಿತು. ಅಪ್ಪಣೆ ಕೊಟ್ಟರೆ ನಮ್ಮ ಗ್ರಾಮಕ್ಕೆ ಹೋಗಿಬರುತ್ತೇನೆ. ಬಳ್ಳಾರಿಯ ದೊರೆಗೆ ದಯಮಾಡಿ ನೀವುಗಳು ನಮ್ಮ ಗ್ರಾಮಕ್ಕೆ ಸಕಲ ಸೈನ್ಯಸಮೇತರಾಗಿ ಬಂದು ನಮ್ಮ ಸತ್ಕಾರವನ್ನು ಸ್ವೀಕರಿಸಬೇಕೆಂದು ಮತ್ತು ನಮ್ಮನ್ನು ಆಶೀರ್ವದಿಸಬೇಕೆಂದು ವಿನಂತಿಸಿಕೊಳ್ಳುತ್ತೇವೆ.

ಈ ಪ್ರಕಾರವಾಗಿ ಮೊದಲಿಗೆ ಅನಂತಪುರಕ್ಕೆ ಬಂದು ಈ ಇಜ್ಜಲಮಲಕಪ್ಪನೇ ಸಂಗಡ ಮಾತನಾಡಲಾಗಿ ಆತನು ಅನಂತಪುರದ ರಾಮಪ್ಪನಾಯಕರ ಸನ್ನಿಧಾನಕ್ಕೆ ಬಂದು ವಿನಂತಿಸಿ ಕೊಂಡನು. ಬಳ್ಳಾರಿ ರಾಮಪ್ಪನಾಯಕರ ಅನಂತಪುರದ ರಾಮಪ್ಪನಾಯಕರ ಬೇಡಿ ಮಾಡಿಸಿ ಏನು ವಿಶೇಷ ವರ್ತಮಾನವನ್ನು ಕೇಳಲಾಗಿ ಮಲ್ಲಪ್ಪ ಹೇಳಿಕೊಟ್ಟ ಪ್ರಕಾರವೇ ಅವರು ಕೊಟ್ಟ

ಪತ್ರ ಉಡುಗೊರೆ ಸಹ ಒಪ್ಪಿದರು. ಅವರು ಪತ್ರವನ್ನು ತೆಗೆದು ನೋಡಿದಾಗ ಎರಡು ಸಂಸ್ಥಾನಗಳು ತಮ್ಮ ಸ್ವಾಧೀನವಾಗುತ್ತವೆಂದು ನೆನೆದು ದೊಡ್ಡ ಮನುಷ್ಯರಿಗೆ ಬಿಡದಿ ಮನೆ ಅವರಿಗೆ ಬೇಕಾದದ್ದು ಕೊಡುತ್ತೇವೆ ಅವರನ್ನು ವಿಚಾರಿಸಿಕೊಳ್ಳುವಂತೆ ಇಜ್ಜಲಮಲಕಪ್ಪನಿಗೆ ಉಸ್ತುವಾರಿ ನೇಮಿಸಿದರು.

ಮುಂದೆ ಅನಂತಪುರದ ರಾಮಪ್ಪನಾಯಕರು ತಮ್ಮ ಬಳಿಯಲ್ಲಿದ್ದ ದಳವಾಯಿ ಇಜ್ಜಲ ಮಲಕಪ್ಪನನ್ನು ಕರೆಸಿ ಬಳ್ಳಾರಿ ರಾಮಪ್ಪನಾಯಕರು ಬರೆಸಿದ ಕಾಗದ ಓದಿಸಿದ್ದು, ಬಳ್ಳಾರಿ ಸಂಸ್ಥಾನಕ್ಕೆ ಪುತ್ರನನ್ನು ಕೊಟ್ಟಿದ್ದು, ತನ್ನ ಹನ್ನೆರಡು ವರ್ಷದ ಸಿದ್ದರಾಮಪ್ಪ ನಾಯಕನನ್ನು ಆ ಬಳ್ಳಾರಿ ರಾಮಪ್ಪನಾಯಕನಿಗೆ ಕೊಡಲಾಗಿತು. ಕೆಲವೊಂದು ವಾಗ್ದಾನದ ಮೂಲಕ ಅಣ್ಣನವರಿಗೆ ಅಭಿಪ್ರಾಯವನ್ನು ಬರೆದು ಕಳುಹಿಸಲಾಗಿ ಅವರು ಏನನ್ನು ಬರೆದು ಕಳಿಸುತ್ತಾರೆ. ಆ ಪ್ರಕಾರವೇ ನಡೆದುಕೊಳ್ಳುವ ಎನ್ನುವ ಮೂಲಕ ಸಂತೋಷದಿಂದ ಸಿದ್ದರಾಮಪ್ಪನಾಯಕರನ್ನು ನಮ್ಮ ಸ್ವಾಧೀನ ಮಾಡಿಕೊಟ್ಟರು. ಹೀಗೆ ಈ ರಾಮಪ್ಪನಾಯಕ ಮತ್ತು ಇತರರ ನಡುವೆ ಸಾಮಾಜಿಕ ಸಂಬಂಧಗಳು ವೈವಾಹಿಕ ಬಂಧ ನಡೆದವು. ಮುಂದೆ ಸೋನಹಳ್ಳಿ ಹಳ್ಳದ ಬಳೆಬಸವೇಶ್ವರನ ಗುಡಿ ಬಳಿಯಲ್ಲಿ ಬಂದು ಉಳಿದರು.

ಕೊನೆಯದಾಗಿ ಬಳ್ಳಾರಿಯ ರಾಮಪ್ಪನಾಯಕನು ಗುಡ್ಡದ ಮೇಲೆ ಸೇರೆ ಹಾಕಿದ್ದ ಚೌಕಿ ಪಹರೆಗಳ ಮೇಲೆ ಇದ್ದ ಜವಾನರನ್ನು ಗುರಿಕಾರರು ಮುಖ್ಯಸ್ಥರು ಬಂದು ನೋಡಿದರು. ಇದರಿಂದ ಗಾಬರಿಯಿಂದ ಈ ಸಂಗತಿಯನ್ನು ಗುಡ್ಡಲೇರ ಶೋಧನೆ ಮಾಡಿದ್ದು ಅಲ್ಲಿಯೂ ಸಿಗದೆ ಇದುದ್ದರಿಂದ ಬಹಳ ಸಿಟ್ಟು ಬಂದು ನಾಲ್ಕು ಕಡೆಗೂ ಕುದುರೆಗಳನ್ನು ಮತ್ತು ಆಳುಗಳನ್ನು ಹಿಡಿದು ತಂದವರಿಗೆ ಎರಡು ಸಾವಿರ ವರಹಗಳು ಕೊಡುತ್ತೇವೆಯಂತ ತಾಕೀತು ಮಾಡಿ ಬೆಳಗಿನ ಆಳುಗಳಿಗೆ ಮಳಿಗೆಯಲ್ಲಿಯಿದ್ದರು ಶಿಕ್ಷೆ ಮಾಡುತ್ತಲೇ ತರಬೇಕೆಂದು ಅಪ್ಪಣೆ ಕೊಟ್ಟನು.

ನಾಲ್ಕು ಹಾದಿಯಲ್ಲಿಯು ಗ್ರಾಮಗಳು ಗುಡ್ಡಗಳು ಕೊರಕಲು ತೊರೆಗಳು ಸಾಲಿನಲ್ಲಿ ಹುಡುಕುತ್ತ ಬಂದು ಗೌಡನ ಕೇಳಿದಲ್ಲಿ ಆ ಕುದುರೆ ಸವಾರರಿಗೆ ಗಡುವು ಹೇಳಿದ್ದು, ಗೌಡ ರಾತ್ರಿ ವೇಳೆಯಲ್ಲಿ ಹುಲ್ಲಿನೊಳಗೆ ಇದ್ದವರನ್ನು ಕಂಬಳಿಗೊಪ್ಪೆ ಹೊದಿಸಿ ಎತ್ತುಗಳ ಮೇಲೆ ಕೂಡಿಸಿ ಆ ಗ್ರಾಮದವರು ಸಹಾ ಒಬ್ಬರ ಮನೆಯಲ್ಲಿ ಊಟ ಮಾಡಿಸಿ ಕಮ್ಮಾರನ ಕರೆತರಿಸಿ ಈ ಬಸಪ್ಪನಾಯಕನ ಸಾಲಿನಲ್ಲಿ ಇದ್ದ ಬೇಡಿಗಳ ಕತ್ತರಿಸಿ ತಮ್ಮ ಗ್ರಾಮದೊಳಗೆ ಎರಡು ಎತ್ತುಗಳ ಮೇಲೆ ಇಬ್ಬರನ್ನು ಕೂರಿಸಿ ಹಿರೇಹಾಳುಗೆ ಕರೆದುಕೊಂಡು ಹೋಗಿ ಆ ಗ್ರಾಮದಲ್ಲಿ ಅಧಿಕಾರ ಮಾಡುವರು. ಮಾಯರ ತರುಪ್ಪ ಅಮಲ್‌ದಾರ ಶಿವಪ್ಪನವರ ಯಾವ ವರ್ತಮಾನ

ಹೇಳಿ ಅವರ ಸ್ವಾಧೀನಕ್ಕೆ ಕೊಟ್ಟು ಅವರ ಅಪ್ಪಣೆಯಂತೆ ಆ ಗೌಡರು ವಾಪಸ್ಸು ಹೋದರು. ಅಳಿಯ ರಾಮರಾಯನಿಗೆ, ಚಿನ್ನಾದೇವಿಯ ಮಗಳನ್ನು ಆತನ ತಮ್ಮನಾದ ತಿರುಮಲರಾಯ ಮದುವೆ ಮಾಡಿಕೊಂಡರು. ಮುಂದೆ ದೊರೆಸಾನಿಗಳಿಬ್ಬರು ಅಳಿಯನಾದ ರಾಮರಾಯನಿಗೆ ಪಟ್ಟವ ಕಟ್ಟಬೇಕೆಂದು ನಿರ್ಣಯಿಸಿದ್ದರು.

ವಿಜಯನಗರ ಸಂಸ್ಥಾನದಲ್ಲಿರುವ ಬೊಕ್ಕಸದ ಗೊಲ್ಲ ತಿಮ್ಮಯ್ಯನೆಂಬುವನು ರಾಜ್ಯವು ಅರಾಜಕತೆಯಿಂದ ಕೂಡಿರುವಾಗ ಬೊಕ್ಕಸವು ತನ್ನ ಸ್ವಾಧೀನದಲ್ಲಿ ಇದ್ದುದ್ದರಿಂದ ಚತುರಂಗದ ಬಲವನ್ನು ಭದ್ರಪಡಿಕೊಂಡು ಅಳಿಯ ರಾಮರಾಯ ಮತ್ತು ತಿರುಮಲರಾಯರನ್ನು ಸೆರೆಯಲ್ಲಿ ಹಿಡಿಯಬೇಕೆಂದು ಯೋಚಿಸಿದ. ಈ ಸಂಗತಿಯು ತಿಳಿದ ವಿಜಯನಗರದ ಅರಸರು ಬೊಕ್ಕಸದ ತಿಮ್ಮಯ್ಯನನ್ನು ಬಂಧಿಸಬೇಕೆಂದು ಯೋಚಿಸುತ್ತಿರುವಾಗ ಬಿಜಾಪುರ ಪ್ರಾಂತ್ಯದ ಅರಸನಾಗಿದ್ದ ಹಂಡೆ ಬಾಲದ ಹನುಮಪ್ಪನಾಯಕನು ಬಹಳ ಶೂರನೆಂದು ತಿಳಿದು ಆತನ ಸಹಾಯವನ್ನು ಕೇಳಲಾಗಿ ಸೈನ್ಯಸಮೇತರಾಗಿ ವಿದ್ಯಾನಗರಕ್ಕೆ ಬರಬೇಕೆಂದು ಕರೆ ನೀಡಿದರು. ಈ ವರ್ತಮಾನದ ಮೇರೆಗೆ ಹಂಡೆ ಬಾಲದ ಹನುಮಪ್ಪನಾಯಕನು ವಿಜಯನಗರದ ಅರಸರಿಗೆ ಆಜ್ಞೆಯ ಮೇರೆಗೆ ಬೊಕ್ಕಸದ ತಿಮ್ಮಯ್ಯನನ್ನು ಸೆರೆ ಹಿಡಿದು ವಿಜಯನಗರದ ಅರಸರಿಗೆ ಒಪ್ಪಿಸಿದನು.

ಅಳಿಯ ರಾಮರಾಯ ಮತ್ತು ತಿರುಮಲರಾಯರು ಬಿಜಾಪುರದ ಸುಲ್ತಾನನಾದ ಆದಿಲ್‌ಶಾಹಿಯನ್ನು ನಿನ್ನ ಸೈನ್ಯಸಮೇತ ಹೋಗಿ ಸುಲ್ತಾನನ್ನು ಸೋಲಿಸಿ ಬಂದರೆ ನಿನ್ನ ಮನಸ್ಸಿನ ಪ್ರಕಾರ ರಾಜ್ಯವನ್ನು ನಿಡಲಾಗುವುದು ಎಂದರು. ಈ ವಿಷಯದಿಂದ ಹಂಡೆ ಬಾಲದ ಹನುಮಪ್ಪನಾಯಕನು ಈ ಸುಲ್ತಾನನೊಂದಿಗೆ ಹೋರಾಡಿ ಜಯಿಸಿ ಬಂದನು. ಈ ವಿಜಯದಿಂದ ಅಳಿಯ ರಾಮರಾಯನು ಹನುಮಪ್ಪನಾಯಕನಿಗೆ ಮೂಡಲು ದೆಸೆಯಲ್ಲಿದ್ದ ನಂದೇಲ ಗ್ರಾಮ, ಬುಕ್ಕರಾಯಸಮುದ್ರ, ಧರ್ಮಾವರಂ, ಕಣೇಕಲ್ಲು, ಪಶ್ಚಿಮಕ್ಕೆ ಇರುವ ಬಳ್ಳಾರಿ, ಕುರುಗೋಡು ಈ ಗ್ರಾಮಗಳನ್ನು ಉಂಬಳಿಯಾಗಿ ನೀಡಿದನು. ಈ ಪ್ರಕಾರವಾಗಿ ರಾಜ್ಯ ವಿಸ್ತರಣೆಗೋಸ್ಕರ ಹನುಮಪ್ಪನಾಯಕನು ಕ್ರಿ.ಶ. ೧೫೪೯ರಲ್ಲಿ ನಂದೇಲಕ್ಕೆ ಬಂದರು. ನಂತರ ರಾಜ್ಯ ವಿಸ್ತರಣೆ ಮಾಡಿ ಬುಕ್ಕರಾಯ ಸಮುದ್ರಕ್ಕೆ ಬಂದು ಅಲ್ಲಿನ ಕೆರೆಯ ತಟಾಕವನ್ನು ನೋಡಿ ದೊಡ್ಡ ಕೆರೆಯೆಂದು ತಿಳಿದು ಈ ಗ್ರಾಮದೊಳಗೆ ಕೋಟೆಯ ನಿರ್ಮಾಣ ಮಾಡಿಕೊಂಡು ಎರಡು ರಾಜ್ಯವನ್ನು ವಿಚಾರಿಸುತ್ತ ಕ್ರಿ.ಶ.೧೫೬೨ರಲ್ಲಿ ಹಂಡೆ ಬಾಲದ ಹನುಮಪ್ಪನಾಯಕನು ಮೃತನಾದನು.

ತರುವಾಯ ಆತನ ಮಕ್ಕಳಾದ ಇಮ್ಮಡಿ ಹಂಪನಾಯಕನು ಆಳ್ವಿಕೆಗೆ ಬಂದನು. ಈತನ ಆಳ್ವಿಕೆಯು ಅಷ್ಟೇನು ಪ್ರಬಲವಾಗಿರದ ಕಾರಣ ಹಂಡೆ ಮಲಕಪ್ಪನಾಯಕನು ರಾಜ್ಯಭಾರಕ್ಕೆ

ಬಂದನು. ಸಮಯದಲ್ಲಿ ವಿದ್ಯಾನಗರದ ಅಧಿಪತಿ ತಿರುಮಲರಾಯನ ಮಗನಾದ ಶ್ರೀರಂಗರಾಯರು ಚಂದ್ರಗಿರಿಗೆ ರಾಜ್ಯ ವಿಚಾರಣೆ ಮಾಡಲಿಕ್ಕೆ ಹೋಗಿದ್ದರಿಂದ ಬಾದಶಾಹನ ಸೈನ್ಯ ವಿದ್ಯಾನಗರವನ್ನು ಕಬಳಿಸಬೇಕೆಂದು ಕಲ್ಯಾಣ ನಗರವನ್ನು ತಲುಪಿತು. ಈ ವಿಚಾರವನ್ನು ತಿಳಿದ ಶ್ರೀರಂಗರಾಯರು ತ್ವರಿತವಾಗಿ ವಿದ್ಯಾನಗರಕ್ಕೆ ಹಿಂದಿರುಗಿದರು. ಸುಲ್ತಾನರ ಸೈನ್ಯವನ್ನು ಎದುರಿಸಲು ಬುಕ್ಕರಾಯ ಸಮುದ್ರದೊಳಗೆ ಇದ್ದ ಮಲಕಪ್ಪನಾಯಕನನ್ನು ಸೈನ್ಯ ಸಮೇತವಾಗಿ ಕರೆಸಿಕೊಂಡು ಬಾದಶಾಹನನ್ನು ಪರಾಜಿತ ಮಾಡಿದನು. ತರುವಾಯ ರಂಗರಾಯರ ಅಪ್ಪಣೆ ಮೇರೆಗೆ ಬುಕ್ಕರಾಯ ಸಮುದ್ರದೊಳಗೆ ಬಂದು ಹೊಸದಾಗಿ ಪೇಟೆ ಕಟ್ಟಿಸಿಕೊಂಡುಯಿದ್ದರು. ಈ ಮಲಕಪ್ಪ ನಾಯಕನಿಗೆ ಸಂತಾನನಿಲ್ಲದ ಕಾರಣ ಚಿನ್ನಪ್ಪರ ವಂಶಸ್ಥರಾದ ಎಲ್ಲರೆಡ್ಡಿ ಜನ ಸಹಾಯಕರಾಗಿ ಇದ್ದರು. ಎಲ್ಲರೆಡ್ಡಿ ಇರುವ ಸ್ಥಳ ನಮಗೆ ಬೇಕಾಗಿದೆ ಕೊಡಬೇಕೆಂದು ಕೇಳಲಾಗಿ ನಿಮ್ಮ ಸ್ಥಳ ನಿಮಗೆ ಕೊಡುವುದಕ್ಕೆ ಚಿಂತೆಯೇನು ದಯಮಾಡಿ ಎಂದರು. ಈ ಪ್ರಕಾರವಾಗಿ ಆತನಿಗೆ ವಸ್ತ್ರ-ತಾಂಬೂಲ ಬಹುಮಾನ ಗಳ ಕೊಟ್ಟು ಕಳುಹಿಸಿ ಮತ್ತು ಹತ್ತು ದಿನಗಳು ಹೋದ ತರುವಾಯ ಈ ಯಲ್ಲಾರೆಡ್ಡಿಯವರ ಮನೆ ಹತ್ತಿರ ಮನೆಯನ್ನು ನಿರ್ಮಾಣ ಮಾಡಿ ಅಲ್ಲಿಯೇ ನೆಲೆ ನಿಂತರು. ಮುಂದೆ ಈ ಗ್ರಾಮಕ್ಕೆ 'ಹಂಡೆ ಅನಂತಪುರವೆಂಬ ಹೆಸರು ಉಂಟಾಯಿತು.

ಈ ಮಲಕಪ್ಪನಾಯಕನ ಪಟ್ಟದ ಹೆಂಡತಿ ಶಿದ್ದರಾಮಮ್ಮನವರಿಗೆ ದೇವಪ್ಪನಾಯಕ, ಚಿಕ್ಕರಾಮಪ್ಪನಾಯಕ, ನಿಚ್ಚಮದ ಲಿಂಗಪ್ಪನಾಯಕ, ಹಂಪನಾಯಕ ಎಂದು ನಾಲ್ವರು ಮಕ್ಕಳಾದರು. ಈ ನಾಲ್ಕು ಜನ ಮಕ್ಕಳು ಒಂದೊಂದು ಪ್ರಾಂತ್ಯದ ಅಧಿಕಾರವನ್ನು ವಹಿಸಿಕೊಂಡರು. ದೇವಪ್ಪನಾಯಕನಿಗೆ ಮೂಡಲು ಕಡೆ ನಂದೇಲ ಸೀಮೆ, ಎರಡನೇ ಮಗನಾದ ಚಿಕ್ಕರಾಮಪ್ಪ ನಾಯಕನಿಗೆ ಬಳ್ಳಾರಿ ಮತ್ತು ಕುರುಗೋಡು ಸೀಮೆ, ೩ನೆಯ ಮಗನಾದ ನಿಚ್ಚಮದುವಣಿಗ ಲಿಂಗರಾಮಪ್ಪನಾಯಕನಿಗೆ ಕುಂದರ್ಪಿ ಸೀಮೆ, ನಾಲ್ಕನೆಯ ಮಗನಿಗೆ ಹಂಪನಾಯಕನಿಗೆ ಅನಂತಪುರ, ಬುಕ್ಕಸಾಗರ, ಬುಕ್ಕಪಟ್ಟಣ, ಧರ್ಮಾವರ, ಸೀಮೆಗಳನ್ನು ಹಂಚಿಕೆ ಮಾಡಿದನು. ಹೀಗೆ ಆಳುತ್ತಿರುವಾಗ ಹಂಡೆ ಮಲಕಪ್ಪನಾಯಕನು ಕ್ರಿ.ಶ.೧೬೪೦ರಲ್ಲಿ ಮೃತನಾದನು. ಮುಂದೆ ನಾಲ್ಕನೆಯ ಮಗನಾದ ಹಂಪನಾಯಕನು ರಾಜ್ಯಭಾರಕ್ಕೆ ಬಂದನು. ಪ್ರಸನ್ನ-ಸಿದ್ದಪ್ಪನಾಯಕರು ಹಾಗೂ ಸಿದ್ದರಾಮವ್ವ ಅನಂತಪುರದೊಳಗೆ ಆಳ್ವಿಕೆ ನಡೆಸಿದರು.

ಪ್ರಸನ್ನಪ್ಪನಾಯಕನು-ಪವಾಡಪ್ಪನಾಯಕನು ಕ್ರಿ.ಶ. ೧೬೯೮ರಲ್ಲಿ ಪಟ್ಟಕ್ಕೆ ಬರುತ್ತಾರೆ. ರಾಜ್ಯ ಪರಿಪಾಲನೆ ಮಾಡುತ್ತಿರುವಾಗ ಕ್ರಿ.ಶ.೧೭೧೧ರಲ್ಲಿ ಕಡಪದ ನವಾಬರಿಗೂ ಮತ್ತು ಪ್ರಸನ್ನಪ್ಪ ನಾಯಕನಿಗೂ ಯುದ್ಧ ನಡೆಯುತ್ತದೆ. ಈ ಸಂದರ್ಭದಲ್ಲಿ ಅನಂತಪುರದ ವಿಚಾರಣೆ ಸಿರಿಯಪ್ಪ ಬಣಜಿನನ್ನು ಶಿರಿಯಪ್ಪನ ಸಂಗಡ "ರಾಜ್ಯದ ಮೇಲೆ ಒಂದು ಕಣ್ಣು ಕೆರೆಯ ಮ್ಯಾಲೆ ಒಂದು

ಕಣ್ಣು" ಇರಿಸು. ಈ  ಕೆರೆ ತುಂಬಿ ಇದ್ದದ್ದರಿಂದ ಪ್ರತ್ಯೇಕ ಕಾಲುವೆ ಅಗೆದು ನೀರು ಕೆರೆಯೊಳಗೆ ಕೆರೆ ನೆಲಕ್ಕೆ ಇಟ್ಟು ಬತ್ತದ ಹೊಸಲಗೋದು ಮ್ಯಾಲೆ ಹಾಕಿದೆವು. ಮುಂದೆ ಅಕಾಲ ಮಳೆ ಸುರಿದಿದ್ದರಿಂದ ಕೆರೆ ತುಂಬಿತು.

ಮುಂದೆ ವೈಶಾಖ ಸಂದರ್ಭದಲ್ಲಿ ಮಳೆ ಸುರಿದಿದ್ದರಿಂದ ಪ್ರವಾಹವು ಒಂದು ಎರಡು ತೂಬಿನೊಳಗೆ ನೀರು ತುಂಬಿ ಪ್ರವಾಯಿಸಿ, ಮಾಡಲು ದೆಸೆಯಲ್ಲಿ ಒಂದು ತೂತು ಪಡುವ ದೆಸೆಯಲ್ಲಿ ಒಂದು ತೂತು ಬಿದ್ದಿದು, ಈ ಶಿರಿಯಪ್ಪನು ಈ ವಿಷಯ ತಿಳಿದ ಮೇಲೆ ಪ್ರಸನ್ನಪ್ಪನಾಯಕರಿಗೆ ಕಾಗದ ಬರೆದು ಕಳಿಸುತ್ತಾನೆ. ಮುಂದೆ ಎರಡು ತೂತುಗಳಿಗೆ ಹಂಠರ ಹಾಕಿಸಿ ಗ್ರಾಮದೊಳಗೆ ಇದ್ದ ಒಕ್ಕಲಿಗರು, ಶಾನುಭೋಗರು ಹಾಗೂ ಪ್ರಜೆಗಳನ್ನು ಕರೆ ಕಳುಹಿಸಿ ರಾತ್ರಿ–ಹಗಲು ತೂಬುಗಳಿಗೆ ಹುಲ್ಲು–ಕಲ್ಲು, ಮಣ್ಣು, ಹಾಕಿ ಕೆರೆಯನ್ನು ಭದ್ರಪಡಿಸಿದರು. ಶಿರಿಯಪ್ಪನು ಕೆರೆಕಟ್ಟೆ ಮೇಲೆ ಬರುತ್ತಾಯಿದ್ದ ಸಂದರ್ಭದಲ್ಲಿ ಅಧೈರ್ಯ ಬಿದ್ದು ನಿಂತ ನಿಲುವಿನಲ್ಲಿಯೇ ಕೆಳಗೆ ಬಿದ್ದು ವದ್ದಾಡಿಕೊಂಡು ಸತ್ತುಹೋದನು. ಈ ವರ್ತಮಾನವನ್ನು ತಿಳಿದ ಪ್ರಸನ್ನಪ್ಪನಾಯಕನು ಕೆಲವು ದ್ರವ್ಯ ಕೊಟ್ಟು ಶವಸಂಸ್ಕಾರ ಮಾಡಿಸಿ ತಾನು ಅನಂತಪುರದೊಳಕ್ಕೆ ಬಾರದೆ ಆ ಸಮೀಪದಲ್ಲಿ ಬಿಡಾರ ಹಾಕಿಕೊಂಡು ರಾತ್ರಿ–ಹಗಲು ಅಲ್ಲಿಯೇ ಇದ್ದು ಎರಡು ತೂತುಗಳಿಗೆ ಶಾಂತಿ ಮಾಡಿಸಿ ಈ ಗ್ರಾಮದೊಳಕ್ಕೆ ಹೋಗಬಹುದೆಂದು ಅಭಿಪ್ರಾಯಪಟ್ಟರು.

ರಾಮನಾಯಕನ ಮಗನಾದ ಸಿದ್ಧರಾಮಪ್ಪ ತನ್ನ ಬಾವನಾದ ಬಸಪ್ಪರು ತಮ್ಮ ಸಂಗಡವಿಲ್ಲವೆಂದು ಶಿದ್ದರಾಮಪ್ಪನಿಗೆ ಎಲ್ಲಾರು ದೈರ್ಯ ಹೇಳಲಾಗಿ ಮುಂದೆ ನಿಮ್ಮ ಬೋಜನಕ್ಕೆ ಬಣಜಿಗರ ಮನೆಗೆ ಸಾಮಗ್ರಿಯನ್ನು ಕಳುಹಿಸಿಕೊಟ್ಟಿದ್ದೇನೆ ಆ ಗ್ರಾಮದ ಗೌಡನ ಮನೆಯಿಂದ ಊಟ ಮುಗಿಸಿಕೊಂಡು ಬಂದಿದ್ದೇವೆ ಎಂದು ಹಸಿವು ಆಗಿಲ್ಲವೆಂದು ತಿಳಿಸಿದರು. ಮುಂದೆ ಶಿವಪ್ಪ ಅವರು ತಮ್ಮ ಹಜಾರದಲ್ಲಿ ಮಲಗುವವರೆಗೆ ತಾಂಬೂಲಗಳನ್ನು ಕೊಟ್ಟು ಸುಃಖವಾಗಿ ಮಲಗಿಕೊಳ್ಳಿರಿ ಎಂದು ಅಪ್ಪಣೆ ಕೊಟ್ಟರು. ಸಿದ್ಧರಾಮಪ್ಪ ಮತ್ತು ಬಸಪ್ಪ ಇಬ್ಬರು ಹಜಾರದೊಳಗೆ ಮಲಗಿದ್ದರು ಮರುದಿವಸ ಶಿವಪ್ಪ ಅವರು ಇವರನ್ನು ಕಳುಹಿಸಿ ಬಣಜಿಗರ ಮನೆಯನ್ನು ಗೊತ್ತು ಮಾಡಿ ಅವರಿಗೆ ಬೇಕಾದ ವ್ಯವಸ್ಥೆಯನ್ನು ಮಾಡಿದನು. ಮುಂದೆ ಮುರಾರಿರಾಯರು ತಿರುಚಿನಪಳ್ಳಿ ಯುದ್ಧಕ್ಕೆ ಹೋಗಿರಲಾಗಿ ಈ ವರ್ತಮಾನದ ವಿಷಾದವಾಗಿ ಕಾಗದ ಬರೆಸಿ ತಮ್ಮ ಕಡೆಯ ಜವಾನರನ್ನು ಕಳುಹಿಸಲು ಆ ಮುರಾರಿರಾಯರು ಆ ಕಾಗದ ನೋಡಿದ ಕ್ಷಣವೇ ಹಂಡೆ ಸಂಸ್ಥಾನವನ್ನು ಬಹಳ ದೊಡ್ಡದು ಇವರಿಗೆ ದೇವರು ವಿಪತ್ತು ಕೊಡಬೇಡದೆಂದು ಪಶ್ಚಾತ್ತಾಪ ಪಟ್ಟು ಕುಡುತಿನ ಜಟಂಗಿರಾಯರ ವರೆಗೂ ಬರೆದು ಕಳುಹಿಸಿ ಹಾಗೆಯೇ ದಾವ ಪ್ರಕಾರ ನಾವು ಇಬ್ಬರು ನಿಮ್ಮ ಸಹಾಯಕ್ಕೆ ಬರುವುದಾಗಿ ಹೇಳಿ ಕಳುಹಿಸಿದರು. ಈ

ಕಣ್ಣು" ಇರಿಸು. ಈ ಕೆರೆ ತುಂಬಿ ಇದ್ದದ್ದರಿಂದ ಪ್ರತ್ಯೇಕ ಕಾಲುವೆ ಅಗೆದು ನೀರು ಕೆರೆ ಯೊಳಗೆ ಕೆರೆ ನೆಲಕ್ಕೆ ಇಟ್ಟು ಬತ್ತದ ಹೊಸಲಗೋದು ಮ್ಯಾಲೆ ಹಾಕಿದೆವು. ಮುಂದೆ ಅಕಾಲ ಮಳೆ ಸುರಿದಿದ್ದರಿಂದ ಕೆರೆ ತುಂಬಿತು.

ಮುಂದೆ ವೈಶಾಖ ಸಂದರ್ಭದಲ್ಲಿ ಮಳೆ ಸುರಿದಿದ್ದರಿಂದ ಪ್ರವಾಹವು ಒಂದು ಎರಡು ತೂಬಿನೊಳಗೆ ನೀರು ತುಂಬಿ ಪ್ರವಾಯಿಸಿ, ಮಾಡಲು ದೆಸೆಯಲ್ಲಿ ಒಂದು ತೂತು ಪಡುವ ದೆಸೆಯಲ್ಲಿ ಒಂದು ತೂತು ಬಿದ್ದಿದು, ಈ ಶಿರಿಯಪ್ಪನು ಈ ವಿಷಯ ತಿಳಿದ ಮೇಲೆ ಪ್ರಸನ್ನಪ್ಪನಾಯಕರಿಗೆ ಕಾಗದ ಬರೆದು ಕಳಿಸುತ್ತಾನೆ. ಮುಂದೆ ಎರಡು ತೂತುಗಳಿಗೆ ಹಂತರ ಹಾಕಿಸಿ ಗ್ರಾಮದೊಳಗೆ ಇದ್ದ ಒಕ್ಕಲಿಗರು, ಶಾನುಭೋಗರು ಹಾಗೂ ಪ್ರಜೆಗಳನ್ನು ಕರೆ ಕಳುಹಿಸಿ ರಾತ್ರಿ–ಹಗಲು ತೂಬುಗಳಿಗೆ ಹುಲ್ಲು–ಕಲ್ಲು, ಮಣ್ಣು, ಹಾಕಿ ಕೆರೆಯನ್ನು ಭದ್ರಪಡಿಸಿದರು. ಶಿರಿಯಪ್ಪನು ಕೆರೆಕಟ್ಟೆ ಮೇಲೆ ಬರುತ್ತಾಯಿದ್ದ ಸಂದರ್ಭದಲ್ಲಿ ಅಧೈರ್ಯ ಬಿದ್ದು ನಿಂತ ನಿಲುವಿನಲ್ಲಿಯೇ ಕೆಳಗೆ ಬಿದ್ದು ವದ್ದಾಡಿಕೊಂಡು ಸತ್ತುಹೋದನು. ಈ ವರ್ತಮಾನವನ್ನು ತಿಳಿದ ಪ್ರಸನ್ನಪ್ಪನಾಯಕನು ಕೆಲವು ದ್ರವ್ಯ ಕೊಟ್ಟು ಶವಸಂಸ್ಕಾರ ಮಾಡಿಸಿ ತಾನು ಅನಂತಪುರ ದೊಳಕ್ಕೆ ಬಾರದೆ ಆ ಸಮೀಪದಲ್ಲಿ ಬಿಡಾರ ಹಾಕಿಕೊಂಡು ರಾತ್ರಿ–ಹಗಲು ಅಲ್ಲಿಯೇ ಇದ್ದು ಎರಡು ತೂತುಗಳಿಗೆ ಶಾಂತಿ ಮಾಡಿಸಿ ಈ ಗ್ರಾಮದೊಳಕ್ಕೆ ಹೋಗಬಹುದೆಂದು ಅಭಿಪ್ರಾಯಪಟ್ಟರು.

ರಾಮನಾಯಕನ ಮಗನಾದ ಸಿದ್ಧರಾಮಪ್ಪ ತನ್ನ ಬಾವನಾದ ಬಸಪ್ಪರು ತಮ್ಮ ಸಂಗಡವಿಲ್ಲವೆಂದು ಶಿದ್ದರಾಮಪ್ಪನಿಗೆ ಎಲ್ಲಾರು ದೈರ್ಯ ಹೇಳಲಾಗಿ ಮುಂದೆ ನಿಮ್ಮ ಬೋಜನಕ್ಕೆ ಬಣಜಿಗರ ಮನೆಗೆ ಸಾಮಗ್ರಿಯನ್ನು ಕಳುಹಿಸಿಕೊಟ್ಟಿದ್ದೇನೆ ಆ ಗ್ರಾಮದ ಗೌಡನ ಮನೆಯಿಂದ ಊಟ ಮುಗಿಸಿಕೊಂಡು ಬಂದಿದ್ದೇವೆ ಎಂದು ಹಸಿವು ಆಗಿಲ್ಲವೆಂದು ತಿಳಿಸಿದರು. ಮುಂದೆ ಶಿವಪ್ಪ ಅವರು ತಮ್ಮ ಹಜಾರದಲ್ಲಿ ಮಲಗುವವರೆಗೆ ತಾಂಬೂಲಗಳನ್ನು ಕೊಟ್ಟು ಸುಃಖವಾಗಿ ಮಲಗಿಕೊಳ್ಳಿರಿ ಎಂದು ಅಪ್ಪಣೆ ಕೊಟ್ಟರು. ಸಿದ್ಧರಾಮಪ್ಪ ಮತ್ತು ಬಸಪ್ಪ ಇಬ್ಬರು ಹಜಾರದೊಳಗೆ ಮಲಗಿದ್ದರು ಮರುದಿವಸ ಶಿವಪ್ಪ ಅವರು ಇವರನ್ನು ಕಳುಹಿಸಿ ಬಣಜಿಗರ ಮನೆಯನ್ನು ಗೊತ್ತು ಮಾಡಿ ಅವರಿಗೆ ಬೇಕಾದ ವ್ಯವಸ್ಥೆಯನ್ನು ಮಾಡಿದನು. ಮುಂದೆ ಮುರಾರಿರಾಯರು ತಿರುಚಿನಪಳ್ಳಿ ಯುದ್ಧಕ್ಕೆ ಹೋಗಿರಲಾಗಿ ಈ ವರ್ತಮಾನದ ವಿಷಾದವಾಗಿ ಕಾಗದ ಬರೆಸಿ ತಮ್ಮ ಕಡೆಯ ಜವಾನರನ್ನು ಕಳುಹಿಸಲು ಆ ಮುರಾರಿರಾಯರು ಆ ಕಾಗದ ನೋಡಿದ ಕ್ಷಣವೇ ಹಂಡೆ ಸಂಸ್ಥಾನವನ್ನು ಬಹಳ ದೊಡ್ಡದು ಇವರಿಗೆ ದೇವರು ವಿಪತ್ತು ಕೊಡಬೇಡದೆಂದು ಪಶ್ಚಾತ್ತಾಪ ಪಟ್ಟು ಕುಡುತಿನ ಜಟಂಗಿರಾಯರ ವರೆಗೂ ಬರೆದು ಕಳುಹಿಸಿ ಹಾಗೆಯೇ ದಾವ ಪ್ರಕಾರ ನಾವು ಇಬ್ಬರು ನಿಮ್ಮ ಸಹಾಯಕ್ಕೆ ಬರುವುದಾಗಿ ಹೇಳಿ ಕಳುಹಿಸಿದರು. ಈ

ವರ್ತಮಾನದಿಂದ ಶಿವಪ್ಪ ಅವರಿಗೆ ಪ್ರತ್ಯುತ್ತರ ಬರೆದು ಕಳುಹಿಸಿದರು. ಮುಂದೆ ಈ ಪ್ರಕಾರವಾಗಿ ಬಸಪ್ಪನವರು ಮತ್ತು ಅಮೀರ್ ಶಿವಪ್ಪನವರ ಬಳಿಗೆ ಹೋದರು ಸಿದ್ಧರಾಮಪ್ಪ ನಾಯಕರನ್ನು ಇಲ್ಲೇ ಇರಿಸಿಕೊಂಡು ಸಹಾಯಕ್ಕೆ ಅನುಕೂಲ ಮಾಡಿಕೊಡು ಇಬ್ಬರು ಮುಂದೆ ಶಿವಪ್ಪನವರ ನಮಸ್ಕರಿಸಿ ದೊರೆಯನ್ನು ಅಲ್ಲೇ ಉಸ್ತುವಾರಿಯನ್ನಾಗಿಸಿಕೊಂಡು ಈ ಬಸಪ್ಪನಾಯಕರಿಗೆ ಒಂದು ಒಳ್ಳೆಯ ಕುದುರೆಕೊಟ್ಟು ಕೆಲಸ ಕಾರ್ಯವನ್ನು ನೀಡಿ ಪಾಳೆಗಾರರನ್ನೆ ಸಂಸ್ಥಾನಕ್ಕೆ ಹೋಗಿ ತರುವಾಯ ಬಳ್ಳಾರಿ ಗ್ರಾಮಕ್ಕೆ ಬಂದು ಸೇರಿದರು.

ಚಿಕ್ಕಯ್ಯ ಎಂಬ ಗುರಿಕಾರರಿಗೆ ಪೂರ್ವ ಅನಂತಪುರ ರಾಮಪ್ಪನಾಯಕರು ಕುಮಾರ ಪಟ್ಟವ ಕಟ್ಟಿಕೊಟ್ಟಿದ್ದರಿಂದ ಅವರು ಬಸಪ್ಪನಾಯಕನಿಗೆ ಎದುರಾಗಿದ್ದ ಅವರು ಬಂದು ಪಾದಗಳಿಗೆ ಬಿದ್ದು, ನಿಮ್ಮ ವರ್ತಮಾನವನ್ನು ಕೇಳಿ ಬಹಳ ಸಂಕಟವಾಗಿದೆ. ದೇವರ ಕೃಪೆಯಿಂದ ನೀವು ಬದುಕಿದ್ದು ನಿಮ್ಮ ಹಿರಿಯರ ಪುಣ್ಯ ಮತ್ತು ನಮ್ಮ ಭಾಗ್ಯವೆಂದು ಹೇಳಿ ಮುಂದೆ ಬುಕ್ಕಪಟ್ಟಣ, ಹೊಸಣಿಕೆರೆ, ಮರೂರು, ಮುಖ್ಯಸ್ಥರು ಮುಂತಾದ ದೇಶಸ್ಥರಿಗೆ ತನ್ನ ಹೆಸರಿನಲ್ಲಿ ಕಾಗದಗಳು ಬರೆಯಿಸಿ ಕಳುಹಿಸಿರುವುದಾಗಿ ಅವರು ಅದನ್ನು ನೋಡಿ ನಮ್ಮ ಪೂರ್ವದ ದೊರೆಗಳು ಬಂದರು ಎಂದು ಬಹಳ ಸಂತೋಷದಿಂದ ಕಾಣಿಕೆಯನ್ನು ತೆಗೆದುಕೊಂಡು ಬಸಪ್ಪನ ಬಳಿ ಸೇರಿದರು. ಪೂರ್ವದ ಅನಂತಪುರದೊಳಗೆ ಇದ್ದ ಬಯ್ಯಣ್ಣನವರ ಅನಂತಯ್ಯ ಎಂಬ ವ್ಯಾಪಾರಸ್ಥರನ್ನು ತಾಡಿಮರಿ ರಾಜ್ಯದೊಳಗೆ ಚಿಯ್ಯದುರ್ಗ ಎಂಬ ಗ್ರಾಮದ ಕೂಡಿಯಿತ್ತು ಆದುದರಿಂದ ಆತನ ಹೆಸರಿನಲ್ಲಿ ಕಾಗದ ಪತ್ರಗಳನ್ನು ಬರೆಸಿ ಮೇಕೆ ಚಿಕ್ಕಯ್ಯನನ್ನು ಕಳುಹಿಸಲಾಗಿತ್ತು. ಆತನು ಕಾಗದವನ್ನು ನೋಡಿ ಸಂತೋಷಪಟ್ಟನು. ಬಸವಪ್ಪನವರು ದಂಡನೆ ಮಾಡಿಕೊಂಡು ಸುಖದುಃಖವೆಲ್ಲವನ್ನು ಹೇಳಿಕೊಳ್ಳಲಾಗಿ ಬಹಳ ಕಷ್ಟದಿಂದ ಬಂದಿದ್ದು ಇನ್ನೂ ಮುಂದೆ ಇರುವುದಕ್ಕು ಅಂಜಬ್ಯಾಡಿ ಎಂದು ಹೇಳಿ ದ್ರವ್ಯದ ಖರ್ಚಿಗೆ ನೀಡುತ್ತಾನೆ. ಮುಂದೆ ರಾಜ್ಯದ ಕಾರ್ಯ ನೆರವೇರಿಸಬೇಕೊ ಆ ಪ್ರಯತ್ನ ಶೀಘ್ರವಾಗಿ ಮಾಡಿಕೊಳ್ಳಿ ಎಂದು ಹೇಳಿ ಬಸಪ್ಪನವರು ಅಪ್ಪಣೆ ತಗೆದುಕೊಂಡು ಈ ಅನಂತಯ್ಯ ರಾಪ್ಪಾಟಿ ಪ್ಯಾಡಿಯೊಳಗೆ ಊಟ ಮಾಡಿ ಮಲಗಿದನು. ಮುಂದೆ ಬಳ್ಳಾರಿಯ ಫೌಜು ಅನಂತಪುರ ಸೇರಿ ಇಲ್ಲಿನ ಗಲಿಬಿಲಿ ಯಾವತ್ತು ಕಡಪ ನವಾಬರನ್ನು ಕೇಳಿ ಬಹಳ ದಿನಗಳಿಂದ ಬಂದ ರಾಜರ ಸಂಸ್ಥಾನಕ್ಕೆ ಸಹಾಯವಿಲ್ಲವೆಂದು ಹೋಯಿತು. ಹೀಗೆ ಅನೇಕ ವೃತ್ತಾಂತಗಳಿಂದ ಈ ಅನಂತಪುರದೊಳಗೆ ಬಸಪ್ಪನವರು ರಾಜ್ಯವನ್ನು ಸ್ಥಿರಪಡಿಸಿ ಮಾರ್ಗಶಿರ, ಶುದ್ಧ, ೧೫ರ ಶ್ರಿ ವೀರೂಪಾಕ್ಷೇಶ್ವರ ರಥೋತ್ಸವವನ್ನು ಆ ದಿನವೇ ಸಿದ್ಧರಾಮಪ್ಪನಾಯಕ ಅವರಿಗೆ ಪಟ್ಟಾಭಿಷೇಕ ಮಾಡಬೇಕೆಂದು ಮುಹೂರ್ತ ನಿಶ್ಚಯಿಸಿ ತಾನು ನಡೆಸಿದ ವರ್ತಮಾನವು ಹಿರೆಹಾಳು ಸುಭೆದಾರರು ಶಿವಪ್ಪನವರಿಗೂ ಕುಡುತಿನ ಸುಭೆದಾರರು ಜಟಂಗಿರಾಯರಿಗೂ ಬರೆಯಿಸಿ ಕಳುಹಿಸಲಾಗಿ ಅವರು ಉಭಯ

ಆ ಕಾಗದ ಪತ್ರಗಳ ನೋಡಿಕೊಂಡು ತಾವು ಆಲೋಚನೆ ಮಾಡಿ ಈ ವಿಷಯವನ್ನು ಮುರಾರಿರಾಯರಿಗೆ ಬರೆಯಿಸಿ ಕಳುಹಿಸಿದೆ. ಕೋಟೆಯೊಳಗೆ ಇದ್ದ ಸಿದ್ಧಪ್ಪನಾಯಕರಿಗೆ ಕರೆಯಿಸಿ ಕೊಂಡು ತನ್ನ ವಸ್ತ್ರಾಭರಣ ಕುದುರೆಯನ್ನು ಕೆಲವು ಸೈನ್ಯವನ್ನು ಒಂದು ಕಂಜೂರು ಕತ್ತಿಯನ್ನು ಸಹ ಕೊಟ್ಟು ಅನಂತಪುರಕ್ಕೆ ಹೋಗಿ ಬಾ ಎಂದು ಕಳುಹಿಸಿಕೊಟ್ಟರು. ಅನಂತಪುರಕ್ಕೆ ಸಿದ್ಧರಾಮಪ್ಪನಾಯಕನು ಮಾರ್ಗಶಿರದಲ್ಲಿ ಹೊರಟು ದ್ವಾದಶಿ ದಿವಸ ಸೇರಿ ಆ ಮರುದಿವಸ ಕೋಡೆಟಿಗೆ ಬಂದು ಶ್ರೀಸಂಗಮೇಶ್ವರ ದೇವರಿಗೆ ಉತ್ಸವ ಮಾಡಿಸಿ ಹುಣ್ಣಿಮೆಯ ದಿವಸ ೩ ತಾಸುಗಳಿಗೆ ಶುಭಲಗ್ನದಲ್ಲಿ ಶ್ರೀವಿರೂಪಾಕ್ಷ ದೇವರಿಗೆ ರಥದ ಹಗ್ಗ ಹಿಡಿಯುವ ಸಮಯದಲ್ಲಿ ಅನಂತಪುರಕ್ಕೆ ಪಶ್ಚಿಮ ಪಳ್ಳಗುಡ್ಡದ ಸಮೀಪದ ಗ್ರಾಮದೊಳಗೆ ಇದ್ದ ಬಸಪ್ಪನವರು ಕುದುರೆ ಸವಾರಿಯೊಂದಿಗೆ ಬಂದ ಸಿದ್ಧರಾಮಪ್ಪರನ್ನು ಕರೆದುಕೊಂಡು ಹೋಗಿ ರಥೋತ್ಸವದ ಗಾಲಿನಲ್ಲಿ ದೇವರ ದರ್ಶನ ಮಾಡಿಕೊಂಡು ಮುಂದೆ ಸಿಂಹಾಸನದ ಮೇಲೆ ಕೂಡಿಸಿ ಕಾತುರಾಗಿವೆ. ಸಮಯೋಜಕರು ಸಹ ಮುಜುರೆ ವಗೈರೆ ಮಾಡಿಸಲಾಗಿ ಅವರವರಿಗೆ ತಕ್ಕ ಉಡುಗೊರೆ ವಸ್ತ್ರ–ತಾಂಬೂಲಗಳ ಕೊಟ್ಟು ಪೇಟೆಯೊಳಗೆ ಕಳುಹಿಸಿ ಈ ಸಿದ್ದನಾಯಕರು ನಗರದೊಳಗೆ ಹೋಗಿ ಕ್ರಿ.ಶ. ೧೭೫೩ ಶ್ರೀ ಮುಬನಾಮ ಪ್ರಥಮ ಸಂವತ್ಸರ ಪ್ರಥಮ ರಾಜ್ಯಕ್ಕೆ ತಾನು ಪಟ್ಟದ ದೊರೆಯಾಗಿ ತನ್ನ ಬಾವ ಬಸಪ್ಪನಾಯಕರಿಗೆ ದಳವಾಯಿಯಾಗಿ ನಿಷ್ಕರ್ಶ ಮಾಡಿ ರಾಜ್ಯ ವಿಚಾರಿಸುತ್ತ ಕೆಲವು ದಿವಸ ನಡೆದ ತರುವಾಯ ಬುಕ್ಕಪಟ್ಟಣದ ಕೆರೆ ಹರಿದುದ್ದನ್ನು ಭದ್ರಪಡಿಸಿದ್ದನು.

ಕೆಲವು ದಿನಗಳ ನಂತರ ಮುರಾರಿರಾಯನು ಎರಡು ಸಾವಿರ ಕುದುರೆ, ನಾಲ್ಕು ಸಾವಿರ ಸೈನಿಕರು ತನ್ನ ಸರದಾರರೊಂದಿಗೆ ಇಸಬ್ಯಾನಿಗೆ ಕೊಟ್ಟು ಆತನ ಸಂಗಡ ನೀನು ಅನಂತಪುರಕ್ಕೆ ಹೋಗಿ ಚಂದವನ್ನು ತೆಗೆದುಕೊಂಡು ಬಾ ಎಂದು ಹೇಳಲಾಗಿ ಆತನು ಸೇನಾ ಸಮೇತವಾಗಿ ಬಂದು ಬುಕ್ಕರಾಯನ ಸಮುದ್ರಕ್ಕೆ ಮುತ್ತಿಗೆ ಹಾಕಿ ಚಂದವನ್ನು ಕೊಡಬೇಕೆಂದು ಕೇಳಿದನು. ಹೀಗಾಗಿ ನೂತನ ಸಂಸ್ಥಾನದ ನಿರ್ವಹಣೆಗಾಗಿ ಚಂದವನ್ನು ವಸೂಲಿ ಮಾಡುವುದು ಮುರಾರಿರಾಯರಿಗೆ ಗೊತ್ತಾಗಿದೆ ಎಂದು ತಿಳಿದು ಬಹಳ ಶ್ರದ್ಧೆಯಿಂದ ಬಂದು ಸರದಾರರಿಗೆ ಇರುವ ಸ್ಥಿತಿಗತಿಗಳನ್ನು ಹೇಳಲಾಗಿದೆ. ನಮ್ಮನ್ನು ಸುಮ್ಮನೆ ಕಳುಹಿಸುವುದು ರಾಯರಿಗೆ ಬೇಸರ ನಮಗೂ ಕೊರತೆ ಎಂದು ತಿಳಿದು ೧೦,೦೦೦ ರೂಗಳನ್ನು ಸಂದಾಯ ಮಾಡಬೇಕೆಂದು ಕರಾರು ಮಾಡಿದರು. ಈ ದೃಷ್ಟಿಯಿಂದ ನಗರದೊಳಗೆ ಇದ್ದ ಎತ್ತುಗಳು ಮೊದಲಾದವುಗಳನ್ನು ಅವರ ಸ್ವಾಧೀನಕ್ಕೆ ನೀಡಲಾಗಿ ಕೊನೆಗೆ ಅವುಗಳ ಮೊತ್ತ ೪೦೦೦ರೂ. ಗಳು ಆಯಿತು. ಉಳಿದ ಬಾಕಿ ಹಣ ೬,೦೦೦ರೂ. ಗಳಿಗೆ ಗ್ರಾಮದಲ್ಲಿ ಇದ್ದ ರೈತರಿಗೆ ತಲೆಗೆ ೫ ಹೊನ್ನನ್ನು ವೇಶ್ಯೆಯರ ಬೋಯಣ್ಣ ಹಾಗೂ ಕೃಷ್ಣಪ್ಪ ಶೆಟ್ಟರ್ ಇವರ ಮುಖಾಂತರವಾಗಿ ವಸೂಲಿ ಮಾಡಿಕೊಟ್ಟರು. ಮುಂದೆ ದಂಡು ಧರ್ಮಾವರದ ಕಡೆಗೆ ಮುತ್ತಿಗೆ ಹಾಕಲು ಹೋಯಿತು.

ಈ ಸಿದ್ದರಾಮಪ್ಪನಾಯಕರು ಅನಂತಯ್ಯನಿಗೆ ಕರೆಕಳುಹಿಸಿ ಬಹಾಳ ಅನುಸರಣೆ ಮಾಡಿ ವಸ್ತ್ರ ಪಾತ್ರಗಳ ಕೊಟ್ಟು ನಮಗೋಸ್ಕರ ಕಷ್ಟಬಿದ್ದು ನಮ್ಮ ಸಂಸ್ಥಾನ ಜೀರ್ಣೋದ್ಧಾರ ಮಾಡಿದಿರೆಂದು ಉಪಚಾರಿಸಿ ಆತನು ಮೊದಲು ಬಸಪ್ಪನಾಯಕರ ದಂಡಿಗೋಸ್ಕರ ಸರಬರಾಜಿಗೆ ಕೊಟ್ಟ ಹಣ ಉಪ್ಪಾರಹಳ್ಳಿ ಹಾಕಿಕೊಟ್ಟು ಬ್ರಹ್ಮಣಪಳ್ಳಿ ಉಂಬಳಿಗೆ ಪ್ರಾಂತ್ಯದಲ್ಲಿ ಇದ್ದ ಇಜ್ಜಾಲಮಲ್ಲಪ್ಪನ ಮನೆ ಆತನಿಗೆ ಇನಾಮು ಕೊಟ್ಟು ಆಮೇಲೆ ಸರದಾರರು ಭರ್ಮಾಜಿ ದಳವಾಯಿಯನ್ನು ಕರೆ ಕಳುಹಿಸಿ ಚಾಕರಿ ಮಾಡಿಸಿದ ತರುವಾಯ ಬಲವಂತರಾಯರ ದಂಡು ಅನಂತಪುರಕ್ಕೆ ಮುಟ್ಟಿತು.

ನಂತರ ಬಸಪ್ಪನಾಯಕನ ವರ್ತಮಾನದಿಂದ ಸಮಸ್ತ ಬಹುಮಾನ ಯುಕ್ತವಾಗಿ ಕೋಟೆ ಸೇರಿ ತಮ್ಮ ದೊರೆ ಸಿದ್ದರಾಮಪ್ಪನಾಯಕರ ಮುಂದೆ ಬಹುಮಾನಗಳನ್ನು ಇರಿಸುತ್ತಾನೆ. ಈ ಘಟನೆಯಿಂದ ಸಿದ್ದರಾಮಪ್ಪನಾಯಕರು ಬಹಳ ಸಂತೋಷಪಟ್ಟರು. ಈತನ ನಂತರ ಬಸಪ್ಪನಾಯಕನು ಹೊಸಕೆರೆಯಲ್ಲಿ ತಮ್ಮ ಜನಗಳ ಜೊತೆಗೂಡಿ ರಾಜ್ಯವನ್ನು ನೋಡಿಕೊಳ್ಳುತ್ತಿದ್ದನು. ಮುಂದೆ ಬಳ್ಳಾರಿಯಿಂದ ತಾಡಮರಿ ತಾಲ್ಲೂಕು ಎಲ್ಲಟ್ಟಿ ಗ್ರಾಮದ ಅಧಿಕಾರಿಯಾದ ಯೋಗಾನಂದರು ಬೆಳಗಿನ ಜಾವ ಅನಂತಪುರಕ್ಕೆ ಹೋಗಿ ಪೇಟೆಯೊಳಗೆ ಇರುವ ಶ್ರೀ ಹನುಮಂತರಾಯರ ದೇವಸ್ಥಾನದ ದರುಶನವನ್ನು ಪಡೆದುಕೊಂಡು ಅಲ್ಲಿಂದ ದನಗಳನ್ನು ಹಿಡಿದುಕೊಂಡು ಅನಂತಪುರಕ್ಕೆ ಬಂದರು.

ಈ ವರ್ತಮಾನವನ್ನು ತಾಡಿಮರಿ ರಾಮಪ್ಪನಾಯಕನು ಕೇಳಿ ತಮ್ಮ ಕುದುರೆಯನ್ನು ಮತ್ತು ಸೈನಿಕರನ್ನು ತೆಗೆದುಕೊಂಡು ಹಾದಿಗೆ ಅಡ್ಡವಾಗಿ ಬಂದು ಇಬ್ಬರ ಮಧ್ಯೆಯು ಯುದ್ಧವಾಗಿ ತಾಡಿಮರಿಯರ ಫೌಜು ಮುರಿದುದ ಅವರು ಅನಂತಪುರವನ್ನು ಸೇರಿದರು. ಇದ್ದ ದನಗಳನ್ನು ಮಾರಿ ಯೋಗಾನಂದನ ಕೋಟೆಯೊಳಗೆ ಭದ್ರಮಾಡಿ ೪,೦೦೦ ರೂ.ಗಳು ಅಪರಾಧ ತೆಗೆದುಕೊಂಡು ಆತನ ವಸ್ತ್ರ-ತಾಂಬೂಲಗಳ ಕೊಟ್ಟು ತಾಡಿಮರಿಗೆ ಕಳುಹಿಸಿದರು. ಮುಂದೆ ಬಸಪ್ಪನವರು ಹಿರೇಹಾಳು ಶಿವಪ್ಪನವರ ಬಳಿಯಲ್ಲಿ ಅಪ್ಪಣೆ ತೆಗೆದುಕೊಂಡು ತಮ್ಮ ರಾಜ್ಯಕ್ಕೆ ಬಂದವರಿಗೆ ಶಿವಭಕ್ತರಂತೆ ಕಾಣುವನು.

ಈ ವರ್ತಮಾನದಿಂದ ಗುತ್ತಿ ಮುರಾರಿರಾಯರು ಉಪ್ಪಾರಹಳ್ಳಿ ಮೇಲೆ ಹೊರಟು ಪೆನ್ನಗೊಂಡುಗೆ ಹೋಗುತ್ತಾ ಇರುವಾಗ ಮಾರ್ಗ ಮಧ್ಯದಲ್ಲಿ ಇರುವ ಗ್ರಾಮಗಳನ್ನು ಸುಲಿಗೆ ಮಾಡಿಕೊಂಡು ಹೋಗುತ್ತಿದ್ದರು. ಈ ವರ್ತಮಾನವನ್ನು ಕಂಡ ಬಸಪ್ಪನು ತನ್ನ ಸೈನಿಕರನ್ನು ಕರೆ ಕಳುಹಿಸಿ ಮುರಾರಿರಾಯರ ಮೇಲೆ ಎರಗಿದರು. ಇದರಿಂದ ಮುರಾರಿರಾಯರು ತಮ್ಮ ಕಡೆ ವಕೀಲರಾದ ಪರಂಗಿ ತಮ್ಮಣ್ಣನನ್ನು ಕಳುಹಿಸಿ ತಮಗೆ ನಷ್ಟವಾಗಿ ನಾಲಕ್ಕನೆ ಭಾಗದೊಳಗೆ ಜಮಾ ಇಟ್ಟುಕೊಂಡು ದನಗಳು, ಒಂಟೆಗಳ ಹಾಗೂ ಕುದುರೆಗಳನ್ನು ಬಿಡಿಸಿಕೊಂಡು ಹೋದನು.

ಅನಂತಪುರಕ್ಕೆ ಬಂದು ಅಕ್ಕನಾದ ನೀಲಮ್ಮನ ಹೆಸರಿಟ್ಟು ಬಿಲ್ವಗಿಡಗಳು ಹಾಕಿಸಿ ವನ ಪ್ರತಿಷ್ಠಾಪನೆ ಮಾಡಿದನು.

ಕೆಲವು ದಿನಗಳ ನಂತರ ಬಹದ್ದೂರ ನವಾಬ್ ಹೈದರಾಲಿ ಖಾನ್ ಅವರ ಕಡೆಯಿಂದ ಮೀರ್ ಸೈದುಲ್ಲಾಖಾನ್ ಎಂಬ ಫೌಜುದಾರನು ಗುರುಂಕೊಂಡ ಕಡೆಯಿಂದ ಅನಂತಪುರಕ್ಕೆ ಬಂದು ಸೈನ್ಯದ ವ್ಯವಸ್ಥೆಯನ್ನು ನೋಡಿ ತಾಡಮರಿ ಮಾರ್ಗದಿಂದ ಪಡುವಲು ದಿಕ್ಕಿನಿಂದ ಹಿಂದಿರುಗುವಾಗ ಅಗಾಡಿ ಫೌಜು ವೀರಪ್ಪನ ಗುಡಿಗಳ ಹತ್ತಿರ ಇಳಿದಿರಲಾಗಿ ಬಸಪ್ಪನವರು ಕೋಟೆ ಮೇಲಿನಿಂದ ನೋಡಿ ಹಂಡೆ ಗ್ರಾಮಕ್ಕೆ ಮುತ್ತಿಗೆ ಹಾಕಿ ಉಳಿದಿರುವುದು ಫಿರಂಗಿಗಳಿಂದ ಸುಡುವ ಮೂಲಕ ಆ ಫೌಜಿನಲ್ಲಿ ಇದ್ದ ಅಂಗಡಿ ವಸತಿಗಳು, ಜನ-ಬಿಡಾರಗಳು ಹೊಡೆದುಕೊಂಡು ಹೋದವು.

ಈ ವರ್ತಮಾನದಿಂದ ಸೈದುಲ್ಲಾಖಾನರು ಸಿಟ್ಟು ಮಾಡಿಕೊಂಡು ಮುತ್ತಿಗೆ ಹಾಕಿದರು. ನಾಲ್ಕು ದಿನಗಳವರೆಗೆ ಯುದ್ಧ ಕಲಹಳು ನಡೆದವು. ದಂಡಿನೊಳಗಿದ್ದ ಅಮೀರ್ ಸೈದುಲ್ಲಾಖಾನನು ಹಣ ಕೊಟ್ಟರೆ ದಂಡೆದ್ದು ಹೋಗುತ್ತೇವೆಂದು ಹೇಳಿ ಮುರಾರುಪ್ಪನವರ ರಂಗಪ್ಪನನ್ನು-ಬಾಲೆಖಾನವರನ್ನು ಕಳುಹಿಸಿ ಸವಾಲ್-ಜವಾಬ್ ಮಾಡಿ ಮೂವತ್ತು ಸಾವಿರ ಖಂಡಣಿ ಚುಕಾಯಿಸಿಕೊಂಡು ಆ ಹಣಗಳಿಗೆ ತಮ್ಮ ವಕೀಲವನ್ನು ಒತ್ತೆಕೊಟ್ಟರು.

ನಂತರ ದಂಡೆದ್ದು ಹೋಗಿದ್ದ ವಕೀಲರುಗಳ ಖಾಲೇಖಾನ್ ರಂಗಪ್ಪನನ್ನು ಅನಂತಪುರಕ್ಕೆ ಕಳುಹಿಸಿಕೊಟ್ಟು ತಾಡಮರಿ ಮತ್ತು ಅನಂತಪುರ ಸೈನ್ಯದ ಮಧ್ಯೆ ಕಲಹಗಳು ಸಂಭವಿಸಿದವು. ತಾಡಮರಿ ರಾಮಪ್ಪನಾಯಕನು ಕೋಪದಿಂದ ಸೈನ್ಯ ಸಮೇತನಾಗಿ ಪಸಲೂರು ಬಳಿಯಲ್ಲಿ ಬಂದು ನೆಲೆವೂರಿದನು. ನಂತರ ಪಸಲೂರು ಜನರೊಂದಿಗೆ ಬಂದು ದನಗಳ-ಕುರಿಗಳಿಗೋಸ್ಕರ ತಿರುಗುತ್ತಿದ್ದಾಗ ಉಪ್ಪಾರಹಳ್ಳಿ ವರ್ತಮಾನವು ಬಸಪ್ಪನವರಿಗೆ ಆತನ ಮಂದಿ ಕುದುರೆ ಬಾನಗಳು ಫಿರಂಗಿಗಳ ತೆಗೆದುಕೊಂಡು ಹೋಗಿ ಗಿರಿಯಪ್ಪನ ತೋಪಿನ ಬಳಿಗೆ ಹೋಗಿ ಯುದ್ಧ ಸಂಭಾವಿಸಿ ಉಭಯ ಸೈನ್ಯದೊಳಗೆ ಬಹುಜನ ಮೃತರಾಗಿ ಹೋದರು. ಮುಂದೆ ತಾಡಿಮರಿಯವರ ಫೌಜು ಮುರಿದು ಪಸಲೂರು ಗ್ರಾಮ ಸೇರಿತು.

ಬಸಪ್ಪನವರು ಯುದ್ಧ ಸಾಧಿಸಿ ತಾಡಮರಿಯರ ಹೆಣಗಳನ್ನು ತೆಗೆದುಕೊಂಡು ಹೋಗುವುದಕ್ಕೆ ಅಪ್ಪಣೆ ಕೊಟ್ಟು ತಾವು ಅನಂತಪುರಕ್ಕೆ ಸೇರಿದರು. ಮುಂದೆ ತಾಡಮರಿಮಂದಿ ಸಂಸ್ಥಾನಕ್ಕೆ ವೇಪಳ್ಳಿ ವೆಂಕಟಪತಿನಾಯಕನು ಬಂದನು. ಈತನು ರಾಮಪ್ಪನಾಯನಿಗೆ ಕೆಟ್ಟ ಮಾರ್ಗಗಳನ್ನು ಹೇಳುವ ಮೂಲಕ ಬಸಪ್ಪನಾಯಕನಿಗೆ ದುರ್ಮಾರ್ಗ ತೋರಿಸಿದನು. ಇದರಿಂದ ಬಸಪ್ಪನಾಯಕನು

ಕುಡಿಯುತ್ತ ಗ್ರಾಮದೊಳಗೆ ಕೆಟ್ಟ ಕೆಲಸ ಮಾಡುತ್ತ ಬಂದುದರಿಂದ ಸಂಸ್ಥಾನವು ಕೆಳಕ್ಕೆ ಬಂತು. ಮುಂದೆ ಬಸವಪ್ಪನವರು ಹೊರಟು ಹೋಗುತ್ತಾ ಇರುವಾಗ ಅರೆ ಶ್ಯಾಮಂತರಾಯನು ಮಸಲ್ಮಾನದೀನಾ ಇವರ ಮುಂತಾದ ಊಳಿಗದವರ ಸಂಗಡ ಉಪ್ಪರಿಗೆಯೊಳಗೆ ರಾಮಪ್ಪ ನಾಯಕನು ತುಂಬಾ ನಿದ್ರೆಯಲ್ಲಿರುವ ಎದ್ದು ಅಲ್ಲಚಮಕ್ಕೆ ಕಲ ಕಲ ಧ್ವನಿ ಕೇಳಿ ನಗರ ಬಾಗಿಲಿಗೆ ಬಂದು ಹಂಡೆಯವರು ಕೋಟೆ ಕೊಂಡರು. ಮುಂದೆ ಕೆಲವು ಸ್ತ್ರೀಯರು ಕೋಟೆಯೊಳಗೆ ಹೇಳಿಕೊಳ್ಳುತ್ತಾ ಇರುವುದನ್ನು ಕೇಳಿ ರಾಮಪ್ಪನಾಯಕನನ್ನು ಅಲ್ಲಿ ಇದ್ದವರು ಎಬ್ಬಿಸಿ ಕಳುಯಿಸಲಾಗಿ ಅವರು ಆಯುಧಗಳನ್ನು ಮನೆ ಬಾಗಿಲು ತೆಗೆದುಕೊಂಡು ಆ ನಗರ ಸುತ್ತಿಕೊಳ್ಳುವುದಕ್ಕೆ ಬಂದ ಜನರನ್ನು ಮುರಿದು ಹೊಡೆದು ಯುದ್ಧವ ಮಾಡುತ್ತಾ ಊರ ಬಾಗಿಲ ಹತ್ತಿರ ಬಂದರು.

ಕೋಟೆ ಹೊರಗೆ ಫೌಜು ಸಂಗಡ ಇದ್ದ ರುದ್ರಪ್ಪ ಸುಬ್ಬರಾಯರು ಹೊರಗಿನ ಪೇಟೆಗೆ ಫೌಜಿನಿಂದ ಬರುತ್ತಾ ಕೋಟೆ ಮೇಲೆ ಗುಂಡುಗಳು ಹಾರಿದ್ದು ನೋಡಿ ಮೋಸವಾಯಿತು. ಕೋಟೆಯೊಳಗೆ ಇದ್ದ ಮಂದಿಗೂ ಅನಂತಪುರದ ಮಂದಿಗೂ ಕಲಹಗಳು ನಡೆದವು. ಇದರಿಂದ ಅನಂತಪುರದ ಜನರು ಬಹಳ ಹತವಾದುದರಿಂದ ಮಿಕ್ಕವರು ಆಯುಧಗಳ ಬಿಟ್ಟು ಕೋಟೆ ಹಾರಿ ಬಂದು ಈ ಫೌಜಿನೊಳಗೆ ಇದ್ದ ರುದ್ರಪ್ಪ ಸುಬ್ಬರಾಯರವರ ಸಂಗಡ ಹೇಳಲಾಗಿ ಅವರು ಕೇಳಿ ಚಿಂತಿಸುತ್ತಾ ಇದ್ದರು. ರುದ್ರಪ್ಪ ಸುಬ್ಬರಾಯರವರು ಸೇನೆಯಿಂದ ಹಿಂದಕ್ಕೆ ತಿರುಗಿ ಬರುವಾಗ ಯೇಕಪಾದಹಳ್ಳಿ ಬಳಿಯಲ್ಲಿ ಎದುರಾಗಿದ್ದು ಬಸಪ್ಪನಾಯಕರವರ ಸಂಗಡ ಈ ವರ್ತಮಾನವನ್ನು ಹೇಳಲಾಗಿ ಫೌಜಿನ ಸಂಗಡ ಹಿಂದಕ್ಕೆ ತಿರುಗಿ ಅನಂತಪುರ ಸೇರಿದನು.

ಆರು ತಿಂಗಳು ತರುವಾಯ ಈ ಬಸಪ್ಪನವರು ಅನಂತಪುರಕ್ಕೆ ಹನ್ನೆರಡು ಮೈಲು ದೂರದಲ್ಲಿ ಇದ್ದ ತಾಡಪರ್ತಿ ಪೇಟೆ ಬಹು ಬಸ್ತಿಯಾಗಿದೆ. ಗ್ರಾಮದ ಅಮೀಲ ರಂಗು ಗೋವಿಂದರಾಯರವರು ವರ್ತಕ ವ್ಯಾಪಾರ ಮಾಡಿ ಮುರಾರಿಯವರಿಗೆ ಬಡ್ಡಿಗೆ ಕೊಟ್ಟಿದ್ದರಿಂದ ಆತನಿಗೆ ತಾಡಿಪತ್ರಿ ಉದ್ಯೋಗ ಬಂತು. ಬಹುಮಂದಿ ಕೈಯಲ್ಲಿ ಆ ಗ್ರಾಮ ಕಸಿದುಕೊಳ್ಳಬೇಕೆಂದು ಎರಡು ವರುಷ ಮನಸ್ಸಿನಲ್ಲಿ ಇರಿಸಿ ಸಮಯ ನೋಡಿ ಸೇನಾಪತಿಯನ್ನು ಪೇಟೆಯೊಳಗೆ ಕಳುಹಿಸಿದ. ಮುಂದೆ ಬಸಪ್ಪನಾಯಕನ ನೂರಾರು ಜನರನ್ನು ಹೊಡೆದು ರಂಗುಗೋವಿಂದು ಅವರನ್ನು ಬಿಡಿಸಿಕೊಂಡು ಬಾಯೆಂದು ಅಪ್ಪಣೆ ಕೊಟ್ಟಿದ್ದನು. ಮುಂದೆ ಬಸಪ್ಪನವರು ರಂಗುಗೋವಿಂದನನ್ನು ಅನಂತಪುರಕ್ಕೆ ತೆಗೆದುಕೊಂಡು ಹೋದನು. ಮುಂದೆ ಈ ಸಂಧಿಯ ವೃತ್ತಾಂತವು ಸುಬ್ಬರಾಯನನ್ನು ಗುಬ್ಬಿ ಹನುಮಪ್ಪನ ಸೇನಾಪತಿಯನ್ನಾಗಿ ನೇಮಿಸಿ ಬಸಪ್ಪನು ಅನಂತಪುರಕ್ಕೆ ಬಂದು ಸೇರಿದನು.

ಬಸಪ್ಪನವರು ಅನಂತಪುರಕ್ಕೆ ಬಂದು ಎರಡನೆಯ ಕೋಟೆಯ ಕಟ್ಟಿಸಿ ಕಣಜಗಳ ಮಾಡಿಸಿ, ತುರ್ತುಗಿ ದೇಸಾಯಿ ದೇವಣ್ಣನನ್ನು ಕರೆದುಕೊಂಡು ಬುಕ್ಕಪಟ್ಟಣದ ಶುಭ ಮುಹೂರ್ತದಲ್ಲಿ ಹೊಡೆದ ಕೆರೆಗೆ ಕಟ್ಟೆಯನ್ನು ಕಟ್ಟಿಸುವಾಗ ಅದು ಮೂರು ಭಾಗವಾಗಿ ಹರಿದು ಹೋಯಿತು. ಬಸಪ್ಪನವರು ಆಗಲೇ ದೇಹದ ಸ್ಥಿತಿಯು ಸರಿಯಾಗಿ ಇಲ್ಲದ್ದರಿಂದ ಪಾಲಕ್ಕಿಯೊಳಗೆ ಅನಂತಪುರಕ್ಕೆ ಬಂದು ಸೇರಿದ. ಇದಾದ ಕೆಲವು ದಿನಗಳ ನಂತರ ಕ್ರಿ.ಶ. ೧೭೭೧ರಲ್ಲಿ ಕಾಲವಾದನು. ಮುಂದೆ ಸಿದ್ದರಾಮಪ್ಪನಾಯಕ ಬುಕ್ಕಪಟ್ಟಣದ ಕೆರೆಯನ್ನು ಕಟ್ಟಿಸಿ ಸುಬ್ಬರಾಯರ ನೇತೃತ್ವವನ್ನು ವಹಿಸಿದನು. ಮುಂದೆ ಪೇಶ್ವೆಯವರು ಶ್ರೀ ರಂಗಪಟ್ಟಣದಿಂದ ಹೈದರಾಲಿಯನ್ನು ಖಂಡಣಿ ಹಣಗಳನ್ನು ಕೊಡೆಂದು ತಾಕಿತು ಮಾಡಿದರು. ಆದುದರಿಂದ ಸಂಸ್ಥಾನದೊಳಗೆ ನಗದು ಬೆಳ್ಳಿ ಬಂಗಾರ ಪೇಶ್ವೆಗಳಿಗೆ ಸಲ್ಲಿಸಿದರು. ಮುಂದೆ ಪೇಶ್ವೆಗಳು ಕ್ರಿ.ಶ. ೧೭೭೬ರಲ್ಲಿ ಸುಬೇದಾರರು ಮುಂದೆ ಬಳ್ಳಾರಿಯನ್ನು ವಶಪಡಿಸಿಕೊಂಡರು.

ಬಹದ್ದೂರರು ಮತ್ತು ನವಾಬರು ಬಳ್ಳಾರಿಯಲ್ಲಿ ಠಾಣೆ ಹಾಕಿಕೊಂಡು ಮುರಾರಿರಾಯರು ಗುತ್ತಿಯೊಳಗೆ ಇದ್ದರೆಂದು ವರ್ತಮಾನ ಹೇಳಿ ಇಲ್ಲಿಂದ ಹೊರಟು ಗುತ್ತಿಗೆ ಹೊದರು. ಮುಂದೆ ಗುತ್ತಿಗೆಯಲ್ಲಿ ಬಹದ್ದೂರವರು ಅನಂತಪುರವನ್ನು ನೀಡಬೇಕೆಂದು ತಿಳಿಸಿದರು. ಗುತ್ತಿ ಸುಬೇದಾರ ಬಾಲಾಜಿರಾಯರಿಗೆ ಕೊಟ್ಟು ಅನಂತಪುರ ಸಂಸ್ಥಾನದ ಕಡೆಯಿಂದ ಪ್ರತಿ ವರುಷ ನಾಲ್ವತ್ತು ಸಾವಿರ ರೂಪಾಯಿಗಳು ವಸೂಲಿ ಮಾಡೆಂದು ಹೇಳಿದ್ದರಿಂದ ಅದೇ ಪ್ರಕಾರ ಹಿಂದು-ಮುಂದು ಸಲ್ಲಿಸುತ್ತ ಬಂದದ್ದರಿಂದ ಸಂಸ್ಥಾನ ಬಡತನವಾಗಿ ಬಂತು.

ಈ ಬಹದ್ದೂರು ನವಾಬರು ಬಳ್ಳಾರಿಗೆ ಠಾಣೆ ಹಾಕಿಕೊಂಡು ಮುರಾರಿರಾಯರವರು ಗುತ್ತಿಯೊಳಗೆ ಇದ್ದರೆಂಬ ವರ್ತಮಾನ ಕೇಳಿ ಇಲ್ಲಿಂದ ಹೊರಟು ಗುತ್ತಿಗೆ ಬಂದು ಮುತ್ತಿಗೆ ಇಳಿದ ಮತ್ತೆ ಎರಡು ಮೂರು ತಿಂಗಳಿಗೆ ಗುತ್ತಿಗೆ ಠಾಣೆ ಬಿತ್ತು. ಆಮೇಲೆ ಬಹದ್ದೂರವರು ಅನಂತಪುರದ ಕಪ್ಪಕಾಣಿಕೆಯನ್ನು ವಸೂಲಿ ಮಾಡುವುದಕ್ಕೋಸ್ಕರ ಜಮಾದಾರ ಕನಿರಾಂ ಹರಿಕಾರ ಪುಟ್ಟಯ್ಯ ಇವರುಗಳ ಐವತ್ತು ಕುದುರೆಯನ್ನು ಸೇವಕ ಇವರ ಮುರಾರಿರಾಯನ ಹಿಡಿದುಕೊಂಡು ಅನಂತಪುರ ಮಾರ್ಗದಲ್ಲಿ ಸಾಗಿಸಿ ತಾನು ದಂಡುಸಹಿತವಾಗಿ ಕೊಡೇಟಿ ಮಾರ್ಗದಲ್ಲಿ ಹೋಗಿ ಗುತ್ತಿ ಸುಬೇದಾರ ಬಾಲಾಜಿರಾಯರವರಿಗೆ ಕೊಟ್ಟು ಅನಂತಪುರದ ಸಂಸ್ಥಾನದ ಕಡೆಯಿಂದ ಪ್ರತಿ ವರುಷ ನಲವತ್ತು ಸಾವಿರ ವಸೂಲಿ ಮಾಡೆಂದು ಹೇಳಿದ್ದರಿಂದ ಸಂಸ್ಥಾನವು ಬಡತನವಾಯಿತು.

ಬಾಲಾಜಿರಾಯರು ಮೃತ ಹೊಂದಿದರಿಂದ ಗುತ್ತಿ ದೇಶದ ಅಧಿಕಾರಿ ಸುಬೇದಾರ ನರಸಪ್ಪಯ್ಯನವರಿಗೆ ಕ್ರಿ.ಶ.೧೭೮೧ರಂದು ಮೊಕರಾರು ಮಾಡಿ ಕಳುಹಿಸಿ ಕೊಟ್ಟರು. ಮುಂದೆ

ಸುಬೇದಾರನಾದ ನರಸಪ್ಪಯ್ಯನವರು ರಾಜ್ಯದ ಮೇಲೆ ಹಣ ಸಿಡಿದು ಹೋಗದೆ ಈ ಸಿದ್ದರಾಮಪ್ಪನಾಯಕ ಕರೆ ಕಳುಹಿಸಿ ಭೇಟಿ ಮಾಡಿಕೊಂಡು ಪೇಟೆಯೊಳಗೆ ತಿಮ್ಮಣ್ಣನವರ ಮನೆಯೊಳಗಿದ್ದನು.

ಸಿದ್ದರಾಮಪ್ಪನಾಯಕರನ್ನು ಕೇಳಲಾಗಿ ನಮಗೆ ಹಣಗಳು ಕೊಡುವುದಕ್ಕೆ ನಿಮ್ಮ ರಾಜ್ಯ ನೀವೆ ವಿಚಾರಿಸಿಕೊಳ್ಳಬೇಕೆಂದು ಕೋಟೆ ಬೀಗ ಮುದ್ರೆಗಳನ್ನೊಪ್ಪಿಸಿದ್ದರಿಂದ ಆ ನರಸಪ್ಪಯ್ಯನವರು ನಿಮಗೆ ಊಟದ ಐವಜು ಕೊಟ್ಟರೆ ನಾವು ಗುತ್ತಿಗೆ ಹೋಗುತ್ತೇವೆ. ಸಿದ್ದರಾಮಪ್ಪನವರಿಗೆ ಗ್ರಾಸಕ್ಕೆ ಸುಂಕದ ಮೇಲೆ ದಿನ ಒಂದಕ್ಕೆ ನಾಯಕನ ಹೊನ್ನು ಪ್ರಕಾರ ಕೊಡುವ ಮೇರೆಗೆ ನೇಮಿಸಿ ಕೆರೆಕೆಳಗೆ ಇವರು ಮಾಡುತ್ತ ಇದ್ದು ವ್ಯವಸಾಯದ ಹೊಲಗಳು ನಡಿಯುವ ಹಾಗೆ ಬೆಟ್ಟದರಾಯನವರೆಗೂ ಹೇಳಿದ. 

ಸಿದ್ದರಾಮಪ್ಪನಾಯಕರು ಮಗನಾದ ದೊಡ್ಡರಾಮಪ್ಪ ನಾಯಕರ ಕೆಲವು ಜನರನ್ನು ದಂಡಿನೊಳಗೆ ಚಾಕರಿ ಮಾಡಿಸಿಕೊಳ್ಳುವುದಕ್ಕೆ ನೇಮಕ ಮಾಡಿ ಮೂರನೇ ಮಗನಾದ ಸಿದ್ದರಾಮಪ್ಪ ನಾಯಕನು ಶ್ರೀ ರಂಗಪಟ್ಟಣಕ್ಕೆ ಕಳುಹಿಸಿ ದೊರೆಯು ಗುತ್ತಿಗೆ ಹೋದನು. ಕೆಲವು ದಿವಸಗಳಿಗೆ ಆ ಅಮಲ್‌ದಾರರು ಶ್ರೀ ರಂಗಪಟ್ಟಣದಿಂದ ಕಿಲ್ಲೆಗೆ ನೇಮಕವಾದನು. ಸಿದ್ದರಾಮಪ್ಪ ನಾಯಕರಿಗೆ ಖರ್ಚುವೆಚ್ಚಗಳಿಗೆ ಇಕ್ಕಟ್ಟಾಗಿ ಸಮೀಪದಲ್ಲಿ ಇದ್ದ ವಸ್ತ್ರ ಪಾತ್ರೆಗಳು ಕೊಟ್ಟು ಮುಂತಾದ ಚಿಲ್ಲರೆ ಸಾಮಾನುಗಳನ್ನು ಮಾರಿಕೊಂಡು ಕಾಲ ಕಳೆಯುತ್ತಿದ್ದನು. ಹೀಗಿರುವಾಗ ದೇಹವು ಅನಾರೋಗ್ಯಕ್ಕೆ ತುತ್ತಾದ್ದರಿಂದ ಈತನು ಕ್ರಿ.ಶ.೧೭೮೮ರಲ್ಲಿ ವಿಧಿವಶನಾದನು.

ನ್ಯಾಮತ್‌ಖಾನ್ ಪತ್ತೇಸಾಹೇಬರವರ ಅಮಲಿನೊಳಗೆ ಸಿದ್ದರಾಮಪ್ಪನಾಯಕ ಮತ್ತು ಆತನ ಮಕ್ಕಳಾದ ಹನುಮಪ್ಪನಾಯಕ ಮತ್ತು ಬಸಪ್ಪನಾಯಕ, ದೊಡ್ಡರಾಮಪ್ಪನಾಯಕನ ಮಕ್ಕಳು ಸಿದ್ದರಾಮಪ್ಪ ವಸಂತರಾಯ ಒಬ್ಬನು ಅಮ್ಮನವರು ಇನ್ನೂ ಮುತಾಂದವರು ಇವರನ್ನು ಚೌಕಿ ಪಹರೆಯಲ್ಲಿ ಇರಿಸಿಕೊಂಡಿದ್ದರು. ಮುಂದೆ ನ್ಯಾಮತ್‌ಖಾನ್ ಬಿಡುಗಡೆಯಾಗಿ ಕಿಲ್ಲೇದಾರು ಮೀರ್ ಖಾಸಿಂ ಎಂಬುವನು ಚೌಕಿ ಪಹರೆಯಲ್ಲಿ ಬಂದೋಬಸ್ತು ಮಾಡಿಕೊಂಡು ಇದ್ದನು. ಇವರುಗಳನ್ನು ಟಿಪ್ಪುಸುಲ್ತಾನ್, ಕಿಲ್ಲೇದಾರ್ ಮತ್ತು ಅಮಲ್‌ದಾರನನ್ನು ಬಕರಿ ಹಬ್ಬಕ್ಕೆ ಕರೆದನು. ಟಿಪ್ಪು ದರುಶನವನ್ನು ಪಡೆದ ಇವರು ಮುಂದೆ ಅನಂತಪುರಕ್ಕೆ ಬಂದರು. ಚೌಕಿ ಪಹರೆಯ ಬಂದೀಖಾನೆಯಲ್ಲಿ ಇದ್ದು ಜನರಿಗೆ ಸಂಸ್ಥಾನದ ಜನಗಳಿಗೆ ಬಂದೋಬಸ್ತು ಮಾಡುವುದಕ್ಕಾಗಿ ಅಮೀರ್‌ಖಾಸಿಂ ಬಿನ್ನಹ ಮಾಡಿದನು.

ಟಿಪ್ಪುಸುಲಾನ್, ಅಮೀರ್ ಖಾಸಿಂ ಇವರು ಬಿನ್ನಹ ಮಾಡಿದ್ದರಿಂದ ಅನೇಕ ರೀತಿಯಲ್ಲಿ ಬಂದೋಬಸ್ತು ಮಾಡಿಸಿದನು. ಮುಂದೆ ಸಿದ್ದರಾಮಪ್ಪನಾಯಕರ ಮಕ್ಕಳು ಇಬ್ಬರು, ಮೊಮ್ಮಕ್ಕಳು

ಇಬ್ಬರು, ಹನುಮಪ್ಪನಾಯಕ-ಬಸಪ್ಪನಾಯಕರನ್ನು ಕಿಲ್ಲೇದಾರ ಮೀರ್‌ಖಾಸಿಂ ಹೇಳಿದ ವಿಷಯಗಳಿಂದ ಟಿಪ್ಪು ಸುಲ್ತಾನನು ಅನಂತಪುರಕ್ಕೆ ಹೋಗುತ್ತಿರುವಾಗ ಗಲ್ಲಿಗೆ ತೂಗು ಹಾಕಿ ಎಂದು ಅಪ್ಪಣೆ ನೀಡುತ್ತಾನೆ. ಬುಕ್ಕರಾಯ ಸಮುದ್ರಕ್ಕೆ ಹೋಗುವ ಮಾರ್ಗಕ್ಕೆ ಪಡುವಲ ದಿಕ್ಕಿನಲ್ಲಿ ಪ್ರಭುವಯ್ಯನನ್ನು ವಿಶ್ವೇಶ್ವರನ ತೋಪಿನೊಳಗೆ ಪ್ರಥಮ ಗಿಡದಲ್ಲಿ ಗಲ್ಲಿಗೆ ಹಾಕಿದರು. ತರುವಾಯ ಕೆಲವೊಂದು ಭಾಗಗಳಾದ ಅನಂತಪುರ, ಚೌಕಿ ಪಹರೆ, ಕುಂದರ್ಪಿ, ಬಳ್ಳಾರಿ ಭಾಗಗಳು ಮುಂತಾದವು.

ಟಿಪ್ಪು ಸುಲ್ತಾನ್‌ನ ಕೈವಶವಾಗಿದ್ದ ಸಿದ್ದರಾಮಪ್ಪನಾಯಕನಿಗೆ ತಿಂಗಳ ಒಂದಕ್ಕೆ ಕಂಠಿರಾಯ ಹೊನ್ನು ಗೊತ್ತು ಮಾಡಿ ಅರವತ್ತು ಪ್ರಕಾರದ ಸಂಬಳ ನಿರ್ಣಯ ಮಾಡಿ ಸಾವಿರ ಕಾಮಾಟಿ ಜನರ ಕೈಯಿಂದ ಕೆಲಸ ನಡೆಸೆಂದು ಹೇಳಿದನು. ಅನಂತಪುರದೊಳಗೆ ನಡೆದ ವೃತ್ತಾಂತವನ್ನು ನೆನೆದ ಸಿದ್ದರಾಮಪ್ಪನಾಯಕನು ಭಯದಿಂದ ಚಿಂತಿಸುತ್ತಿದ್ದನು. ಮುಂದೆ ತಿಮ್ಮಬೋಯಿ ಎಂಬುವನು ಸಿದ್ದರಾಮಪ್ಪನಾಯಕನನ್ನು ಕರೆದುಕೊಂಡು ಚೌಕಿ ರಹದಾರಿ ತೋರಿಸಲು ಸಂಗಡ ಹೋದನು. ಮುಂದೆ ಸಿದ್ದರಾಮಪ್ಪನಾಯಕನು ಕಾಳಹಸ್ತಿ ಸೀಮೆಗೆ ಹೋಗಿ ವಿಶ್ರಮಿಸಿದನು. ಹೀಗೆ ಸಿದ್ದರಾಮಪ್ಪನಾಯಕ, ಟಿಪ್ಪು, ಕಿಲ್ಲೇದಾರರು, ಫೌಜುದಾರರು, ನ್ಯಾಮತ್‌ಖಾನ್ ಹಾಗೂ ಪತ್ತೇಸಾಹೇಬರ ನಡುವೆ ಈ ಸಂಧಿ ಕಾರ್ಯಗಳು ನಡೆಯುತ್ತವೆ.

ಅನಂತಪುರದೊಳಗೆ ಇದ್ದ ರುದ್ರಪ್ಪನವರ ಫೌಜು ಲಡಾಯಿ ಮಾಡುತ್ತ ಇರುವಾಗ ಉಪ್ಪಾರಹಳ್ಳಿ ಬಾಗಿಲಿಗೆ ಅಡ್ಡವಾಗಿ ನಿಂತಿತು. ಪೇಟೆಯೊಳಗೆ ಮುತ್ತಿಗೆ ಹಾಕಿದ್ದ ರುದ್ರಪ್ಪನಾಯ್ಕ ಫೌಜು ಇದ್ದುದ ನೋಡಿ ಅಧೈರ್ಯ ಬಿದ್ದು ಹೋಗುತ್ತಾನೆ. ಇದರಿಂದ ಅನೇಕರು ದಾರಿಯಿಲ್ಲದೆ ಜನರು ಹತವಾದ್ದರಿಂದ ಮಿಕ್ಕವರು ಕೆರೆಯೊಳಗೆ ನೀರು ಕಡಿಮೆಯಾಗಿರುವುದನ್ನು ಕಂಡು ಆ ನೀರಿನೊಳಗೆ ಬಿದ್ದು ಹೋಗುತ್ತಾರೆ. ಹೀಗಿರುವಾಗ ಕೋಟೆಯೊಳಗೆ ಜನರು ಅಡ್ಡಕಟ್ಟಿಕೊಂಡು ಬಂದರು. ಮುಂದೆ ಫೌಜು ಅವರನ್ನು ಬಂದಿಸಿದರು. ಮುಂದೆ ಕಿಲ್ಲೇದಾರ್, ನ್ಯಾಮತ್‌ಖಾನ್, ಅಮೀರರು ಹಾಗೂ ಪತ್ತೆಖಾನ್ ಪತ್ತೆಮಹಮ್ಮದ್ ಅವರು ಕೆರೆಯ ಏರಿಯ ಪಡುವಲ ಕಿಸೆಯಲ್ಲಿ ಪೋತುರಾಜನ ಉಪ್ಪಾರಹಳ್ಳಿ ಮಾರ್ಗದ ಬಳಿಯಲ್ಲಿ ನಿಂತಿರುವ ಅವರನ್ನು ಏನು ಮಾಡಬೇಕೆಂದು ಈ ಗಾಜಿಖಾನ್ ಮತ್ತು ಮದ್ದುಖಾನ್ ಅವರನ್ನು ಕೇಳಲಾಗಿ ಅವರ ಕೈಕಾಲುಗಳನ್ನು ಕಂಡಿಸಿ ಎಂದು ಹೇಳಿ ಹಾಗೇ ನ್ಯಾಮತ್‌ಖಾನ್ ಹಾಗೂ ಪತ್ತೇಖಾನ್‌ರು ಅದೇ ರೀತಿ ಸಿಕ್ಕಿದವರನ್ನು ಕೈಕಾಲುಗಳನ್ನು ಮುರಿಸಿದರು. ಈ ಘಟನೆಯನ್ನು ಕಂಡ ರುದ್ರಪ್ಪನು ಆತನ ಸಂಗಡ ಕೆಲವು ಜನರನ್ನು ಕರೆದುಕೊಂಡು ಓಡಿ ಹೋದನು.

ತರುವಾಯ ಶ್ರೀ ರಂಗಪಟ್ಟಣದವರು ರಾಜಿ ಮಾಡಿಕೊಳ್ಳಲಾಗಿ ಪೇಶ್ವೆಯವರ ಫೌಜು ಮತ್ತು ನಿಜಾಮರ ಫೌಜು ತಮ್ಮ-ತಮ್ಮ ಜಾಗಗಳಿಗೆ ಸೇರಿದರು. ಇದರಿಂದ ಅನಂತಪುರದಲ್ಲಿ ಇದ್ದ ನ್ಯಾಮತ್‌ಖಾನ್ ಮತ್ತು ಪತ್ತೆಖಾನ್ ಅವರನ್ನು ರಾಜಿ ಮಾಡಿದರು. ಮುಂದೆ ಟಿಪ್ಪು ಸುಲ್ತಾನನು ರಾಜ್ಯವನ್ನು ನೋಡಿಕೊಳ್ಳುತ್ತಿರುವಾಗ ಇಂಗ್ಲಿಷಿನವರ ಫೌಜು ಶ್ರೀರಂಗಪಟ್ಟಣವನ್ನು ಮುತ್ತಿಗೆ ಹಾಕಿದರು. ಹೈದರಾಬಾದ್ ನಿಜಾಮ್ ಅಲಿಖಾನ್ ಇಂಗ್ಲಿಷಿನವರನ್ನೇ ಸಹಾಯವಾಗಿ ತೆಗೆದುಕೊಂಡು ಟಿಪ್ಪುವಿನ ದುರ್ನಡತೆ ಹೆಚ್ಚಾಗಿದ್ದರಿಂದ ಅಮೀರರು ಮತ್ತು ಮೀರ್ ಅಬ್ದುಲ್ ಅವರು ಶ್ರೀರಂಗಪಟ್ಟಣವನ್ನು ಮುತ್ತಿಗೆ ಹಾಕಿ ಎರಡು ತಿಂಗಳ ನಂತರ ಟಿಪ್ಪು ಸುಲ್ತಾನನು ಮೃತನಾದ್ದರಿಂದ ಕ್ರಿ.ಶ.೧೭೯೯ರಲ್ಲಿ ಪೂರ್ಣಯ್ಯ ದಿವಾನರಾಗಿ ಬಹದ್ದೂರರವರ ಅನುಮತಿ ಪ್ರಕಾರ ಚಾಮರಾಜ ಒಡೆಯರ್ ಮತ್ತು ಕೃಷ್ಣರಾಜ ಒಡೆಯರು ಅವರಿಗೆ ಪಟ್ಟಾಭಿಷೇಕವಾಯಿತು.

ಸಿದ್ದಪ್ಪನಾಯಕನು ಕಾಳಹಸ್ತಿ ತಾಲೂಕಿನಲ್ಲಿ ಇರುವ ಪಾಪನಾಯಕನಹಳ್ಳಿಯಿಂದ ಕೆಲವು ಜನರ ಸಂಗಡ ಮಾತನಾಡಿ ಅಲ್ಲಿಂದ ಬುಕ್ಕಪಟ್ಟಣದ ಹೊಸಕೆರೆಗೆ ಬಂದನು. ಈ ವಿಷಯ ತಿಳಿದ ಜನರು ನಮ್ಮ ದೊರೆ ಬಂದನೆಂದು ತಿಳಿದು ಖುಷಿಯಾದರು. ಸಿದ್ದಪ್ಪನಾಯಕನನ್ನು ನಿಡುಮಾಮಿಡಿ ಸ್ವಾಮಿಗಳವರ ಮಠದೊಳಗೆ ಕರೆಸಿಕೊಂಡರು. ಈ ಸಭೆಯ ಮುಂದೆ ಸಿದ್ದಪ್ಪನಾಯಕನು ನಡೆದ ಎಲ್ಲ ವಿಷಯಗಳನ್ನು ಪ್ರಸ್ತಾಪಿಸಿದ. ತರುವಾಯ ಸಿದ್ದಪ್ಪನಾಯಕನು ಅನಂತಪುರದಲ್ಲಿ ಸವಾರಿ ಮಾಡುತ್ತಿರುವಾಗ ಕೋಟೆ ಮೇಲಿಂದ ತೋಪುಗಳು ಸುರಿದವು ಈ ಘಟನೆಯನ್ನು ಕಂಡ ಸಿದ್ದಪ್ಪನಾಯಕನು ಭಯದಿಂದ ಹಿಂದಕ್ಕೆ ಓಡಿದನು. ಈ ಸಮಯದಲ್ಲಿ ಶ್ರೀರಂಗಪಟ್ಟಣದ ಸೆರೆಮನೆಯಿಂದ ಬಿಡುಗಡೆಯಾಗಿದ್ದ ಸಿದ್ದಪ್ಪನಾಯಕನ ಅಣ್ಣನಾದ ವಸಂತ ರಾಯನು ಮುಂತಾದ ಜನರ ಸಂಗಡ ರಾಪ್ತಾಡಕ್ಕೆ ಬಂದು ಸೇರಿದರು. ಮುಂದೆ ವಸಂತರಾಯರು ಸಿದ್ದಪ್ಪನಾಯಕನನ್ನು ಆಲಿಂಗನವ ಮಾಡಿಕೊಂಡು ಖುಷಿಪಟ್ಟರು. ಮುಂದೆ ತಹಶೀಲ್ದಾರ್ ಪಟ್ಟಕ್ಕೆ ಹೋಗಿ ಟಿಪ್ಪು ಸುಲ್ತಾನರು ನಮಗೆ ಎರಡು ತಿಂಗಳ ಸಂಬಳಗಳನ್ನು ನೀಡಿಲ್ಲವೆಂದು ಸಿದ್ದಪ್ಪನಾಯಕನಿಗೆ ದೂರು ನೀಡಿದರು. ಈ ವಿಷಯವಾಗಿ ಸಿದ್ದಪ್ಪನಾಯಕನು ಮೇಗಿನಹಳ್ಳಿ ಸುಬೇದಾರರು, ಲಾಡಖಾನ್ ಸಾಹೇಬರನ್ನು ನಾಗಲಿಂಗಪ್ಪನ ಮಗನಾದ ಕೋಟಪ್ಪನನ್ನು ಅನಂತಪುರದೊಳಗೆ ಕಳುಹಿಸಿ ಇದರಿಂದ ಎರಡು ತಿಂಗಳದ ಸಂಬಳವನ್ನು ಕೊಡಲು ರಿಸಾಲ್‌ದಾರ ಹಿರೇ ಮನುಷ್ಯರ ಸಮ್ಮುಖದಲ್ಲಿ ಚಾಕರಿಗೆ ಇರಿಸಿಕೊಳ್ಳುತ್ತ ಇದರಿಂದ ನಿಮಗೆ ಸಂಬಳ ಬಹು ವಿಧಗಳ ಸಮಾನವಾಗಿ ನೀಡುವುದಾಗಿ ಹೇಳಿದರು.

ಹೀಗೆ ಉಭಯ ಕುಶಲೋಪರಿಯಿಂದ ತಾಂಬೂಲವನ್ನು ಅದಲು-ಬದಲು ಮಾಡಿಕೊಂಡು ಬಸವನಕಟ್ಟೆಯಿಂದ ನಿರ್ಗಮಿಸಿದರು. ತರುವಾಯ ಈ ಕೋಟಪ್ಪ ಲಾಡಖಾನ್ ಖಾಜೀ

ಸಾಹೇಬರು ಈ ವರ್ತಮಾನವನ್ನು ದೊರೆಗಳಿಗೆ ಹೇಳಿಕಳುಹಿಸಲಾಗಿ ಜನರನ್ನು ಕರೆದುಕೊಂಡು ಕಲ್ಯಾಣಮ್ಮನವರ ಬಾವಿ ಬಳಿಗೆ ಬಂದನು. ಇದರ ನಂತರ ಸಿದ್ದಪ್ಪನಾಯಕನು ಇದುವರೆಗೆ ಮದುವೆಯ ಕಾರ್ಯವನ್ನು ಮಾಡಿಕೊಂಡಿರುವುದಿಲ್ಲ, ಹೀಗಾಗಿ ಈತನು ಕ್ರಿ.ಶ.೧೭೫೯ರ ಸುಮಾರಿಗೆ ತಮ್ಮ ಸಂಬಂಧಿಕರಾದ ಕೂಸಪ್ಪನ ಮಗಳು ನೀಲಮ್ಮನವರನ್ನು ಮದುವೆಯಾದನು. ಈ ಮದುವೆ ಕಾರ್ಯ ಮುಗಿದ ಮೇಲೆ ಶ್ರೀರಂಗಪಟ್ಟಣಕ್ಕೆ ತೆರಳಿದನು. ಈ ಭಾಗದಲ್ಲಿ ಮುಸ್ಲಿಂ ಅರಸರಾದ ನಿಜಾಮಲ್ಲಿಖಾನ್, ಬಾಬತ್ತು ಅರ್ಮಿನ್ ಸಾಹೇಬರು ಪ್ರಬಲರಾಗಿದ್ದರು. ಇವರು ಗುತ್ತಿಯಲ್ಲಿ ಠಾಣೆ ಹಾಕಿ ಬಂದೋಬಸ್ತು ಮಾಡಿಕೊಂಡಿದ್ದರು. ಅನಂತಪುರದಿಂದ ಸಿದ್ದಪ್ಪನಾಯಕರನ್ನು ಭೇಟಿಯಾಗಲು ಕರೆಸಿ ಅವರ ಸಂಗಡ ನಿಮ್ಮ ಧಣಿಯಾದ ಪೂರ್ಣಯ್ಯ ಅವರ ಬಹದ್ದೂರರ ಹುಕುಂ ಆಗಿದೆ ಎಂದು ಹೇಳಿದರು.

ತರುವಾಯ ಮೀರ್ ಅಲಂ ತಾಲೂಕಿನಿಂದ ನಾಗನಾಥರಾಯರು ಹವಲ್ ಕೊಟ್ಟು ಕಳುಹಿಸಲಾಗಿ ಮತ್ತು ಅಮಿನ್ ಸಾಹೇಬರನ್ನು ಸಿದ್ದಪ್ಪನಾಯಕನಿಗೆ ನಮೀಸಿದ ಪ್ರಕಾರವೇ ಸಿದ್ದರಾಮಪುರ ಗ್ರಾಮವು ೧೦೦ಕ್ಕೆ ೧೦ ಪ್ರಕಾರ ೧೦ ತಿಂಗಳವರೆಗೂ ನಡೆಸುತ್ತಿದ್ದರು. ನಂತರ ಮನ್ರೋ ಸಾಹೇಬರು ಕುಂಪಿನಿ ಪ್ರಾಂತ್ಯದಿಂದ ಅನಂತಪುರ ಸೀಮೆ ಬಂದೋಬಸ್ತು ಮಾಡುವುದಕೋಸ್ಕರ ನರಸಿಂಗರಾಯರವರನ್ನು ಕಳುಹಿಸಿದರು. ಈ ಪ್ರಕಾರ ಕರ್ನಲ್ ಸಾಹೇಬರು ಮಧುಗಿರಿ ಸೀಮೆಯ ತಿರುಮಲಯ್ಯ ಆಮಲ್‌ದಾರರಾಗಿ ಶಿವರಾಮಯ್ಯ ಶಿರಸ್ತೇದಾರನಾಗಿ ನೇಮಿಸಲ್ಪಟ್ಟರು.

ತಿರುಮಲಯ್ಯ ಮತ್ತು ಶಿವರಾಮಯ್ಯ ಲೆಕ್ಕಪತ್ರಗಳ ವಿಚಾರಣೆ ಮಾಡುತ್ತಿರುವಾಗ, ಧರ್ಮವರಂ ಸೇರಿ ತಾಲೂಕು ಅಮಲ್‌ದಾರರು ಶಿರಸ್ತೇದಾರರು ಗ್ರಾಮಸ್ಥರನ್ನು ಜಮಾಬಂದಿ ಚೊಕ್ಕಾಯಿಸುತ್ತಿರುವಾಗ ಸಿದ್ದಪ್ಪನಾಯಕನು ಕರ್ನಲ್ ಮನ್ರೋ ಸಾಹೇಬರನ್ನು ಭೇಟಿ ಮಾಡಿ ತನ್ನ ಪೂರ್ವೇತ್ತರ ವಿಷಯಗಳನ್ನು ಪ್ರಸ್ತಾಪಿಸಿದರು. ಈ ಬಿನ್ನಹದಿಂದ ಮನ್ರೋಸಾಹೇಬರು ಗ್ರಾಮದಿಂದ ರುಸ್ತು-ಜಪ್ತಿ ಮಾಡಿ ರಾಜಶ್ರೀ ಮಂಡ್ರೋಲ್ ಸಾಹೇಬರು ಹುಕುಂ ಮಾಡಿ ಸನ್ನದು ಸಹ ಬರೆಸಿಕೊಟ್ಟರು. ಸಿದ್ದರಾಮಪ್ಪನಾಯಕನು ಮುಂದೆ ಕ್ರಿ.ಶ.೧೮೦೧ರಲ್ಲಿ ಸಿದ್ದರಾಮಪುರ ದಲ್ಲಿ ಮೃತನಾದನು. ಈತನ ಅಣ್ಣನ ಮಗನಾದ ವಸಂತರಾಯನು ಇಪ್ಪತ್ತು ವರ್ಷ ವಯಸ್ಸು ಆಗಿರುವಾಗ ಕರ್ನಲ್ ಮನ್ರೋ ಸಾಹೇಬರು ಕಡಪದಿಂದ ಆಳುತ್ತಿದ್ದರು. ಇತ್ತ ಧರ್ಮವರದಲ್ಲಿ ಶರಣಪ್ಪ ಹುಜೂರು ಮುನುಷಿ ಕೆಲಸದೊಳಗೆ ಇದ್ದರು.

ಸಿದ್ದರಾಮಪುರದೊಳಗೆ ಅಮ್ಮನವರ ಜನ ಇರಲು ಸಿದ್ದರಾಮಪ್ಪ ನಾಯಕನ ಎರಡನೇ ಹೆಂಡತಿಯಾದ ಪೊನ್ನಮ್ಮ ಇವರ ಮಗನಾದ ಚಿಕ್ಕರಾಮಪ್ಪನಾಯಕರ ಹೆಂಡತಿ ಚನ್ನಮ್ಮನವರು

ಈಗಲೂ ಕುರುಗೋಡಿನೊಳಗೆ ಇದ್ದವರು. ಅಮ್ಮನವರು ಸಂಕ್ರಮ್ಮ ಮತ್ತು ನೀಲಮ್ಮ ಇವರು ಬಸಪ್ಪನಾಯಕನ ಹೆಂಡತಿ ದೊಡ್ಡ ಚನ್ನಮ್ಮನವರು ಮತ್ತು ಚಿಕ್ಕಚನ್ನಮ್ಮನವರು ಇನ್ನೂ ದೊಡ್ಡ ಮನುಷ್ಯರಾದವರು ವಕೀಲು ಶೀನಪ್ಪ ಬಾಳಪ್ಪ ರಾಘವಪ್ಪನವರು ಅಪ್ಪಣ್ಣ ರಾಮಣ್ಣನವರ ನರಸಪ್ಪ ಇವರ ಗುರುಗಳಾದ ಬಸವಲಿಂಗ ಸ್ವಾಮಿಗಳವರು ಆಲಮೂರ ಕರಿಬಸಪ್ಪ ಬೀರಿ ದೊಡ್ಡವೀರಪ್ಪ ಇವರು ಮುತಾಂದ ಯಾವಜ್ಜನವು ಈ ಪುತ್ರಶೋಕದಿಂದ ವ್ಯಸನ ಹೊಂದುತ್ತಾ ಇದ್ದ ಚನ್ನಮ್ಮನವರನ್ನು ನೋಡಿ ದೈವಾಧೀನದಿಂದ ಆಗಬೇಕಾದ ಕೆಲಸಗಳು ಆದುದಕ್ಕೆ ಇಷ್ಟು ದಿವಸಗಳು ವ್ಯಸನ ಮಾಡಿ ತೀರಿದರು.

ನೀವು ಧೈರ್ಯದಿಂದ ಮುಂದೆ ಆಗಬೇಕಾದ ಕೆಲಸಗಳು ಬಹಳ ಇರುತ್ತದೆ ಆದುದರಿಂದ ವರ್ತಮಾನ ಯಾವತ್ತು ಕರ್ನಲ್ ಸಾಹೇಬರಿಗೆ ಬಿನ್ನಹ ಮಾಡಿಕೊಂಡು ಅವರ ಅಪ್ಪಣೆ ಪ್ರಕಾರ ನಡೆಯಬೇಕೆಂದು ಬಹುವಿಧಗಳಿಂದ ಬೋಧಿಸಿದರು. ಆನಂತರ ನೀಲವ್ವ ಸಂಕ್ರವ್ವನವರು ಈ ಚನ್ನಮ್ಮನವರ ಸಂಗಡ ಒಳ್ಳೆಯ ಕೆಲಸವಾದರೂ ಸರಿ, ಕೆಟ್ಟ ಕೆಲಸವಾದರೂ ಸರಿ ನಿಮ್ಮ ಮನಸ್ಸಿಗೆ ಸಮಾಧಾನ ಮಾಡಿಕೊಳ್ಳಿ ಎಂದು ಹೇಳಲಾಗಿತ್ತು. ಅಷ್ಟರಲ್ಲಿ ಬಾಳ ಶೀನಪ್ಪ ಮುತಾಂದ ವೀರಪ್ಪನವರು ಪ್ರಯಾಣ ಮಾಡಿ ಕಳುಹಿಸಲಾಗಿ ಅವರು ಮನ್ರೋ ಸಾಹೇಬರ ಹತ್ತಿರ ಬಿನ್ನಹ ಮಾಡಿದರು. ಈ ಸಂಸ್ಥಾನವನ್ನು ನಡೆಸಿಕೊಂಡು ಹೋಗುವುದಕ್ಕೆ ಯಾರೆಂದು ಹೇಳಲಾಗಿದ್ದಕ್ಕೆ ಚನ್ನಮ್ಮನವರು ಮತ್ತು ಮನ್ರೋ ಸಾಹೇಬರು ಸೂಚಿಸಿದ್ದು ವಿಜಾಪುರ ಜಿಲ್ಲೆಯ ಬಾಗೇವಾಡಿ ತಾಲೂಕಿನ ಪ್ರದೇಶವಾದ ಮುತ್ತಗಿ ಇನ್ನೊಂದು ಭಾಗವಾದ ವಡವಡಗಿ ಗ್ರಾಮದ ಮೂಲಪುರುಷನಾದ ಲಕ್ಕಿನಾಯಕನ ಮಕ್ಕಳಾದ ಬಾಲದ ಹನುಮಪ್ಪ ನಾಯಕ ಮತ್ತು ಬಳಗ ನಾಯಕ ಸಹೋದರರು. ಈ ಸಹೋದರರಲ್ಲಿ ಬಾಲದ ಹನುಮಪ್ಪನಾಯಕನು ಅನಂತಪುರದ ಪ್ರಾಂತ್ಯಕ್ಕೆ ಬಂದರು.

ನಾನು ನೋಡಿದ್ದು ಯಥಾರ್ಥವೆಂದು ಹೇಳಿ ಅವರ ಸಂಗಡ ಆಲಮೂರು ಕರಿಬಸಪ್ಪ ಬುಕ್ಕಪಟ್ಟಣ ಮಠದ ಶಿವಲಿಂಗದೇವರು ನಗರ ತಾಲೂಕು ಚಿಕ್ಕರಾಮಣ್ಣ ಗಿಡ್ಡಮಲ್ಲಪ್ಪ ಕೊಟ್ಟಿಗೆ ಬಸವಪ್ಪ ದೊಡ್ಡ ತೋವಪ್ಪ ಇವರುಗಳನ್ನು ಕರೆದುಕೊಂಡು ಬಂದರು. ಆ ಬಳಗನಾಯಕನ ಸಂತತಿಯೊಳಗೆ ಸಿದ್ದರಾಮಪ್ಪ ಎಂಬ ಹೆಸರಿನ ಹುಡುಗನ ನಿಷ್ಕರ್ಷ ಮಾಡಿ ಕರಕೊಂಡು ಬಂದರು. ಈ ಹುಡುಗನು ಪಟ್ಟದ ದೊರೆಯಾದ ವಸಂತರಾಯನ ಹೆಂಡತಿ ಕಲ್ಯಾಣಮ್ಮನ ಮಡಲಿನೊಳಗೆ ಹಾಕಿದುದರಿಂದ ಸಂರಕ್ಷಣೆ ಮಾಡುತ್ತಾ ಇರುವಾಗ ಕೆಲವು ದುರ್ಜನರು ನೀಲಮ್ಮನ ಸಂಗಡ ಚಿಕ್ಕವನ ತಂದು ಚನ್ನಮ್ಮನವರು ಸಾಕುತ್ತ ಇದ್ದರು. ಮುಂದೆ ನಿನ್ನ ಪ್ರಪಂಚವೇನು ನಡೆಸುವ ಯೋಚನೆ ಕಾಣಿಸಲಿಲ್ಲಾ ಆ ಚನ್ನಮ್ಮ ಹೇಳಿದ ಹಾಗೆ ಇರಲು

ಅತಂತ್ರದವಳಲ್ಲ, ಮುಂದೆ ಅನಂತಪುರಕ್ಕೆ ವಕೀಲರೊಂದಿಗೆ ಬಂದು ಸಂಬಳ ತೆಗೆದುಕೊಂಡು ಹೋಗುತ್ತಿರುವಾಗ ನೀಲಮ್ಮನವರು ತಮ್ಮನ್ನು ಅವರ ಪಕ್ಷದಾದ ಜನರು ಬಂದು ಅಡ್ಡಗಟ್ಟಲಾಗಿ ಸಂಬಳವು ಕಛೇರಿಯೊಳಗೆ ಬಿದ್ದಿತು.

ಮುಂದೆ ಚೆನ್ನಮ್ಮನ ಕಡೆ ವಕೀಲಗಳು ನೀಲಮ್ಮನವರ ಹುಜೂರಿಗೆ ಹೋಗಿ ಎರಡು ಮೂರು ತಿಂಗಳು ಪಂಚಾಯಿತಿಯಾಗಿ ಹುಜೂರೊಳಗೆ ನಿಷ್ಕರ್ಷೆಯಾಗಿ ತಾಲೂಕು ಮಜಕೂರ ತಹಸೀಲ್‌ದಾರರೂ ನರಸಿಂಹರಾಯರವರ ಎದುರಿಗೆ ತೀರ್ಪಾಗಿತ್ತು. ಚನ್ನಮ್ಮನವರ ನಗರದೊಳಗೆ ಕಳ್ಳರು ಹೊಕ್ಕು ಸೊತ್ತುಗಳೆಲ್ಲ ಹೊಂದಿದರಿಂದ ನೀಲಮ್ಮ ನವರಿಗೂ ಕಲಹವಾಯಿತು. ಇದರಿಂದ ಯಾವುದನ್ನು ಪರಿಗಣಿಸದೆ ಕರ್ನಲ್ ಮನ್ರೋ ಅವರು ವಕೀಲಗಳನ್ನು ಕಳುಹಿಸಿ ಸಿದ್ದರಾಮಪುರ ದಲ್ಲಿ ಯಾವುದೇ ರಾಜಿಯಿಲ್ಲವೆಂದು ಹೇಳಲಾಗಿತ್ತು.

ಕರ್ನಲ್ ಮನ್ರೋ ಸಾಹೇಬರು ವಿಲಾಯಿತಿಗೆ ಹೋದ ತರುವಾಯ ಕೈವಾರ ಸಾಹೇಬರು ಬಂದರು. ಇವರ ನಂತರ ಗೇಹಗನ್ ಸಾಹೇಬರು ಬಂದರು(ಕಲೆಕ್ಟರ್), ಚನ್ನಮ್ಮನವರು ಸಾಕಿಕೊಂಡ ಸಿದ್ದರಾಮಪ್ಪ ನಾಯಕರನ್ನು ಅನಂತಪುರಕ್ಕೆ ಕರಕೊಂಡು ಬಂದು ಹಜರತ್ ಕರ್ನಲ್ ಸಾಹೇಬರಿಗೆ ಭೇಟಿ ಮಾಡಿಸಿ ಕರ್ನಲ್ ಸಾಹೇಬರ ಅಪ್ಪಣೆಯ ನಂತರ ಗುತ್ತಿಯಲ್ಲಿ ಭೇಟಿಯಾದದ್ದನ್ನು ಈ ಯಾವುದೇ ವರ್ತಮಾನವನ್ನು ತಿಳಿದ ನಂತರ ಅಪ್ಪಣೆ ಕೊಟ್ಟರು. ಅನಂತಪುರದೊಳಗೆ ಐದಾರು ದಿವಸಗಳು ಇದ್ದು ಧಣಿಗಳ ಅಪ್ಪಣೆ ತೆಗೆದುಕೊಂಡು ಗುತ್ತಿ ತಾಲೂಕು ಕಾಗಲ್ಲು ಎಂಬ ಗ್ರಾಮದೊಳಗೆ ಪೂರ್ವದಿಂದ ಪರಂಪರೆಯಾಗಿ ಬಂಧುತ್ವ ಉಂಟಾದ ಜಗ್ಗುಲ ಸಂಕ್ರಪ್ಪನ ಮಗಳಾದ ಐದು ವರುಷಗಳ ವಯಸ್ಸುಯಿದ್ದ ಲಿಂಗವ್ವ ಎಂಬ ಚಿಕ್ಕ ಹುಡುಗಿಯನ್ನು ತಂದು ಸಿದ್ದರಾಮಪ್ಪನವರಿಗೆ ಹೆಂಡತಿಯೆಂದು ನಿಶ್ಚಯಿಸಿದರು. ಹೀಗಾಗಿ ಚಿಕ್ಕ ಹುಡುಗಿಯನ್ನು ಕುಲಾಚಾರದ ನೆಲೆಯಲ್ಲಿ ಮರ್ಯಾದೆ ಪ್ರಕಾರ ಚಿಕ್ಕವಳನ್ನು ಕರಕೊಂಡು ಬಂದು ರಾಜಗೃಹದೊಳಗೆ ಇರಿಸಿಕೊಂಡು ಸಂರಕ್ಷಣೆ ಮಾಡುತ್ತಿದ್ದರು. ಕ್ರಿ. ಶ. ೧೮೧೧ ರಲ್ಲಿ ಹಂಡೆಯವರ ಮರ್ಯಾದೆಗಳು ಇವರ ಜಾತಿಯೊಳಗೆ ಶಿವಭಕ್ತರು ಲಿಂಗವಂತರು ಇವರಿಗೆ ಊರದೈವ ಇಷ್ಟದೈವ ವಿಜಾಪುರ ಸೀಮೆಯೊಳಗೆ ಇದ್ದ ಸೊನ್ನಲಾಪುರದ ಸಿದ್ದರಾಮೇಶ್ವರನಾಗಲಿ ಇತರ ದೇವತೆಗಳನ್ನು ಶಿವಪೂಜೆ ಮಾಡದೆ ಗಂಗಾಪಾನ ಸಹ ಮಾಡುವುದು ಇಲ್ಲ. ಮಧುರ ಆಹಾರಗಳ ಸೇವನೆ ಹೊರ್ತು ಮದ್ಯಮಾಂಸಾದಿಗಳು ಸೇವನೆಯಿಲ್ಲ. ಮೈನೆರೆದ ಹುಡುಗಿಯರನ್ನು ಮದುವೆ ಮಾಡಿಕೊಳ್ಳರು. ಒಂಬತ್ತು ವರುಷದೊಳಗೆ ಹೆಣ್ಣುಗಳು ಇದ್ದರೆ ಪ್ರಸ್ತ ಮಾಡಿಕೊಳ್ಳವರು. ಕಾಲ ಪ್ರಮಾಣದಿಂದ ಗಂಡ ಸತ್ತರೆ ಸಮಾಧಿ ವಿನಹ ದಹನ ಮಾಡರು. ಈ ಪ್ರಕಾರ ಇವರ ವಂಶಾವಳಿ ಸಂಪೂರ್ಣ ಮಂಗಳ ಮಹಾ ಶ್ರೀ ಶ್ರೀ ಎಂದು ಮುಕ್ತಾಯಗೊಳ್ಳುತ್ತದೆ.

ಒಟ್ಟಾರೆಯಾಗಿ ಈ ಬುಕ್ಕರಾಯ ಚರಿತ್ರೆಯು 'ವಂಶಾವಳಿ' ಆಧಾರಿತವಾದದ್ದು. ಹೆಸರೇ ಸೂಚಿಸುವಂತೆ ಬುಕ್ಕರಾಯ ಚರಿತ್ರೆಯು ಬುಕ್ಕಪಟ್ಟಣವನ್ನು ಆಳಿದ ರಾಜರ ಚರಿತ್ರೆಯಾಗಿದೆ. ಈ ಬುಕ್ಕಪಟ್ಟಣವು ಇಂದಿನ ಆಂಧ್ರಪ್ರದೇಶದ ಅನಂತಪುರ. ಈ ಅನಂತಪುರವು ಕೈಫಿಯತ್ತಿನಲ್ಲಿ ಬರುವ ಹಂಡೆ ಅರಸರ ವಂಶಾವಳಿ ಪ್ರಮುಖವಾದ ದಾಖಲೆಯಾಗಿದೆ. ಈ ಮನೆತದ ಪ್ರಮುಖ ಅರಸನಾದ ಹಂಡೆ ಬಾಲದ ಹನುಮಪ್ಪನಾಯಕ ಮತ್ತು ಆತನ ಮಕ್ಕಳು ಆಳ್ವಿಕೆ ನಡೆಸಿದ ವಿವರಗಳು ಈ ಕಾವ್ಯದ ವಸ್ತು.

ಪ್ರಸ್ತುತ ಬುಕ್ಕರಾಯ ಚರಿತ್ರೆಯಲ್ಲಿ ಅನೇಕ ಐತಿಹಾಸಿಕ ಘಟನೆಗಳು ದಾಖಲಾಗಿವೆ. ಆದರೆ ಇದರ ವಸ್ತುವೆಲ್ಲ ಕೈಫಿಯತ್ತಿನದು. ಇಲ್ಲಿ ಕಥೆ ನಿರೂಪಣೆಯು ಕ್ರಮಾನುಗಾತವಾಗಿ ಅರ್ಥ ಮಾಡಿಕೊಳ್ಳುವುದು ಕಷ್ಟಸಾಧ್ಯ. ಯಾಕೆಂದರೆ ಒಂದು ಸಂಧಿ ಆದ ನಂತರ ಮತ್ತೊಂದು ಸಂಧಿಗೆ ಪ್ರವೇಶಿಸಬೇಕಾದರೆ ಹಿಂದಿನ ಸಂಧಿಗೆ ಪೂರಕವೆಂಬಂತೆ ಕಥೆಯ ಜೋಡಣೆಯು ಕ್ರಮವಾಗಿ ಬರಬೇಕು. ಆದರೆ ಇಲ್ಲಿ ಆ ಕ್ರಿಯೆಯು ನಡೆದಿರುವುದಿಲ್ಲ. ಭಾಷೆ ಬಳಕೆಯಲ್ಲಿ ಅಪ್ಪಟ ದೇಶಿ ಶೈಲಿಯ ಆಡುಭಾಷೆಯಾಗಿದೆ. ಉರ್ದು ಇತರೆ ಭಾಷೆಗಳು ಉಲ್ಲೇಖಿತವಾಗಿವೆ. ವಸ್ತು ದೃಷ್ಟಿಯಿಂದ ಬುಕ್ಕರಾಯ ಚರಿತ್ರೆಯು ಜನಪದ ಕತೆಯ ಮೂಲಕ ಸಾಮಾಜಿಕ ಆಯಾಮವನ್ನು ಗುರುತಿಸುವುದು. ಹಂಡೆ ಅರಸರು ಸಂಸ್ಥಾನಿಕರಾಗಿ ಆಡಳಿತ ನಡೆಸಿದ ರೀತಿ, ಯುದ್ಧದ ಮಾದರಿಗಳು, ಧಾರ್ಮಿಕ ಕ್ರಿಯೆಗಳು, ವಾಸ್ತವ ಮತ್ತು ಭೂತಕಾಲದ ವಿವರಣೆಯು ಈ ಕಾವ್ಯದಲ್ಲಿ ಕಂಡು ಬರುವುದು.

**೩.೨. ಶಾಸನಗಳು**

ಹಂಡೆ ಅರಸರ ಕುರಿತು ಅಧ್ಯಯನಕ್ಕೆ ಉಪಲಬ್ಧವಿರುವ ಆಕರ ಸಾಮಗ್ರಿಗಳಲ್ಲಿ ಸಾಹಿತ್ಯೇತರ ಆಕರಗಳಲ್ಲಿ ಶಾಸನಗಳು ಪ್ರಮುಖವಾಗಿವೆ. ಇವರ ಇತಿಹಾಸದ ಮೇಲೆ ಬೆಳಕು ಚೆಲ್ಲುವಲ್ಲಿ ಶಾಸನಗಳೇ ಸಾಕ್ಷಿಯಾಗಿ ನಿಂತಿವೆ. ಶಾಸನಗಳ ಉಲ್ಲೇಖದೊಂದಿಗೆ ಅವುಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಅವುಗಳಲ್ಲಿ ಪ್ರಮುಖವಾದವು.

೧. ಬೇವಿನಹಳ್ಳಿ ....(ಚಿತ್ರದುರ್ಗ ಜಿಲ್ಲೆ) ಕ್ರಿ.ಶ.೯೬೮

೨. ಚರ್ದ .... (ನಲ್ಗೊಂಡ-ಆಂಧ್ರಪ್ರದೇಶ) ಕ್ರಿ.ಶ.೧೦೮೧

೩. ಕೊಲನುಪಾಕ .... (ಭುವನಗಿರಿ ತಾಲೂಕು-ಆಂಧ್ರಪ್ರದೇಶ) ಕ್ರಿ.ಶ.೧೦೮೧

೪. ಗಬ್ಬೂರು .... ಕ್ರಿ.ಶ.೨೧.೦೬.೧೦೮೪

೫. ಗಬ್ಬೂರು .... ಕ್ರಿ.ಶ.೧೬-೯-೧೦೮೪

೬. ನಗನೂರು.... (ಕರೀಂನಗರ-ಆಂಧ್ರಪ್ರದೇಶ) ಕ್ರಿ.ಶ.೧೧೧೨ ಡಿಸೆಂಬರ ೨೫

೭. ಮಂಗಳವೇಡೆ .... (ಸೊಲ್ಲಾಪುರ-ಮಹಾರಾಷ್ಟ್ರ) ಕ್ರಿ.ಶ.೧೧೧೩

೮. ಕೊಂಡಗೂಳಿ ....(ಜೇವರ್ಗಿ ತಾ.-ಗುಲಬರ್ಗಾ) ಕ್ರಿ.ಶ.೧೧೧೬

೯. ಸಯ್ಯದ ಚಿಂಚೋಳಿ ....(ಕಲ್ಬುರ್ಗಿ ತಾ.) ಕ್ರಿ.ಶ.೧೧೨೨

೧೦. ಹಂದರಕಿ ....(ಕಲಬುರ್ಗಿ ಶಾಸನಗಳು) ಕ್ರಿ.ಶ.೧೧೧೮

೧೧. ಹಂದರಕಿ ....(ಕಲಬುರ್ಗಿ ಶಾಸನಗಳು) ಕ್ರಿ.ಶ.೧೧೨೨

೧೨. ಹಗರಟಗಿ ....ಕ್ರಿ.ಶ.೧೧೨೬

೧೩. ಮುದನೂರು ....(ಸುರಪುರ ತಾ-ಯಾದಗಿರಿ) ಕ್ರಿ.ಶ.೧೧೯೪

೧೪. ನಾದ ....ಕ್ರಿ.ಶ.೨೫.೧೦.೧೧೩೪

೧೫. ಮನಗೋಳಿ ....ಕ್ರಿ.ಶ.೧-೧೧-೧೧೪೨

೧೬. ಬೇಲೂರು .... (ಮುದ್ದೇಬಿಹಾಳ ತಾ-ವಿಜಾಪುರ) ಕ್ರಿ.ಶ.೧೧೪೫

೧೭. ಮುತ್ತಗಿ .... (ಬ.ಬಾಗೇವಾಡಿ-ವಿಜಯಪುರ) ಕ್ರಿ.ಶ.೧೧೪೭

೧೮. ಮುತ್ತಗಿ .... ಕ್ರಿ.ಶ.೧೧೭೧

೧೯. ಹೆಮ್ಮಡಗಿ .... (ಸುರಪುರ ತಾ. ಯಾದಗಿರಿ) ಕ್ರಿ.ಶ.೧೧೮೨

೨೦. ಚಿಕ್ಕಸೂಗೂರು....(ರಾಯಚೂರು ಜಿಲ್ಲೆ) ಕ್ರಿ.ಶ.೧೧೯೪

೨೧. ಮಲ್ಲಟ....(ಮಾನ್ವಿ ತಾ-ರಾಯಚೂರು ಜಿಲ್ಲೆ) ಕ್ರಿ.ಶ.೧೧೯೬

೨೨. ಕವಿತಾಳ....(ಮಾನ್ವಿ ತಾ-ರಾಯಚೂರು ಜಿಲ್ಲೆ) ಕ್ರಿ.ಶ.೧೧೯೯

೨೩. ಕೂಡಲ ವೀರಗಲ್ಲು....(ಹಾನಗಲ್ ತಾ-ಹಾವೇರಿ ಜಿಲ್ಲೆ) ಕ್ರಿ.ಶ.೧೨ನೆಯ ಶತಮಾನ

೨೪. ಹಂಡರಗಲ್....(ಮುದ್ದೆಬಿಹಾಳ ತಾ.ಬಿಜಾಪೂರ) ೧೨ನೇ ಶತಮಾನ

೨೫. ಗೂಳಪಾಳ್ಯಂ....(ಗುತ್ತಿ-ಆಂಧ್ರ ಪ್ರದೇಶ) ಕ್ರಿ.ಶ.೧೪೦೭

೨೬. ಕಡದರಬೆಂಚಿ....(ಗುತ್ತಿ-ಆಂಧ್ರಪ್ರದೇಶ) ಕ್ರಿ.ಶ.೧೫೭೭

೨೭. ಮುದಗಲ್....(ರಾಯಚೂರು ಜಿಲ್ಲೆ) ಕ್ರಿ.ಶ.೧೫೬೮

೨೮. ಮುಕ್ಕುಂದೆ....(ಸಿಂಧನೂರು ತಾ.-ರಾಯಚೂರು ಜಿಲ್ಲೆ) ಕ್ರಿ.ಶ.೧೫೯೪

೨೯. ಮುಕ್ಕುಂದೆ ....(ಸಿಂಧನೂರು ತಾ.-ರಾಯಚೂರು ಜಿಲ್ಲೆ) ಕ್ರಿ.ಶ.೧೬೦೩

೩೦. ಅಂದ್ರಾಳು ....(ಬಳ್ಳಾರಿ ಜಿಲ್ಲೆ-ಬಳ್ಳಾರಿ ತಾಲೂಕು) ಕ್ರಿ.ಶ.೧೭-೨೦-೧೬೬೩

೩೧. ಕೂಡ್ಲಿ ಶೃಂಗೇರಿ ಮಠ ....(ಶಿವಮೊಗ್ಗ ಜಿಲ್ಲೆ) ಕ್ರಿ.ಶ.೧೬೬೭

೩೨. ಬಾದರ್ಲಿ.... (ಸಿಂಧನೂರು ತಾ-ರಾಯಚೂರು ಜಿಲ್ಲೆ) ಕ್ರಿ.ಶ.೧೬೬೭

೩೩. ಎಸ್.ಮಣೂರು....(ಸಿರುಗುಪ್ಪ ತಾ-ಬಳ್ಳಾರಿ ಜಿಲ್ಲೆ) ಕ್ರಿ.ಶ.೧೭ನೆಯ ಶತಮಾನ

೩೪. ಮರಳಿ....(ಲಿಂಗಸೂಗೂರು ತಾ-ರಾಯಚೂರು ಜಿಲ್ಲೆ) ಕ್ರಿ.ಶ.೧೭ನೆಯ ಶತಮಾನ

೩೫. ಚಲ್ಲಕೂಡಲೂರು....(ಸಿರುಗುಪ್ಪ ತಾ-ಬಳ್ಳಾರಿ ಜಿಲ್ಲೆ) ಕ್ರಿ.ಶ.೧೭ನೆಯ ಶತಮಾನ

೩೬. ಕಾಂಛನಗಡದ ಶಾಸನ....(ಸಿರುಗುಪ್ಪ ತಾ-ಬಳ್ಳಾರಿ ಜಿಲ್ಲೆ) ಕ್ರಿ.ಶ.೧೭೨೯

೩೭. ಕೂಡ್ಲಿ ಶೃಂಗೇರಿಮಠ....(ಶಿವಮೊಗ್ಗ ಜಿಲ್ಲೆ) ಕ್ರಿ.ಶ.೧೭೪೬

೩೮. ಯರ್ರಗುಡ್ಡದ ಶಾಸನ....(ಆಂಧ್ರಪ್ರದೇಶ) ಕ್ರಿ.ಶ.೧೭೮೦

೩೯. ಹಂಡೆ ಹಿರೇರಾಮಪ್ಪ ನಾಯಕನ ದಾನಪತ್ರ, ಬಳ್ಳಾರಿ....ಶಾ.ಶ.೧೪೪೮

೪೦. ಹಂಡೆ ಹಿರೇರಾಮಪ್ಪ ನಾಯಕನ ಎಮ್ಮಿಗನೂರು ದಾನಪತ್ರ....ಶಾ.ಶ.೧೬೪೭

೪೧. ಹಂಡೆ ಹಿರೇರಾಮಪ್ಪ ನಾಯಕನ ದಾನಪತ್ರ ಬಳ್ಳಾರಿ....ಶಾ.ಶ.೧೬೪೮

೪೨. ಹಂಡೆ ಹಿರೇರಾಮಪ್ಪ ನಾಯಕನ ಸಂಗನಕಲ್ಲು ದಾನಪತ್ರ....ಶಾ.ಶ.೧೬೪೮

೪೩. ಹಂಡೆ ರಾಣಿ ನೀಲಮ್ಮ ರಾಮಪ್ಪನಾಯಕರ ದಾನಪತ್ರ....ಶಾ.ಶ.೧೬೫೫

೪೪. ಹಂಡೆ ಹಿರೇರಾಮಪ್ಪನಾಯಕರ ದಾನಪತ್ರ..ಶಾ.ಶ.೧೬೬೯

೪೫. ಹಂಡೆ ರಾಮಪ್ಪನಾಯಕರ ಕುರುಗೋಡು ಭೂದಾನಪತ್ರ....ಶಾ.ಶ.೧೬೭೦

ಈ ಶಾಸನಗಳ ದಾನ ಪತ್ರಗಳಲ್ಲಿ ಹಂಡೆ ಅರಸರು ನೀಡಿದ ದಾನ-ದತ್ತಿಗಳ ವಿವರ, ಮಠ-ಮಾನ್ಯಗಳಿಗೆ ನೀಡಿದ ಭೂದಾನಗಳ ವಿವರ ಹಾಗೂ ಗುರುಪರಂಪರೆ ಮೇಲೆ ಅಚಲವಾದ ಗೌರವ ಹೊಂದಿದ ವಿವರಗಳು ಕಂಡುಬರುತ್ತವೆ. ಹೀಗೆ ಬಳ್ಳಾರಿಯ ನಾಯಕರ ಕಾಲದಲ್ಲಿ ಪರಮ ತಪಸ್ವಿ ಶ್ರೀಕಪ್ಪಿನ ಚನ್ನಬಸವ ಸ್ವಾಮಿಗಳವರು ರಾಜಪೂಜಿತರು ಜನಮಾನ್ಯರೂ

ಆಗಿದ್ದವರು. ಇವರನ್ನು ಕುರಿತು ಹಂಡೆ ವಂಶಸ್ಥ ಹನುಮಪ್ಪ ನಾಯಕನು ದಾನಪತ್ರದಲ್ಲಿ ಬಹಳ ಮಹತ್ವ ಪೂರ್ಣವಾಗಿ ಗುರುಪರಂಪರೆಯನ್ನು ಈ ಕೆಳಗಿನಂತೆ ಗೌರವಿಸಿದ್ದಾನೆ.

"ಶ್ರೀ ಮತ್ಪರಮ ಕೈಲಾಸ ಸಿಂಹಾಸನಾರೂಢ ಪರಶಿವ
ಲೀಲಾಕೃತ ಕಳೇವರಮಪ್ಪ ನಂದೀಶಾದಿ ರುದ್ರಪ್ರಮಥ
ಗಣಂಗಳ ಸಾಂಪ್ರದಾಯ ವಿಡಿದೊಪ್ಪುವ ತೋಂಟದ
ಸಿದ್ಧಲಿಂಗಾರ್ಯ ಕೃಪಾಪ್ರಸನ್ನರಾದ ತದ್ಗುರು
ಬೋಧಾಮೃತ ರಸವಾಂತು ಉಪದೇಶಿಸುವಲ್ಲಿ
ಶರಣ ಜನ ಹೃದಯಾನಂದ ಭಕ್ತಜನ ಮುಖ ಪಂಕಜ
ದಿವಾಕರ ಷಟುಸ್ಥಲಗಾನ ಪ್ರಭಾಪುಂಜ ರಂಜಿತ
ರಾಜರಾಜ ಶ್ರೀ ಹೇಮಕೂಟ ಸಿಂಹಾಸನಾಧ್ಯಕ್ಷರಾದ
ಶಿವಾನುಭವ ಚರಮೂರ್ತಿಗಳಾದಂಥ ಕಪ್ಪಿನ
ಚನ್ನಬಸವ ದೇವರವರ ಪಾದಪದ್ಮಂಗಳ ಸನ್ನಿಧಾನಕ್ಕೆ"[೯]

ಗುರುಪರಂಪರೆಯ ಮಾರ್ಗವನ್ನು ಭಕ್ತಿಯಿಂದ ಕಂಡವರು ಹಂಡೆ ಅರಸರು. ಇವರು ತೋಂಟದ ಸಿದ್ಧಲಿಂಗಾಚಾರ್ಯರ ವರ ಪ್ರಸನ್ನರ ಅನುಯಾಯಿಗಳಾದ ಶ್ರೀ ಹೇಮಕೂಟ ಸಿಂಹಾಸನಾಧ್ಯಕ್ಷರಾದ ಚನ್ನಬಸವದೇವರ ಮಾರ್ಗದರ್ಶನದಂತೆ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದವರು. ಈ ಅರಸರು ದಾನ, ದತ್ತಿ, ದಾಸೋಹ ಹಾಗೂ ಭೂದಾನ ನೀಡಿದ ವಿವರಗಳು ಕಂಡುಬರುತ್ತವೆ. ಈ ಎಲ್ಲಾ ದೃಷ್ಟಿಯಿಂದ ಹಂಡೆ ಅರಸುಮನೆತನದ ಚರಿತ್ರೆಯು ಅನುಪಮವಾದದ್ದು, ಅವರ ಕುರಿತ ಶಾಸನಗಳು ಈ ಕೆಳಗಿನಂತೆ ಉಲ್ಲೇಖಿಸಲಾಗಿದೆ.

**ಎಮ್ಮಿಗನೂರ ದಾನಪತ್ರ (ಕ್ರಿ.ಶ.೧೭೭೫)**

ಶ್ರೀಸಿದ್ಧರಾಮೇಶ್ವರ
ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ।
ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ॥

ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರುಷಂಗಳು ೧೬೪೭ನೇ ವಿಶ್ವಾವಸು ಸಂವತ್ಸರದ ವೈಶಾಖ ಶುದ್ಧ॥ ೧೦ ಯಲ್ಲು ಶ್ರೀ ಮತ್ಸಚ್ಚಿದಾನಂದ ಪರಿಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪಿಗಳಾಗದ ರಾಜಮಾನ್ಯ ರಾಜಶ್ರೀ ಮರಿ ಕೊಟ್ಟೂರ ಸ್ವಾಮಿಗಳವರಿಗೆ ಶ್ರೀ ಮನ್ಮಹಾರಾಜಾಧಿರಾಜ ಖಂಡೆಯ ಯಶವಂತ ಪರದಳ ವಿಭಾಡ ಅರಿರಾಯ ಮಾನಮರ್ದನ

ಸದಾ॥ ॥ ದೇವರ ವರಪ್ರಸನ್ನರಾದ ಶ್ರೀ ಖಂಡೆ ಹಿರೇ ರಾಮಪ್ಪ ನಾಯಕನವರು ಯಮ್ಮಿಗನೂರ ವಿರಕ್ತಮಠಕ್ಕೆ ಬರಸಿಕೊಟ್ಟ ಭೂದಾನ ಪತ್ರ[೨೦]

ನಮ್ಮ ಹಿರೇರಿಗೆ ಪುಣ್ಯವಾಗಬೇಕೆಂದು ನಿಮಗೆ ಮವುಜೆ ಮಜಕೂರ್ಲಿ ವಿರಕ್ತಮಠದ ಮಾನ್ಯ ರೇಗಡಿ ಕೈಲು ೯೦॥ ಯಂಟು ಮಾನದ ಹೊಲವನ್ನು ಶಿವಾರ್ಪಣವಾಗಿ ಧಾರೆಯರೆದು ಕೊಟ್ಟಿದ್ದೇನೆ. ನಿಮ್ಮ ಶಿಷ್ಯ ಪ್ರಶಿಷ್ಯ ಪಾರಂಪರ್ಯ ಆಚಂದ್ರಾರ್ಕವು ನಿರಂತರವಾಗಿ ಅನುಭವಿಸಿಕೊಂಡು ಸುಖದಲ್ಲಿಹುದೆಂದು ಬರಸಿಕೊಟ್ಟ ಭೂದಾನ ಪತ್ರವು (ಇದಕ್ಕೆ ಬಾಲಬೋಧ ಮೊಹರು ದಸ್ಕತ್ತು ಇರುತ್ತದೆ)

ಎಮ್ಮಿಗನೂರ ದಾನಪತ್ರದಲ್ಲಿ ಹಂಡೆ ಅರಸರ ಆರಾಧ್ಯ ದೇವರಾದ ಶ್ರೀ ಸಿದ್ಧರಾಮೇಶ್ವರನನ್ನು ನೆನೆದು ಕ್ರಿ.ಶ. ೧೭೫೮ರಲ್ಲಿ ಹಂಡೆ ಹಿರೇರಾಮಪ್ಪ ನಾಯಕನು ಎಮ್ಮಿಗನೂರ ವಿರಕ್ತ ಮಠಕ್ಕೆ ಭೂದಾನ ಮಾಡಿದ ವಿವರವನ್ನು ಈ ಶಾಸನವು ತಿಳಿಸುತ್ತದೆ. ಹಾಗೆಯೇ ತಮ್ಮ ಶಿಷ್ಯವರ್ಗಕ್ಕೂ ಆ ಸೂರ್ಯಚಂದ್ರ ಇರುವವರೆಗೂ ಈ ದಾನದ ಪುಣ್ಯಕಾರ್ಯ ನಡೆದುಕೊಂಡು ಹೋಗಲಿ ಎಂದು ಹಂಡೆ ಅರಸರಿಗೆ ಗುರುಗಳು ಆಶೀರ್ವದಿಸುತ್ತಿದ್ದರು. ರಾಜ್ಯಮಾನ್ಯ ರಾಜಶ್ರೀ ಮರಿಕೊಟ್ಟೂರ ಸ್ವಾಮಿಗಳ ಸಾಕ್ಷಿಯಾಗಿ ತಮ್ಮ ಹಿರಿಯರಿಗೆ ಪುಣ್ಯವಾಗಲೆಂದು ಭೂದಾನವನ್ನು ನೀಡಿದ ವಿವರವು ಕಂಡುಬರುತ್ತದೆ.

**ಹಂಡೆ ಹಿರೇರಾಮಪ್ಪ ನಾಯಕರ ದಾನಪತ್ರ (ಕ್ರಿ.ಶ.೧೭೨೬)**

ಶ್ರೀ ಶ್ರೀ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ।
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ॥ ಸ್ವಸ್ತಿ
ಶ್ರೀವಿಜಯಾಭ್ಯುದಯ ಶಾಲಿವಾಹನ ಶಖವರು
ಷಂಗಳು ೧೬೪೮ ಯಾ ಪರಾಭವನಾಮ ಸಂ ॥ ರದ
ಮಾಘ ಶು। ೧೦ ಯಲ್ಲು ಶ್ರೀಮತ್ಸಚ್ಚಿದಾನಂದ ನಿತ್ಯ ಪರಿ
ಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪಗಳಾದ ರಾಜ
ಮಾನ್ಯ ರಾಜ ಶ್ರೀ ಕೊಟ್ಟೂರು ಸ್ವಾಮಿಗಳವರಿಗೆ
ಶ್ರೀಮಾನ್ ಮಹಾ ರಾಜಾಧಿರಾಜ ಖಂಡೆಯ ಸಮಸ್ತ
ಪರದಳ ವಿಭಾಡ ಅರಿರಾಯ ಮಾನಮರ್ದನ ಸದಾ
ಶ್ರೀ ರವರ ವರಪ್ರಸನ್ನರಾದ ಹಂಡೆ
ಹಿರೆರಾಮಪ್ಪ ನಾಯಕರವರು ಬರಿಸಿಕೊಟ್ಟ ಅಮ್ಮ
ವ್ವನ ಮಠಸ್ವಾಗ್ನಿ ಲೋಲಗಳು ಧರ್ಮದಾನ ಪತ್ರ

ಸೂರ ಸುನ್ನಿಸಬಾಯಿಸನ್ನೈನ ಅಲ್ಲು ಅದ್ರೆ ನಾವು
ನಮ್ಮ ಹಿರಿಯರಿಗೆ ವಿಶೇಷ ಸುಕೃತವಾಗಬೇಕೆಂ
ದು ಪ ॥ ಬಳ್ಳಾರಿ ಸ್ಥಳದ ಅಂಮ್ಮನವರ ಮಠದಲ್ಲಿ
ದಾಸೋಹ ನಡಸುವದಕೆ ಅಪ್ಪಣೆ ಕೊಟ್ಟು ಯಿಧೆವೆ.
ನಿಂಮ್ಮ ಶಿಷ್ಯ ಪ್ರಶಿಷ್ಯ ಪರಂಪರ್ಯ ಆ ಚಂದ್ರಾರ್ಕ
ವು ನಿರಂತರವಾಗಿ ನಡಿಸಿಕೊಂಡು ಬಾಹ್ದು ಯಂ
ದು ಬರಿಸಿಕೊಟ್ಟ ದಾನಪತ್ರವು.[೨೧]

ಹಂಡೆ ಹಿರೇ ರಾಮಪ್ಪನಾಯಕನು ಕ್ರಿ.ಶ. ೧೭೬೮ರಲ್ಲಿ ಬಳ್ಳಾರಿಯ ಅಮ್ಮವ್ವನ ಮಠಕ್ಕೆ ಧಾರ್ಮಿಕ ಕಾರ್ಯಗಳು ಮತ್ತು ದಾಸೋಹದ ಕಾರ್ಯಗಳು ನಡೆಸುವುದಕ್ಕೆ ಅವಿರಳ ಪರಂಜ್ಯೋತಿ ಸ್ವರೂಪಿಗಳಾದ ರಾಜ ಮಾನ್ಯರಾಜ ಶ್ರೀ ಕೊಟ್ಟೂರು ಸ್ವಾಮಿಗಳ ಸಾಕ್ಷಿಯಾಗಿ ತಮ್ಮ ಹಿರಿಯರಿಗೆ ಸುಕೃತವಾಗಲೆಂದು ಮತ್ತು ದಾಸೋಹದ ಕಾರ್ಯ ನಿರಂತರವಾಗಿ ನಡೆಸಿಕೊಂಡು ಹೋಗುವುದಕ್ಕೆ ದಾನಪತ್ರದಲ್ಲಿ ಉಲ್ಲೇಖಿಸಲಾಗಿದೆ.

**ಸಂಗನಕಲ್ಲು ಜಹಗೀರು ದಾನಪತ್ರ (ಕ್ರಿ.ಶ.೧೭೨೬)**

೧೬೪೮ನೆಯ ಪರಿಭಾವ ಸಂವತ್ಸರದ ಮಾಘ ಶು॥ ೧೦ ಲ್ಲು ಶ್ರೀ ಮತ್ಸಚ್ಚಿದಾನಂದ ನಿತ್ಯ ಪರಿಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪಿಗಳಾದ ರಾಜಮಾನ್ಯ ರಾಜ ಶ್ರೀ ಮರಿ ಕೊಟ್ಟೂರಸ್ವಾಮಿಗಳವರಿಗೆ–

ಶ್ರೀ ಮನ್ಮಹಾರಾಜಾಧಿರಾಜ ಖಂಡೆಯಶವಂತ ಪರದಳ ವಿಭಾಡ ಹರಿರಾಯ ಮಾನಮರ್ದನ ಸದಾ ಶ್ರೀ ಸಿದ್ದರಾಮೇಶ್ವರ ದೇವರ ವರಪ್ರಸನ್ನರಾದ ರಾಜಶ್ರೀ ಹಂಡೆ ಹಿರೇರಾಮಪ್ಪ ನಾಯ್ಕರವರ ಬರಸಿಕೊಟ್ಟ ದಾಸೋಹ ದಾನ ಪತ್ರ–ನಾವು ನಮ್ಮ ಹಿರೇರಿಗೆ ವಿಶೇಷ ಸುಕೃತವಾಗಬೇಕೆಂದು ಸಾ॥ ಬಳ್ಳಾರಿಸ್ತಳದಲ್ಲಿ ವಿರಕ್ತ ಮಠದಲ್ಲಿ ದಾಸೋಹ ಧರ್ಮ ನಡಿಸುವುದಕ್ಕೆ ಶ್ರೀಶೈಲ ಪರ್ವತ ಪಾತಾಳಗಂಗೆಯಲ್ಲಿ ಸಂಕಲ್ಪ ಮಾಡಿ ಇದ್ದ ಪ್ರಕಾರ ಗ್ರಾಮ ಭೂಮಿ ಕೊಟ್ಟ ವಿವರವು–

ಗ ೭೫೦ ಬಳ್ಳಾರಿ ಮಾಗಾಣಿ ಪೈಕಿ ಸಂಗನಕಲ್ಲು ತೊಲಮಾವಡಿ ೨ ಚಾಗನೂರ ಮಂಬಗಿಲಮ ನೀರಾರಂಭ ತಾಡಾರಂಭ ಸಹಿತ ಸರ್ವಮಾನ್ಯವಾಗಿ ಕೊಟ್ಟು ಇದ್ದೇವು. ವರುಷ ಒಂದಕ್ಕೆ ನಾಣ್ಯ ನಿರ್ಣಯ ಮಾಡಿದ್ದು ಪುಳುಳೂರ ಅಯಿವತ್ತು ವರಹಗಳು ಮೂವತ್ತು ವರಹ ವಿರಕ್ತಮಠದ ಮಾನ್ಯ ಹೊಲಗಳು ತೋಟ ಹಾಗೂ ಮಠದ ಹೊಲ ದೇಖಿಲು

ತಪಸೀಲು- ನಡೆ ೨ ಮಾನ್ಯದ ಹೊಲಗಳು, ೧ ತೋಟದ ಹೊಲಗಳು, ೧ ತೋಟದ ಹೊಲ... ನಾಣ್ಯಗಳು ನಿರ್ಣಯ ಮಾಡಿದ್ದು, ನಡೆ ೩೦ ಗ ೨೨೦ ಗದ್ಯಾಣವೃತ್ತಿ ಯಿಾ ಪ್ರಕಾರ ಸಾವಿರ ವರಹದ ಸ್ವಾಸ್ತಿಯನು ದಾಸೋಹ ಧರ್ಮಕ್ಕೆ ಶಿವಾರ್ಪಣವಾಗಿ ಧಾರಯರದುಕೊಟ್ಟು ಯಿದ್ದೇವು ಇದು ಹೊರ್ತಾಗಿ ಬಳ್ಳಾರಿ ಕುರುಗೋಡು ತ್ಯಕ್ಕಲ ಕೋಟೆ ೩ ಮೂರು ಮಹಾಲು ಜಿಕಾಯ್ತಿಯಲ್ಲಿ ಪ್ರತಿ ಮಹಾಲಗೂ ಕಾಲ್ನಡೆ ೧ಕ್ಕೆ ದುಗ್ಗಾಣಿ ಪ್ರಕಾರವು ಮೇಲು ಕಾಸು ಮಾಡಿಕೊಟ್ಟು ಇದ್ದೇವು. ನಿಂಮ್ಮ ಶಿಷ್ಯ ಪ್ರತಿಶಿಷ್ಯ ಪಾರಂಪರ್ಯ ಆಚಂದ್ರಾರ್ಕ ನಿರಂತರವಾಗಿ ದಾಸೋಹ ಧರ್ಮ ನಡಸಿಕೊಂಡಬಹುದು ಯಂದು ಬರ್ಸಿಕೊಟ್ಟ ದಾನ ಪತ್ರವು ಯಿದಕ್ಕೆ ಮುದ್ರೆ ಉಂಗುರ ಮೊಹರು ಆಕಿಯಿರುತ್ತದೆ. ಹಿಂದೆ ಸಂಣ್ಣ ಮುದ್ರೆ ವತ್ತಿ ಸಹ ಯಿರುತ್ತದೆ."

ಶ್ರೀ ಸಿದ್ಧರಾಮೇಶ್ವರ ದೇವರ ವರಪ್ರಸನ್ನರಾದ ರಾಜಶ್ರೀ ಹಂಡೆ ಹಿರೇ ರಾಮಪ್ಪ ನಾಯಕನು ಕ್ರಿ. ಶ. ೧೭೬೮ರಲ್ಲಿ ಸಂಗನಕಲ್ಲು ಜಹಗೀರ ದಾನಪತ್ರವನ್ನು ಶ್ರೀ ಮರಿಕೊಟ್ಟೂರ ಸ್ವಾಮಿಗಳವರಿಗೆ ಬಳ್ಳಾರಿ ವಿರಕ್ತ ಮಠದಲ್ಲಿ ದಾನ-ದಾಸೋಹ ನಡೆಸುವುದಕ್ಕೆ ಸಂಕಲ್ಪ ಮಾಡಿದ. ಬಳ್ಳಾರಿ, ಕುರುಗೋಡು, ತೆಕ್ಕಲಕೋಟೆ ಈ ಮೂರು ಗ್ರಾಮಗಳಿಗೆ ಜಕಾತಿಯಿಂದ ಬಂದ ಹಣವನ್ನು ಸಂಗ್ರಹಿಸಿ ದೇವರ ದೀಪಾರಾಧನೆಗೆ ಹಾಗೂ ದಾನ-ದತ್ತಿಗಳಿಗೆ ಶಿವಾರ್ಪಣ ಮನೋಭಾವದಿಂದ ಮಾಡಿದ ಗ್ರಾಮದ ಭೂಮಿಯ ವಿವರವಿದು.

**ನೀಲಮ್ಮನವರ ದಾನಪತ್ರ (ಕ್ರಿ.ಶ.೧೭೨೮)**

ಶ್ರೀ ಗುರು ಬಸವ ಲಿಂಗಾಯ ನಮಃ
ಶ್ರೀಮತ್ಪರಮ ಕೈಲಾಸ ಪುರವರಾಧೀಶ್ವರ ಶಿಂಹ್ವಾ
ಸನಾರೂಢ ಕಳೇವರಮಪ್ಪ ನಂದೀಶಾದಿ ಪ್ರಮಥಗಣಂ
ಗಳ ಸಂಪ್ರದಾಯವಿಡಿದೊಪ್ಪುವ ತೋಂಟದ ಶಿದ್ಧ
ಲಿಂಗಾಚಾರ್ಯ ಕೃಪಾ ಪ್ರಸನ್ನರಾದ ತದ್ಗುರು ಬೋಧಾ
ಮೃತ ರಸವಾಂತು ಪುಪದೇಶಿಸುವಲ್ಲಿ ಶರಣ ಜನ
ಹೃದಯಾನಂದ ಪ್ರಭಾಪುಂಜ ರಂಜಿತರಾದ ರಾ॥ ರಾ॥ ಕ॥
ಬಳ್ಳಾರಿ ಶಿವಾನುಭವ ಚರಮೂರ್ತಿಗಳಾದಂಥ
ಕಪ್ಪಿನ ಚನ್ನಬಸವ ಸ್ವಾಮಿಗಳವರ ಪಾದಪದ್ಮಂಗಳಿಗೆ

ಶ್ರೀ ಶ್ರೀ ಶ್ರೀ ಶ್ರೀ ಯುಷ್ಮದತ್ಯಂತ ಪ್ರಿಯಶಿಷ್ಯರಾದ ನೀಲಮ್ಮನು ತ್ರಿಕಾಲದಲ್ಲಿ ಮಾಡ್ವ ದೀರ್ಘ ನಮಸ್ಕಾರ ಬಿನ್ನಹವು ಅ॥ ಕೀಲರ ಸಂ॥ ರದ ಕಾರ್ತಿಕ ಶು॥ ೫ ಯಲ್ಲು ಕೆಂಭಾವಿ

ಮುದ್ದನೂರು ಭಕ್ತ ಭಕ್ತಿ ಸುಕ್ಷೇತ್ರದಲ್ಲಿ ತಮ್ಮ ಸೇವೆಯೊಳಗೆ ಪರಾ ಮನ ಮಗ್ನವಾಗಿದ್ದೀತೆ. ಮೇಲಾಗಿ ಪಾದದ ಕೃಪೆಯಿಂದಲು ಶ್ರೀದೇವರ ದಯೆಯಿಂದಲು ನಡುವಂಥ ತಲೆ ಸಮಾಪ್ತಿಯನ್ನೈದುವ ಕಾಲ ಸಮಿೂಪಿಸಿ ಬಂತು. ಯಿಷ್ಟರೊಳಗೆ ಪಾದದ ಕೃಪೆಯಿಂದ ಲಿಂಗದೊಳಗೆ ಅಡಕವಾಗುವುದಕ್ಕೆ ಅಪ್ಪಣೆ ಆಗಲಿ ಯಂದು ವಿಜ್ಞಾಪಿಸಿಕೊಂಡು ಯಿದ್ದೇತೆ. ಪಾದವು ಯಾವ ರೀತಿಯಲ್ಲಿ ಅಮಳೈಕ್ಯ ಮಾಡಿ ಕೊಳ್ಳುತ್ತಾ ಯಿದ್ದಿತೋ ಪಾದವೇ ಬಲ್ಲದು. ಯಿೂ ಶಿವಾಯಿ ಕುರುಕೋಡಲ್ಲಿ ಕೊಟ್ರಪ್ಪಗೆ ಸರಕಾರದವರ ಕಡೆಯಿಂದ ಬಹಳ ಮಾನಪರೀಕ್ಷೆಗಳು ಆದವು. ಅರ್ಥಮಾನ ಪ್ರಾಣ ಕೂಡ ಹಾನಿಯಾಗಿ ಹೋಯಿತು. ಯಂದು ಸನ್ನಿಧಾನದಿಂದ ಬಂದಂಥ ಪ್ರಮಥಯ್ಯನವರು ಕುರುಗೋಡ ನಾಡ ದೇಶಾಯಿ ಮೊದಲಾದಂಥವರು ಮುಕ್ತ ಹೇಳಿದರು. ಶ್ರೀದೇವರ ಕೃಪೆಯಿಂದ ಅವರವರು ಪಡೆದಷ್ಟು ಅವರಿಗೆ. ಯಾರ ಯತ್ನವೆನ್ನದೆ ಯಲ್ಲಾ ಪೂರ್ವತ್ರಕ್ಕೂ ಶ್ರೀಕರ್ತೃಗಳೇ ಯಿದ್ದೀರಿ. ನನಗೆ ವಂದು ಕೆಲಸವಿಲ್ಲವು. ನನಗೆ ಅಯಿಕ್ಯ ಪದವಿಗೆ ಅಪ್ಪಣೆ ಆಗಬೇಕು. ಹ್ಯಾಗು ಪಾದದ ಹೆಸರಿನ ಮೇಲೆ ಆದ ಮಠಗಳು ಶಿಂದಿಗೇರಿ, ಕುರುಗೋಡು, ಹಂಪೆ, ಯಿಪ್ಪತ್ತೈವರು, ಕೆಂಚನ ಗೌಡನ ಗುಡ್ಡ, ಮುದ್ದಲಾಪುರ, ಕುಡುತಿನಿ, ದರೋಜಿ, ಹಾವಿಮಡು ಮೊದಲಾದ ವಗೈರೆ ಗ್ರಾಮಗಳಲ್ಲಿ ಇರುವಂಥ ಮಠಮಾನ್ಯಗಳು ಇಷ್ಟೊತ್ತಿಗೆ ಪಾದಕ್ಕೆ ಹೊಂದಿ ಪಾದದ ಸೇವೆಗೆ ಅನುಕೂಲವಾಗಿದ್ದಾವೆ. ಪುನಹ ಯಿೂ ಪತ್ರದಲ್ಲಿ ಯಿಾ ದೇಶದಲ್ಲಿ ಕೆಂಭಾವಿ ಮುದ್ದನೂರು, ಚಿಕ್ಕಮುದ್ದನೂರು, ತಾಳಿಕೋಟೆ, ಮುದೇಬಾಳು ಮುಂತಾದ ಗ್ರಾಮಗಳಲ್ಲಿ ಭಕ್ತರುಗಳು ಮಾಡಿಕೊಟ್ಟು ಇರುವಂಥ ಮಠಗಳನ್ನು ಸ್ವೀಕರಿಸಿಕೊಳ್ಳುವುದಕ್ಕೇ ಬಾಧ್ಯರೇ ಯಿದ್ದೀರಿ. ಯಿಾಗ ಸುರಾಪುರದ ನಿಷ್ಟೆ ವೀರಭದ್ರಪ್ಪನವರು ಬರಕೊಟ್ಟ ಪತ್ರ ಸನ್ನಿಧಾನಕ್ಕೆ ಕಳಿಸಿಹಿ ಯಿದ್ದೇವು. ಯಿಾ ಪತ್ರದಲ್ಲಿ ಯಿದ್ದಂ ಮಠಗಳ ಸಹ ಸ್ವೀಕರಿಸಬೇಕಾಗಿ ಯಿದುವರ್‍ವಗು ಸಂಪಾದಿಸಿದ ಮಠಗಳು ತಮಗೆ ಅರ್ಪಿತ ಮಾಡಿಯಿದ್ದೇನೆ. ಯಿನ್ನು ಮೇಲೆ ಸಂಪಾದಿಸಿದ ಮಠಗಳಿಗೆ ತಾವೇ ಬಾಧ್ಯರಾಗಿ ಯಿರುತ್ತೀರಿ. ಯಿೂ ವಿಷಯದಲ್ಲಿ ಪಾದಕ್ಕೆ ವಿಶೇಷವಾಗಿ ಬಿನ್ನಹ ಪತ್ರಿಕೆಯಲ್ಲಿ ಬರಸುವುದಕ್ಕೆ ಶಕ್ತಳಲ್ಲವು. ಮುಕ್ತ ಬಂದಂಥ ಪ್ರಮಥೆಯ್ಯನವರು ಶೃತಿಗೊಳಿಸಲಾಗಿ ಸಕಲವು ಚಿತ್ತಕ್ಕೆ ವೇದ್ಯವಾದೀತು.[೨೩]

ಹಂಡೆ ಅರಸರಲ್ಲಿ ಪ್ರಮುಖ ಮಹಿಳೆಯಾದ ನೀಲಮ್ಮನು ಶ್ರೀ ಕಪ್ಪಿನ ಚನ್ನಬಸವ ಸ್ವಾಮಿಗಳವರ ಪಾದಪದ್ಮಂಗಳಿಗೆ ಸಮರ್ಪಿಸಿ ಕ್ರಿ.ಶ.೧೭೭೮ರಲ್ಲಿ ನಾಡ ದೇಶಾಯಿ ಮೊದಲಾದಂಥ ವರು ಶ್ರೀ ದೇವರ ಕೃಪೆಯಿಂದ ಕುರುಗೋಡು, ಶಿಂದಿಗೇರಿ, ಹಾವಿಮಡು, ಕೆಂಚನಗುಡ್ಡ ಮುಂತಾದ ಪ್ರದೇಶಗಳನ್ನು ಮಠ–ಮಾನ್ಯಗಳಿಗೆ ಭೂದಾನ ನೀಡಿದ ವಿವರವನ್ನು ವಿಶೇಷವಾದ ಬಿನ್ನಹ ಪತ್ರಿಕೆಯಲ್ಲಿ ಬರೆಸಿರುವುದು ಕಾಣುತ್ತೇವೆ.

ಹೀಗೆ ದ್ಯಾವಪ್ಪನಾಯಕನ ಚಿಕ್ಕ ಹೆಂಡತಿ ನೀಲಮ್ಮನಳು ತನ್ನ ಆಡಳಿತ ವೈಖರಿಯಿಂದ ಕ್ರಿ. ಶ. ೧೭೩೧-೧೭೩೪ರವರೆಗೆ ಬಳ್ಳಾರಿ, ಕುರುಗೋಡು, ತೆಕ್ಕಲುಕೋಟೆ, ಈ ಪ್ರದೇಶದಲ್ಲಿ ದೊರೆತನ ಮಾಡಿದಳು. ತನ್ನ ಆಡಳಿತ ಅವಧಿಯಲ್ಲಿ ಬಳ್ಳಾರಿಯ ಮು. ಮಹಂತ ಸ್ವಾಮಿಗೆ ವುಳೇನೂರು ಗ್ರಾಮವನ್ನು ತನ್ನ ಹಿರಿಯರಿಗೆ ಸುಕೃತವಾಗಬೇಕೆಂದು ಮಠದಲ್ಲಿ ದಾಸೋಹ ಕಾರ್ಯ ನಡೆಸಲು ದಾನ ನೀಡುತ್ತಾಳೆ. ದಾನ ನೀಡಿದ ಶಾಸನವನ್ನು ಉಲ್ಲೇಖಿಸಲಾಗಿದೆ.

೧. "ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ

೨. ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಾಂಭವೇ

೩. ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕವರುಷಂಗಳು ೧೬೫೫ನೆಯ

೪. ಪ್ರಮಾದೀಚ ನಾ ॥ಸಂ॥ ರದ ಜೇಷ್ಟ ಶು ೭ ಯಲ್ಲು ಶ್ರೀ ಮಚ್ಚಿದಾನಂದ

೫. ನಿತ್ಯ ಪರಿಪೂರ್ಣ ಅವಿರಳ ಪರಂಜೋತಿ ಸ್ವರೂಪಿಗಳಾದ ರಾಜಮಾನ್ಯ

೬. ರಾ॥ ರಾ॥ ಶ್ರೀ ಮರಿಮಹಂತಸ್ವಾಮಿಗಳವರಿಗೆ ಶ್ರೀಮನ್ಮಹಾರಾಜಧಿ

೭. ರಾಜ ಖಂಡೆ ಯಸವಂತ್ತಪರದಳ ವಿಭಾಡ ಹರಿರಾಯಮಾನಮರ್ಧನ

೮. ಸದಾ ಶ್ರೀದೇವರವರ ಪ್ರಸನ್ನರಾದ ರಾ॥ ಹಂಡೆ ನೀಲಮ್ಮ ರಾಮಪ್ಪ ನಾಯಕ

೯. ರವರು ಬರಸಿಕೊಟ್ಟ ಪ॥ ತೆಕ್ಕಲಕೋಟೆ ತಾ॥ ಮ॥ ವುಳೇವೂರು

೧೦. ವಿರಕ್ತಮಠದ ಹೊಲ ವಕ್ಕಳರೆಳಗೆಡಿ ಮಾನ್ಯಕೊಟ್ಟು ಇದ್ದೇವೆ.

೧೧. ನಮ್ಮ ಹಿರಿಯರಿಗೆ ಧರ್ಮದಾಸೋಹದ ದಾನಪತ್ರ ಸೂರಸನ್ ಸಬಾಸನ

೧೨. ಲಾನೇನು ಅಲ್ಲು ಆದರೆ ನಮ್ಮ ಹಿರಿಯರಿಗೆ ವಿಶೇಷ ಸುಕೃತವಾಗಲೆಂದು

೧೩. ವಿರಕ್ತಮಠಕ್ಕೆ ಸ್ವಾಸ್ತೆಯನ್ನು ರುಸುಮು ಸಹ ದಾಸೋಹ ಧರ್ಮಕ್ಕೆ

೧೪. ಶಿವಾರ್ಪಣವಾಗಿ ಧಾರೆನೆರೆದ ಕೊಟ್ಟುಯಿದ್ದೇವು ನಿಮ್ಮ ಶಿಷ್ಯ ಪ್ರಸಿದ್ಧ

೧೫. ಪಾರಂಪರ್ಯವಾಗಿ ಆ ಚಂದ್ರರ್ಕವು ನಿರಂತರವಾಗಿ ದಾಸೋಹ

೧೬. ಧರ್ಮಕ್ಕೆ ನಡೆಸಿಕೊಂಡು ಬಾಹೋದುಯೆಂದು ಬರಸಿಕೊಟ್ಟ

೧೭. ದಾನ ಪತ್ರವು

೧೮. ಅಸಲಿಗೆ ಚೋರಿಯಾದ ವ್ಯಾಳ್ಳದಲ್ಲಿ

೧೯. ಯೀ ನಕಲು ಬರದ್ದು ನಕಲಿಗೆ ತಕ್ಕ ನಕಲುಬರದುಯಿರುತ್ತದೆ.

೨೦. ಕಾರ್ತೀಕ ಶು ೧೨ ಯಲು[೨೪]

**ಹಂಡೆ ರಾಮಪ್ಪನಾಯಕರ ದಾನಪತ್ರ (ಕ್ರಿ.ಶ.೧೭೩೩)**

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ।

ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ॥

ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕವರುಷಂಗಳು ೧೬೫೫ ಪ್ರಮಾದೀಚ ಸಂವತ್ಸರ ಜೇಷ್ಟ ಶು. ೭ ಯಲ್ಲು ಶ್ರೀಮತ್ಸಚ್ಚಿದಾನಂದ ನಿತ್ಯ ಪರಿಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪಿಗಳಾದ ರಾಜಮಾನ್ಯ ರಾ॥ ರಾ॥ ಶ್ರೀ ಮಹಂತಸ್ವಾಮಿಗಳವರಿಗೆ–

ಶ್ರೀ ಮನ್ಮಹಾರಾಜಾಧಿರಾಜ ಹಂಡೆಯ ಸವಂತ ಪರದಳ ವಿಭಾಡ ಅರಿರಾಯ ಮಾನಮರ್ದನ ಸದಾ ಶ್ರೀ ದೇವರ ವರ ಪ್ರಸನ್ನರಾದ ರಾ॥ ಹಂಡೆ ನೀಲಮ್ಮ ರಾಮಪ್ಪ ನಾಯಕರವರು ಬರಸಿಕೊಟ್ಟ ಪ॥ ತೆಕ್ಕಲಕೋಟ ತಾ॥ ಮ॥ ವುಳೇನೂರು ವಿರಕ್ತಮಠದ ಹೊಲ ವಕ್ಕಳ ಕೆಳಗಡಿ ಮಾನ್ಯ ಕೊಟ್ಟು ಇದ್ದೇವೆ. ನಮ್ಮ ಹಿರಿಯರಿಗೆ ಧರ್ಮ ದಾಸೋಹದ ದಾನಪತ್ರ ಸೂರ ಸನ್ ಸಖಾ ಸನಲಾನ್ಯೆನು ಅಲ್ಪು ಆದರೆ ನಮ್ಮ ಹಿರಿಯರಿಗೆ ವಿಶೇಷ ಸುಕೃತವಾಗಲೆಂದು ವಿರಕ್ತಮಠಕ್ಕೆ ಸ್ವಾಸ್ತಿಯನ್ನು ರುಸುಮು ಸಹ ದಾಸೋಹ ಧರ್ಮಕ್ಕೆ ಶಿವಾರ್ಪಿತವಾಗಿ ಧಾರೆನೆರೆದು ಕೊಟ್ಟು ಇದ್ದೇವು. ನಿಮ್ಮ ಶಿಷ್ಯ ಪ್ರಶಿಷ್ಯ ಪಾರಂಪರ್ಯವಾಗಿ ಆಚಂದಾರ್ಕವು ನಿರಂತರವಾಗಿ ದಾಸೋಹ ಧರ್ಮ ನಡಸಿಕೊಂಡು ಬಾಹೋದು ಯೆಂದು ಬರಸಿಕೊಟ್ಟ ದಾನಪತ್ರವು.[೨೫]

ಹಂಡೆ ನೀಲಮ್ಮ ರಾಮಪ್ಪನಾಯಕ ಅವರು ಅವಿರಳ ಪರಂಜ್ಯೋತಿ ಸ್ವರೂಪಿಗಳಾದ ರಾಜ್ಯಮಾನ್ಯ ಶ್ರೀ ಮಹಾಂತಸ್ವಾಮಿಗಳಾವರಿಗೆ ಕ್ರಿ. ಶ. ೧೭೩೩ರ ತೆಕ್ಕಲಕೋಟೆ, ವುಳೇನೂರು ವಿರಕ್ತಮಠದ ಹೊಲವನ್ನು ದಾನವಾಗಿ ನೀಡಿದ ವಿವರ. ದಾನ–ದಾಸೋಹದ ಮೂಲಕ ವಿರಕ್ತಮಠಕ್ಕೆ ಶಿವಾರ್ಪಿತವಾಗಿ ನಡೆದುಕೊಂಡಿದ್ದಾರೆಂದು ಈ ದಾನಪತ್ರದಿಂದ ತಿಳಿಯುತ್ತದೆ.

**ಜಾಗೀರಿ ಗ್ರಾಮಗಳ ವಿವರ (ಕ್ರಿ.ಶ.೧೭೪೭)**

ಶ್ರೀಗುರು ಸಿದ್ಧಲಿಂಗಾಯ ನಮಃ

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ।

ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ॥

ಸ್ವಸ್ತಿ ಜಯಾಭ್ಯುದಯ ಶಾಲಿವಾಹನ ಶಕ ೧೬೬೯ ಪ್ರಭವನಾಮ ಸಂ॥ ರದ ವೈಶಾಖ ಶು॥ ೧೦ ಯಲ್ಲು ಬಳ್ಳಾರಿ ಚರದ ಮರಿ ಮಹಾಂತ ಸ್ವಾಮಿಗಳವರ ಆಯಾಯ ಸಂಸ್ಥಾನದಲ್ಲಿರುವ ಮಠಮಾನ್ಯ ಜಾಗಿರಿ ಗ್ರಾಮಗಳು ಮುಂತಾದ ವಿವರವು.

ಕುರುಗೋಡು ಗ್ರಾಮಕ್ಕೆ ಜಹಗೀರಿ ಗ್ರಾಮ ವದ್ದಟ್ಟ ಸೋಮಸಮುದ್ರ ಮಧ್ಯದಲ್ಲಿರೊ ಮಲ್ಲಾಪುರಯೆಂಬೊ ಗ್ರಾಮ ಯಿದಕ್ಕೆ ಅನುಭವಿಕರು ಹಿರೇಪ್ರಮಥದೇವರು ಹಿರೇಹಂಡೆ ರಾಮಪ್ಪ ನಾಯಕರವರು ಕೊಟ್ಟದ್ದು। ಬಳ್ಳಾರಿ ದಾಸೋಹಮಠಕ್ಕೆ ಸಂಗ್ನಕಲ್ಲು ಚಾಗನೂರು ಯಂಬುವ ೨ ಜಹಗೀರು ಗ್ರಾಮಗಳು ಹಂಡೆ ಹಿರೇ ದ್ಯಾವಪ್ಪ ನಾಯ್ಕನವರು ಕೊಟ್ಟದ್ದು ಯಿದಕ್ಕೆ ಅನುಭವೀಕರು ಕೊಟ್ಟೂರ ದೇವರು।

ತೆಕ್ಕಲಕೋಟೆ ಗೂಳೂರ ದೇವರ ಮಠಕ್ಕೆ ಉಮ್ಮಳಿ ಭೈರಾಪುರವೆಂಬೊ ಗ್ರಾಮ ಹಿರೇ ರಾಮಪ್ಪನಾಯ್ಕನವರು ಕೊಟ್ಟದ್ದು ಯಿದಕ್ಕೆ ಅನುಭವೀಕರು ಚನ್ನಬಸವದೇವರು[೨೫] ।ಹಂಡೆ ರಾಮಪ್ಪನಾಯಕನು ಬಳ್ಳಾರಿ ಮರಿ ಮಹಾಂತಸ್ವಾಮಿಗಳವರ ದಿವ್ಯ ಸಾನ್ನಿಧ್ಯದ ಮೂಲಕ ಈತನು ಅನೇಕ ಗ್ರಾಮಗಳಲ್ಲಿ ಜಾಗೀರಿ ನೀಡಿದ್ದು ಕ್ರಿ. ಶ. ೧೭೪೭ರಲ್ಲಿ ಕುರುಗೋಡು ಗ್ರಾಮಕ್ಕೆ ಜಹಗೀರಿ ಗ್ರಾಮ, ವದ್ದಟ್ಟ ಸೋಮಸಮುದ್ರದ ಮಧ್ಯದಲ್ಲಿರೊ ಮಲ್ಲಾಪುರ ಎಂಬುದನ್ನು ಕೊಟ್ಟಿದ್ದು ಹಾಗೆಯೇ ತೆಕ್ಕಲಕೋಟೆ, ಗೂಳೂರ ದೇವರಮಠಕ್ಕೆ ಉಮ್ಮಳಿ ಭೈರಾಪುರವೆಂಬ ಗ್ರಾಮ ಹಿರೇ ರಾಮಪ್ಪನಾಯಕನು ಕೊಟ್ಟಿರುವ ವಿವರಗಳು ಮೇಲಿನ ದಾನಪತ್ರದಿಂದ ತಿಳಿಯುತ್ತದೆ.

**ಹಂಡೆ ರಾಮಪ್ಪನಾಯಕರ ಭೂದಾನ ಪತ್ರ (ಕ್ರಿ.ಶ.೧೭೪೮)**

ಶ್ರೀ ಸಿದ್ಧರಾಮೇಶ್ವರ

ನಮಸ್ತುಂಗಚಿರಶ್ಚುಂಬಿ ಚಂದ್ರಚಾಮರಚಾರವೇ।

ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ॥

ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕವರಷಂಗಳು ೧೬೭೦ ನೆಯ ವಿಭವ ನಾಮ ಸಂ॥ ರದ ಕಾರ್ತಿಕ ಶು॥ ೭ ಯಲ್ಲು ಶ್ರೀ ಚನ್ನಬಸಪ್ಪ ದೇವರವರಿಗೆ ಶ್ರೀ ಮನ್ಮಹಾರಾಜಾಧಿರಾಜ ಖಂಡೆಯ ಸಾವಂತ ಪರದಳವಿಭಾಡ ಅರಿರಾಯ ಮಾನ ಮರ್ದನ ಸದಾ ಶ್ರೀ ॥ ॥ ದೇವರ ಪ್ರಸನ್ನರಾದ ರಾಜೇಶ್ರೀ ಹಂಡೆ ರಾಮಪ್ಪ ನಾಯಕರವರು ಬರಶಿಕೊಟ್ಟ ಭೂದಾನ ಪತ್ರ........ ನಾವು ನಮ್ಮ ಹಿರೇರಿಗೆ ವಿಶೇಷ ಪುಣ್ಯಫಲ ಪ್ರಾಪ್ತಿಯಾಗಬೇಕೆಂದು ಮ॥ ಕುರುಗೋಡು ವಿಲಾಯತಿ ಮಾನ್ಯ ಉಂಮ್ಮಳಿ ಸೋಮ ಸಮುದ್ರದಲ್ಲಿ ರೇಗಡಿ ಜಮೀನು ೯೧ ವಕ್ಕಳದ ಹೊಲವನ್ನು ಧಾರಾಪೂರ್ವಕ ಧಾರೆನೆರೆದು ಕೊಟ್ಟು ಯಿದ್ದೇವು. ನಿಮ್ಮ ಶಿಷ್ಯ ಪ್ರಶಿಷ್ಯ

ಪಾರಂಪರ್ಯ ಅನುಭವಿಸಿಕೊಂಡು ಯಿರಲೆಂದು ಯಿದು ಹೊರ್ತು ಹಿರೇಹಾಳ ಚನ್ನವೀರನ ಪೇಟಿವಳಗೆ ಯಿಹೊ ವಿರಕ್ತಮಠಕ್ಕೆ ಕಸಬ ಚನ್ನವೀರಪೇಟದಲ್ಲಿ ನಡೆವ ಪಸಕಿ ಪಳ್ಗಿಯನ್ನು ನಿಮ್ಮ ಮಠಕ್ಕೆ ಅಪ್ಪಣೆ ಕೊಟ್ಟು ಯಿದ್ದೇವು. ಅದನ್ನು ಅನುಭವಿಸಿಕೊಂಡು ವಿರಲಿಯೆಂದು ಬರಸಿ ಕೊಟ್ಟ ದಾನ ಪತ್ರ ಕಾಗದವು.[೨೭]

ಹಂಡೆ ರಾಮಪ್ಪನಾಯಕನು ಕ್ರಿ. ಶ. ೧೭೪೮ರಲ್ಲಿ ಶ್ರೀ ಚನ್ನಬಸಪ್ಪ ದೇವರಿಗೆ ಬರೆಸಿಕೊಟ್ಟ ಭೂದಾನ ಪತ್ರವಿದು. ಕುರುಗೋಡು ಸುತ್ತಮುತ್ತಲಿನ ೯೧ ವಕ್ಕಳದ ಹೊಲವನ್ನು ತಮ್ಮ ಶಿಷ್ಯ-ಪ್ರಶಿಷ್ಯ ಪರಂಪರೆಯಾಗಿ ಅದನ್ನು ಅನುಭವಿಸಿಕೊಂಡು ಬರಲೆಂದು ವಿರಕ್ತಮಠಕ್ಕೆ ಕಸಬ ಚನ್ನವೀರಪೀಠದಲ್ಲಿ ದಾನಕೊಟ್ಟ ಪತ್ರವಿದು.

**ಕೂಡ್ಲಿ ಶೃಂಗೇರಿಮಠ ದಾನಪತ್ರ**

ಈ ಕೂಡ್ಲಿ ಶೃಂಗೇರಿಮಠದ ಶ್ರೀ ಮದ್ರಾಜಗುರು ಶೃಂಗೇರಿ ಶ್ರೀ ನಾರಸಿಂಹಭಾರತಿ ಸ್ವಾಮಿಗಳವರ ಕರಕಮಲ ಸಂಜಾತರಾದ ಶೃಂಗೇರಿ ಶ್ರೀ ಶಂಕರಭಾರತಿ ಸ್ವಾಮಿಗಳಿಗೆ ಹಂಡೆ ಅರಸರ ರಾಮಪ್ಪ ನಾಯಕನ ಪುತ್ರ ಪವಾಡಪ್ಪ ನಾಯಕರು ಬರೆದುಕೊಟ್ಟ ಭೂದಾನ ಧರ್ಮಶಾಸನ ಹೀಗಿದೆ.

ಪ್ಲವಂಗ ಕಾರ್ತಿಕ ಶು ೧೫ ಶಾ.ಶ ಪುಣ್ಯಕಾಲದಲ್ಲಿ
ಶ್ರೀ ವಿದ್ಯಾಶಂಕರ ದೇವರ ದೀಪಾರಾಧನೆಗೆ ಅಲ್ಲಾಪುರವೆಂಬ
ಗ್ರಾಮವನ್ನು ಸಕಲ ಸುವರ್ಣಾದಾಯ ಸಹಿರಣ್ಯೋದಕ
ಧಾರಾಪೂರ್ಣಕ ಗ್ರಾಮಸ್ಥಳ ನಿರ್ದೇಶನ ಮಾಡಿ ಬಿಟ್ಟುಕೊಟ್ಟಿರುವರು[೨೮]

ಹಂಡೆ ಅರಸರು ಧಾರ್ಮಿಕ ಕಾರ್ಯಗಳಿಗೆ ಅನೇಕ ಕಡೆಗೆ ದಾನ ನೀಡಿದಂತೆ ಕೂಡ್ಲಿ ಶೃಂಗೇರಿ ಮಠಕ್ಕೂ ದಾನ ನೀಡಿದ್ದಾರೆ.

ಕೂಡ್ಲಿ ಶೃಂಗೇರಿಮಠಕ್ಕೆ ಕ್ರಿ.ಶ.೧೬೬೭ರಲ್ಲಿ ಹಂಡೆ ಅರಸನಾದ ರಾಮಪ್ಪನಾಯಕನು ಮತ್ತು ಅವನ ಪುತ್ರನಾದ ಪವಾಡಪ್ಪನಾಯಕರು ಶ್ರೀ ನರಸಿಂಹ ಭಾರತಿ ಸ್ವಾಮಿಗಳು ಮತ್ತು ಶಂಕರಭಾರತಿ ಸ್ವಾಮಿಗಳಿಗೆ ದೀಪಾರಾಧನೆಗೆ ಭಕ್ತಿಪೂರ್ವಕವಾಗಿ ಭೂ ದಾನಕೊಟ್ಟ ವಿವರವಿದು. ಕ್ರಿ.ಶ. ೧೮೨೪ರಲ್ಲಿ ಹಂಡೆ ಅರಸ ಪವಾಡಪ್ಪನಾಯಕನ ಅನಂತರ ೮೦ ವರ್ಷಗಳ ತರುವಾಯ ಈ ಪವಾಡಪ್ಪನಾಯಕನ ಪ್ರಪುತ್ರ ಪ್ರಸನ್ನಪ್ಪನಾಯಕನ ಪುತ್ರ ಹಂಡೆ ರಾಮಪ್ಪನಾಯಕನು ಅನಂತಪುರ, ಬುಕ್ಕರಾಯಸಮುದ್ರ, ಹೊಸಕೆರೆ, ಬುಕ್ಕಪಟ್ಟಣ ಮುಂತಾದ ಸೀಮೆಗಳನ್ನು ಅಳುತ್ತಿದ್ದ ಸಂದರ್ಭದಲ್ಲಿ ಈ ಶಾಸನವನ್ನು ಬರೆಸಲಾಗಿದೆ.

ಅಕ್ಷಯ ಜೇಷ್ಠ ಬಹುಳ ಕ್ರಿ.ಶ.೧೭೪೬

ಸೋಮವಾರ ಪುಣ್ಯಕಾಲ ಶ್ರೀ ಮಠದ ದೀಪಾರಾಧನೆ

ನೈವೇದ್ಯ ನಡೆವುದಕ್ಕೆ ಹೊಸಕೆರೆ ಸಮೀಪ ಈಚರ್ಲ ಗ್ರಾಮಕ್ಕೆ

ಪ್ರತಿನಾಮ ರಾಮದುರ್ಗದ ಮಜರೆ ಗುಂಟಹಳ್ಳಿ ಎಂಬ

ಗ್ರಾಮವನ್ನು ದೇವರ ಪ್ರೀತ್ಯರ್ಥ ದತ್ತಿ ಬಿಟ್ಟು ಶಾಸನ ಬರೆಸಿದ್ದಾನೆ[೨೮]

ಪ್ರಸ್ತುತ ಈ ದಾನ ಸ್ವೀಕರಿಸಿದವರು ಕೂಡ್ಲಿ ಶೃಂಗೇರಿ ಮಠದ ಶ್ರೀ ಶಂಕರ ಭಾರತಿಗಳವರ ಪ್ರಶಿಷ್ಯ ಶ್ರೀ ಶಂಕರಭಾರತಿಗಳವರು. ಮೇಲೆ ಹೇಳಿದ ತಾಮ್ರ ಶಾಸನ ಒಂದು ಸನ್ನದುಗಳ ಮೇಲೆ ಮೊಹರಿದ್ದು, ಅದರಲ್ಲಿ "ವಿದ್ಯಾಶಂಕರ ಭಾರತಿ ಶ್ರೀ ಸಿದ್ಧರಾಮೇಶ್ವರ" ಎಂಬ ಒಕ್ಕಣಿಕೆಯಿರುವುದು ವಿಶೇಷವೆನ್ನಿಸಿದೆ. ಈ ದಾಖಲೆಗಳಿಂದ ಹಂಡೆ ಪಾಳೆಯಗಾರರು ಕೂಡ್ಲಿ ಶೃಂಗೇರಿ ಪೀಠದಲ್ಲಿ ಅನನ್ಯ ಭಕ್ತಿಯನ್ನು ಇರಿಸಿಕೊಂಡವರು.

ಕೂಡ್ಲಿ ಶೃಂಗೇರಿ ಮಠಕ್ಕೆ ಪವಾಡಪ್ಪನಾಯಕ ಮತ್ತು ಹಂಡೆ ರಾಮಪ್ಪನಾಯಕನು ಎರಡು ಬಾರಿ ದಾನ ನೀಡಿದ ಉಲ್ಲೇಖವಿದೆ. ಅನಂತಪುರ, ಬುಕ್ಕರಾಯ ಸಮುದ್ರ, ಹೊಸಕೆರೆ, ಬುಕ್ಕಪಟ್ಟಣ ಮುಂತಾದ ಪೀಠಗಳನ್ನು ದೀಪಾರಾಧನೆಯ ಸಂಕಲ್ಪ ಮಾಡಲು ಭೂದಾನ ಕೊಟ್ಟ ವಿವರವಿದೆ.

**ಹಂಡೆ ಹಿರೇರಾಮಪ್ಪ ನಾಯಕನ ದಾನಪತ್ರ (ಕ್ರಿ.ಶ.೧೭೨೬)**

ಶ್ರೀ ಸಿದ್ಧರಾಮೇಶ್ವರ

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ।

ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ॥

ಶಾಲಿವಾಹನ ಶಕ ವರುಷಗಳು ೧೬೪೮ನೆಯ ಪರಾಭವ ನಾಮ ಸಂವತ್ಸರ ಮಾಘ ಶು॥ ೧೦ ಮಿಯಲ್ಲು ಸದರಿ ಮರಿಕೊಟ್ಟೂರು ಸ್ವಾಮಿಗಳವರಿಗೆ ಶ್ರೀಮನ್ ಮಹಾರಾಜಾಧಿರಾಜ ಹಂಡೆ ಯಶವಂತ ಪರದಳ ವಿಭಾಡ ಹರಿರಾಯ ಮಾನಮರ್ದನ ಸದಾ ಶ್ರೀಸಿದ್ಧರಾಮೇಶ್ವರ ದೇವರ ವರ ಪ್ರಸನ್ನರಾದ ರಾಜಶ್ರೀ ಹಂಡೆ ಹಿರೇರಾಮಪ್ಪ ನಾಯಕರವರು ಬರಸಿಕೊಟ್ಟ ದಾಸೋಹದ ಧರ್ಮದ ದಾನಪತ್ರ ಸೂರಸನ್ ಸಬಾಯಿಸನ್ನೈಯಿನ ಅಲ್ಪ ಆದರೆ ನಾವು ನಮ್ಮ ಹಿರೇರಿಗೆ ವಿಶೇಷ ಸುಕೃತವಾಗಬೇಕೆಂದು ಪರಗಣೆ ಬಳ್ಳಾರಿ ಸ್ಥಳದ ವಿರಕ್ತಮಠದಲ್ಲಿ ದಾಸೋಹ ಧರ್ಮ ನಡೆಸುವುದಕ್ಕೆ ಶ್ರೀಶೈಲ ಪಾತಾಳದ ಗಂಗೆಯಲ್ಲಿ ಸಂಕಲ್ಪ ಮಾಡಿದ ಪ್ರಕಾರ ಗ್ರಾಮ ಭೂಮಿ ಹಾಕಿಕೊಟ್ಟ ವಿವರವು–

ಗ ೭೫೦ ಬಳ್ಳಾರಿ ಶೀಮೆಯ ಮ ॥ ಸಂಗನಕಲ್ಲು ಗ್ರಾಮ ನೀರಾರಂಭ ಕಾಡಾರಂಭ ಸಹಿತ ಸರ್ವಮಾನ್ಯವಾಗಿ ಕೊಟ್ಟು ಯಿದಕ್ಕೆ ವರುಷ ೧ ಕ್ಕೆ ನಾಣ್ಯ ನಿರ್ಣಯ ಮಾಡಿದೆ. ೦೩೭೯ ವಿರಕ್ತಮಠದ ಮಾನ್ಯದ ಹೊಲಗಳು ಪಾಗೆ ತೋಟದ ಹೋಲ ದೇಖಿಲು

೨ ಮಾಂನ್ಯದ ಹೊಲಗಳು

೧ ತೋಟದ ಹೊಲ ಸಹ

ಗ೨೦೯ ೫೯೦ ಯಿದಕ್ಕೆ ನಾಣ್ಯ

ಯೀ ಪ್ರಕಾರ ಮೇಲುಗಾಸು ಸಹ ಸಂಪಾದಿಸಿ ಅನುಭವಿಸುತ್ತ ದಾಸೋ ಧರ್ಮ ನಡಸುತ್ತ ದೇಶಮಧ್ಯ ಪ್ರದೇಶದಲ್ಲಿ ಸಂಚರಿಸುತ್ತ ಸದರಿ ಮರಿ ಕೊಟ್ಟ ಸ್ವಾಮಿಗಳು[೩೦]...(ಮುಂದೆ ಉಲೇಖವಿಲ್ಲ)

ಹಂಡೆ ಹಿರೇರಾಮಪ್ಪನಾಯಕನ ದಾನಪತ್ರದಲ್ಲಿ ಕ್ರಿ. ಶ. ೧೭೫೮ರ ಸುಮಾರಿಗೆ ಶ್ರೀ ಸಿದ್ಧರಾಮೇಶ್ವರ ದೇವರ ವರಪ್ರಸನ್ನರಾದ ಈ ಅರಸರು ದಾಸೋಹದ ಕಾರ್ಯವನ್ನು ತಮ್ಮ ಹಿರಿಯರಿಗೆ ಪುಣ್ಯವಾಗಲೆಂದು ಭೂದಾನಕೊಟ್ಟ ವಿವರವನ್ನು ನೀಡುತ್ತದೆ. ಬಳ್ಳಾರಿಯ ಸುತ್ತಮುತ್ತಲಿನ ಪ್ರದೇಶದಲ್ಲಿ ೭೫೦ ಪ್ರದೇಶವನ್ನು, ಸಂಗನಕಲ್ಲು ಗ್ರಾಮದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಅರಣ್ಯವನ್ನು ಬೆಳೆಸುವುದು ಮತ್ತು ನೀರಾವರಿ ವ್ಯವಸ್ಥೆಗೆ ಅನುವು ಮಾಡಿಕೊಟ್ಟದ್ದು. ಇನ್ನೂ ವಿರಕ್ತಮಠಕ್ಕೆ ಶ್ರೀಶೈಲ ಪಾತಾಳದ ಗಂಗೆಯಲ್ಲಿ ಸಂಕಲ್ಪ ಮಾಡಿದಂತೆ ತೋಟ ಹಾಗೂ ಕೆಲವೊಂದು ನಾಣ್ಯಗಳನ್ನು ದಾನದತ್ತಿ ನೀಡಿದ ವಿವರಣೆಗಳು ಕಂಡುಬರುತ್ತವೆ.

**ಅರಳಿಹಳ್ಳಿ ಶಾಸನ ಕ್ರಿ.ಶ.೧೬೦೩**

ರಾಯಚೂರು ಜಿಲ್ಲೆಯ ಸಿಂಧನೂರು ತಾಲೂಕಿನ ಮುಕ್ಕುಂದೆ ಗ್ರಾಮದ ಸಮೀಪದಲ್ಲಿರುವ ಅರಳಿಹಳ್ಳಿಯೆಂಬ ಗ್ರಾಮದಲ್ಲಿನ ಶಾಸನವಿದು. ಶಾಸನದಲ್ಲಿ ಕಾಲವು ಶಾಲಿವಾಹನ ಶಕ ವರ್ಷ ೧೫೨೫, ಸೋಭಕೃತು, ಶ್ರಾವಣ ಬ೫ರಲ್ಲಿ ಅಂದರೆ ಕ್ರಿ.ಶ.೧೬೦೩ರ ಮಂಗಳವಾರಕ್ಕೆ ಸರಿ ಹೊಂದುತ್ತದೆ.

ಶಾಸನದ ಉಲ್ಲೇಖ

೧. ನಮಸ್ತುಂಗ ಶಿರಸ್ತು

೨. ಂಭಿ ಚಂದ್ರಚಾಮರ ಚಾ

೩. ರುವೇ ತ್ರೈಲೋಕ್ಯ ನಗರಾ

೪. ರಂಭಾ ಮೂಲಸ್ತಂಭಾ

೫. ಯ ಶಂಭುವೇ

೬. ಶ್ರೀ ಸ್ವಸ್ತಿಶ್ರೀ ಜಯಾದ್ಭುದಯ ಶಾಲಿವಾಹನ ಶಕ ವರುಶಂಗಳು

೭. ೧೫೨೫ ನೆಯ ಶೋಭಕ್ರುತು ಸಂವತ್ಸರದ ಶ್ರಾವಣ ಬ ೫ ಲು ಶ್ರೀಮತು ಸಜ್ಜನ ಶುದ್ಧ ಶಿವಾ

೮. ಚಾರ ಸಂಪನರಾದ ಆಚಾರದ ಅಗ್ರಗಣ್ಯರಾದ ದೇವಾ ಪ್ರುಥ್ವೀ ಮಹಾಮಹತ್ತಿನೊಳಗಾದ ಬೆಂ

೯. ಡೆಗೆರೆಯ ಸಿದವೀರಂಣದೇವರ ಶಿಷ್ಯರು ಭಂಡಾರಿ ಸಿಧರಾಮದೇವರಿಗೆ ಶ್ರೀಮನ್ಮಹಾ

೧೦. ರಾಜಾಧಿರಾಜ ರಾಜಶ್ರೀ ಹಂಡೆ ಮಲುಕಪ್ಪನಾಯಕರು ಕೊಟ್ಟ ಪುರವರ್ಗ

೧೧. ಸಿಲಾ ಶಾಸನದ ಕ್ರಮವೆಂತೆಂದ ರಉಡುಕುಂದಿ ಸೀಮೆವಳಗಣ ತುಂಗಭದ್ರಾ

೧೨. ತೀರ ಅರೆಯಹಳಿಯ ಗ್ರಾಮವನು ಸೋಮವಾರ ಸಂಕುರಾನ್ತಿ ಪುಂಣ್ಯಕಾಲದಲು ನಂ

೧೩. ಮ ಗುರುಹಿರಿಯರು ಮತಾಪಿತುರುಗಳಿಗೆ ಪುಂಣ್ಯವಾಗ ಬೇಕೆಂದು ಮನೋ

೧೪. ವಾಕ್ಕಾಯ ಕರ್ಮ ತ್ರಿಕರಣ ಶುಧಿಯಾಗಿ ಉತ್ತರದ ಮುಕುಂದಿ ಮೇರೆ ಪೂರ್ವ

೧೫. ನದಿ ತಟಾಕ ಮೇರೆ ದಕ್ಷಿಣ ಸಿಂಗಾಪುರ ಮೇರೆ ಪಶ್ಚಿಮ ಮುಕುಂದಿ ಹೊಲ

೧೬. ಮೇರೆಯಾ ಚತುಸ್ಸೀಮೆ ವಳಗಾದ ಅರೆಹಳಿ ಗ್ರಾಮವನೂ ದಾರಾಪೂರ್ವಕ

೧೭. ವಾಗಿ ಪುರವರ್ಗವನು ಮಾಡಿಕೊಟು ಯಿದೇಉ ಆ ಗ್ರಾಮದಲು

೧೮. ಕಾಡಾರಂಭ ನೀರಾರಂಭ ಅಕ್ಷೀಣಿ ಆಗಾಮಿ ಜಲಪಾಶಾಣ

೧೯. ನಿಧಿ ನಿಕ್ಷೇಪ ಸಿಧ ಸಾಧ್ಯಂಗಳೆಂಬ ಅಷ್ಟ ಭೋಗ ತೇಜೋ

೨೦. ವಾರ್ಧಿನೆಯನು ನಿಂಮ್ಮ ಪುತ್ರ ಪುಉತ್ರ ಪಾರಂಪರಿ

೨೧. ಯಾಗಿ ಆ ಚಂದ್ರಾರ್ಕ್ಕ ಸ್ಥಾಯಿಗಳಾಗಿ ...ಓಂ

೨೨. ಅನುಭವಿಸುವದುಯೆಂದು ಕೊಟ

೨೩. ಅರೆಯಹಳಿಯ ಪುರವರ್ಗ ದಾನಪಾಲನೆಯ್ಯೋರ್ಮಧ್ಯೇ ದಾನರ್ಥೇ

೨೪. ಲನಾದಾನಾ ಸ್ವರ್ಗಮವಾಪ್ನ್ಯೋತಿ ಪಾಲನದಚ್ಯುತಂ ಪದಂ

೨೫. ವಕುದತ್ತಂ ಮನೋದತ್ತಂ ಧಾರಾದತಂ ನದೀಯತೆ ಶಷ್ಟಿರ್ವರುಶ

೨೬. ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ

೨೭. ಸ್ವಧರಾ ದ್ವಿಗುಣಂ ಪರದತ್ತಾನು ಪಾಲನ ಪರ

೨೮. ದತ್ತಾಪ ಹಾರಿಣಾಂ ಸ್ವದತಂ ನಿಷ್ಪಲಂ ಭವೇತ್[೩೩]

ಹಂಡೆ ಮಲ್ಲಪ್ಪನಾಯಕನು ಸಜ್ಜನ ಶುದ್ಧ ಶಿವಾಚಾರ ಸಂಪನ್ನನಾದ ಬೆಂಡೆಗೆರೆಯ ಸಿದ್ಧವೀರಣ್ಣದೇವನ ಶಿಷ್ಯನಾದ ಭಂಡಾರಿ ಸಿದ್ಧರಾಮದೇವನಿಗೆ ಅರಳಿಹಳ್ಳಿ ಗ್ರಾಮವನ್ನು ಪುರವರ್ಗವಾಗಿ ದಾನ ನೀಡುತ್ತಾನೆ. ದಾನ ನೀಡುವಾಗ ಚತುಸ್ಸೀಮೆಗಳಾದ ಬೆಂಡೆಗೆರೆ, ಉರುಕುಂದಿ, ಮುಕ್ಕುಂದ ಹಾಗೂ ಅರಳಿಹಳ್ಳಿಗಳಿಗೆ ಸಂಬಂಧಿಸಿದಂತೆ ತುಂಗಭದ್ರಾ ಪ್ರದೇಶಗಳನ್ನು ಇಟ್ಟುಕೊಂಡು ಮೇರೆಯನ್ನು ಗುರುತಿಸಿ ಮುಂದೆ ಕೃಷಿ ವಹಿವಾಟಿಗೆ ಅನುಕೂಲವಾಗಲೆಂದು ದಾನ ನೀಡಿದ ವಿವರಗಳು ಕಂಡುಬರುತ್ತವೆ. ಈ ದಾನವು ಮುಖ್ಯವಾಗಿ ತಂದೆ ತಾಯಿಗಳಿಗೆ ಪುಣ್ಯವಾಗಬೇಕೆಂದು ದಾನ ನೀಡುವ ಪರಿಕಲ್ಪನೆಯನ್ನು ಹಂಡೆ ಮನೆತನದವರು ಪಾಲಿಸುತ್ತ ಬಂದಿರುವರು. ನೀಡಿದ ದಾನವು ಆ ಸೂರ್ಯ-ಚಂದ್ರ ಇರುವವರೆಗೂ ಶಾಶ್ವತವಾಗಿರಬೇಕೆಂದು ತಮ್ಮ ಇಷ್ಟಾರ್ಥ ದೇವರಲ್ಲಿ ಪ್ರಾರ್ಥಿಸಿಕೊಳ್ಳುತ್ತಾರೆ.

**ಎಸ್.ಮಣೂರು ದಾನಶಾಸನ**

ವೆಂಕಟಪತಿ ದೇವರಾಯನು ಪೆನುಗೊಂಡೆಯಿಂದ ಆಳುತ್ತಿದ್ದಾಗ ಅವನ ಸಾಮಂತನಾದ ಹಂಡೆ ಹನುಮಿನಾಯಕನ ಮಗನಾದ ಅಂಕುಶರಾಯನು ರಾಜನಿಂದ ಅಮರ ಮಾಗಣಿಯಾಗಿ ಪಡೆದಿದ್ದ ಬಳ್ಳಾರಿ ಸೀಮೆಯ ಮಣೂರನ್ನು ತನ್ನ ಮಗನಾದ ರಾಮಪ್ಪನಾಯಕನಿಗೆ ಪುಣ್ಯವಾಗ ಬೇಕೆಂದು ಕರಿಯ ವೀರಣ್ಣೊಡೆಯನ ಶಿಷ್ಯನಾದ ಚನ್ನಮಲ್ಲಿಕಾರ್ಜುನ ದೇವನ ಶಿಷ್ಯನಾದ ಕೇದಾರದೇವನಿಗೆ ದಾನವಾಗಿ ನೀಡುತ್ತಾನೆ.

**ಮೊದಲ ಮುಖ**

೧. . ಯ ಹೇ

೨. . ಖಿ ನಾಮ

೩. ದ ಮಾ

೪. .ಸೆ ಸ್ತಿರವಾ

೫. .ಮದ್ರಾಜಾ

೬. . ಪರಮೇಶ್ವರ

೭. . ಕಟಪತಿ ದೇ

೩೬. ಮಿನಾಯಕ ಅ

೩೭. ಂಕುಶರಾಯ

೩೮. ರು ಕೊಟ ಭೂದಾ

**ಮೂರನೆಯ ಮುಖ**

೩೯. ನಧರ್ಮಸಾಸ

೪೦. ನದ ಪಟೆದ

೪೧. ಕ್ರಮವೆಂತೆ

೪೨. ಂದರೆ ರಾಯರ

೮. . ಯರು ಪೆನು
೯. . . ಟಣದಲ್ಲಿರ
೧೦. . . ಸ ನಾರಾಗಿ
೧೧. . . ಂದಿ ಯಿದು
೧೨. . .ಸಮಸ್ತಮ
೧೩. . . ಯಮ ನಿಮ
೧೪. . .ದಾಯಮ
೧೫. . . ಧ್ಯಾನ ಧಾರ
೧೬. . . ಷ್ಟಾಂಗ ಯೋ
೧೭. . . ರಾ ಶ್ರೀ ನಂ
೧೮. . . ಮಂಗ್ಗಿನಾಥ
೧೯. . . ದ್ರ ದೇವರು ಯ
೨೦. . . ಪಾರಂಗ ಸಿ
೨೧. . . ವದಾಲ್ಲಿದ್ದ ಧೇ
೨೨. . . ಮಹಾಮ

**ಎರಡನೆಯ ಮುಖ**

೨೩. ಹತ್ತಿ ನೊಳಗಾ
೨೪. ದ ದಶಮುಖ
೨೫. ದ ಕರಿಯ ವೀರ
೨೬. ಂಹೊಡೆರ ದೇ
೨೭. ವರ ಸಿಷ್ಯರು ಚೆ
೨೮. ಂನ ಮಲ್ಲಿಕಾರ್ಜು
೨೯. ನ ದೇವರು ಅವ
೩೦. ರ ಸಿಷ್ಯರು ಭಂ
೩೧. ಡಾರಿ ಕೇದಾರ
೩೨. ದೇವರಿಗೆ ಶ್ರೀಮ
೩೩. ನ್ಮಹಾರಾಜಾಧಿ
೪೩. ನಮಗೆ ಅಮರ
೪೪. ಮಾಗಣಿಗೆ ಪಾ
೪೫. ಲಿಸಿದ ಬಳಾರಿ ಸೀ
೪೬. ಮೆಯೊಳಗಣ
೪೭. ಮಣುವೂರ ಗ್ರಾ
೪೮. ಮವನುನಂಮ
೪೯. ಕೊಮಾರದೊಢ
೫೦. ತಿ ಆ ರಾಮಪ್ಪ
೫೧. ಗೆ ಕೈಲಾಸಪುಣ್ಯ
೫೨. ಲೋಕವಾಗಬೇಕೆ
೫೩. ಂದು ಆಗ್ರಾಮಕೆ

**ನಾಲ್ಕನೆಯ ಮುಖ**

೫೪. ಸಲುವ ಚತುಸೀಮೆವಳುಗಾ
೫೫. ಗಿ ಕಾಡಾರಂಭ ನೀರಾರಂಬ
೫೬. ಸಕಲ ಸುವರ್ನಾದಾಯ ಸ
೫೭. ಕಲ ಭತ್ತಾದಾಯ ಸುಂ
೫೮. ಕ ಅನು ಪನ ಕಾಸು ಹಲು
೫೯. ವೊಲ ಹರಿಪುರವಳ್ಳಿಗೆ ಸಕಲ
೬೦. ಜೊಪ್ಪ. . ಸಹವಾಗಿ
೬೧. ಧಾರಾಪೂರ್ವಕವಾಗಿ ಲಿಂಗ
೬೨. ಗ ಮುದ್ರಾಕಲ್ಲು ಹಾಕಿ ಪುರ
೬೩. ವರ್ಗವಮ್ಮಾಡಿ ನಿಂಮ
೬೪. ಪುತ್ರಪವುತ್ರ ಪಾರಂಪ
೬೫. ರೆ ಆಚಂದ್ರಾರ್ಕ ಸ್ಥಾಯ
೬೬. ವಾಗಿ ಅನುಭುವಿ
೬೭. ಸಿ ಕೊಂಡಿಹುದುಯ

| | |
|---|---|
| ೩೪. ರಾಜರಾಜಶ್ರೀ | ೬೮. ಂದು ಬರೆಸಿಕೊಟ್ಟ |
| ೩೫. ಹಂಡೆಹನು | ೬೯. ದಾನ ಪತ್ರ[೩೪] |

ಈ ದಾನಶಾಸನದ ಉಲ್ಲೇಖದನ್ವಯ ಹಂಡೆ ಅಂಕುಶರಾಯನು ನಂದ್ಯಾಳ, ಸಿರಿವಾಳ ಹಾಗೂ ಬಂಕಾಪುರ ಪ್ರದೇಶಗಳಲ್ಲಿ ಆಳ್ವಿಕೆ ನಡೆಸುತ್ತಿದ್ದನು. ಈತನು ಜನರಿಗೆ ಯಾವ ತೊಂದರೆಯಾಗದಂತೆ ನೀತಿಯುತವಾಗಿ ಆಡಳಿತವನ್ನು ನಡೆಸಿದವನು. ಹೀಗಾಗಿ ಬಳ್ಳಾರಿ ಸೀಮೆಯ ಅಮರ ಮಾಗಣಿಯನ್ನು ಕರಿಯ ವೀರಣ್ಣೊಡೆಯನ ಶಿಷ್ಯನಾದ ಚನ್ನಮಲ್ಲಿಕಾರ್ಜುನ ದೇವನ ಶಿಷ್ಯನಾದ ಕೇದಾರದೇವನಿಗೆ ದಾನವಾಗಿ ನೀಡಿದ್ದು ಕಂಡುಬರುತ್ತದೆ. ದಾನವು ಮುಖ್ಯವಾಗಿ ತಮ್ಮ ಹಿರಿಯರಿಗೆ ಪುಣ್ಯವಾಗಲೆಂದು ಮತ್ತು ಸರ್ವಜನ ಸುಖಿಯಾಗಿರಲೆಂದು ದಾನ ನೀಡಿದ ವಿವರಗಳು ಕಂಡುಬರುತ್ತವೆ. ಈ ದಾನಶಾಸನವು ಸಿರುಗುಪ್ಪ ತಾಲೂಕಿನ ಎಸ್. ಮಣೂರು ಎಂಬಲ್ಲಿ ಆಂಜನೇಯ ದೇವಾಲಯದ ಕಂಬದಲ್ಲಿದೆ.

## ೩.೩. ಕಾಗದಪತ್ರಗಳು

ಹೊಸಪೇಟೆಯ ಶ್ರೀ ಕೊಟ್ಟೂರು ಸ್ವಾಮಿ ಸಂಸ್ಥಾನ ಮಠದಲ್ಲಿ ಲಭ್ಯವಾಗಿರುವ ಕಾಗದ ಪತ್ರಗಳು ಶ್ರೀ ಕಪ್ಪಿನ ಚನ್ನಬಸವ ಸ್ವಾಮಿಗಳವರಿಗೆ ಕ್ರಿ.ಶ. ೧೫೧೮ರಲ್ಲಿ ಕರಸಂಜಾತರು ಶ್ರೀ ಸಿದ್ಧೇಶ್ವರ ಸ್ವಾಮಿಗಳು ಬಳ್ಳಾರಿಯ ರಾಜ ಬಾಲದ ಹನುಮಪ್ಪ ನಾಯಕನು ಪೂಜ್ಯರ ಶಿವಯೋಗದ ಪ್ರಭಾವವನ್ನು ಕಂಡು, ಮೆಚ್ಚಿ ಅವರಿಗೆ ಅಲಕುಂದೆ, ಅಂದ್ರಹಾಳು, ಗೋನಾಳು, ಮುಂಡ್ರಿಗೆ, ಮಿಂಚೇರಿ, ಬೆಳಗಲ್ಲು, ಬೊಬ್ಬುಕುಂಟೆ, ಇಬ್ರಾಂಪುರ, ಕಪ್ಪುಗಲ್ಲು ಮೊದಲಾದ ಗ್ರಾಮಗಳಲ್ಲಿ ಭೂಮಿಯ ದತ್ತಿಗಳನ್ನು ಬಿಟ್ಟ ಉಲ್ಲೇಖಗಳು ಕಂಡುಬರುತ್ತವೆ.

ಶ್ರೀ ಮರಿ ಕೊಟ್ಟೂರು ಸ್ವಾಮಿಗಳವರಿಗೆ ಕ್ರಿ.ಶ. ೧೭೧೭ರಲ್ಲಿ ಬಳ್ಳಾರಿಯ ರಾಜರಾದ ಖಂಡೆಯ ಸಾಮಂತ, ಪರದಳ ವಿಭಾಂಡ, ಹರಿರಾಯ ಮಾನಮರ್ದನ ಸದಾ ಶ್ರೀ॥ ದೇವರ ವರಪ್ರಸ್ನರಾದ ಹಂಡೆರಾಮಪ್ಪ ನಾಯ್ಕರು ಬರೆಸಿದ ದಾನ ಪತ್ರದಲ್ಲಿ ಹಿರಿಯರಿಗೆ ಸುಕೃತವಾಗಬೇಕೆಂದು ಪರಗಣಿ ಬಳ್ಳಾರಿಯ ವಿರಕ್ತಮಠದಲ್ಲಿ ದಾಸೋಹಧರ್ಮ ನಡೆಸುವುದಕ್ಕೆ ಶ್ರೀಶೈಲ ಪಾತಾಳಗಂಗೆಯಲ್ಲಿ ಸಂಕಲ್ಪ ಮಾಡಿದ ಪ್ರಕಾರ ಭೂಮಿಯನ್ನು ಬಳ್ಳಾರಿ ಸೀಮೆ, ಸಂಗನಕಲ್ಲು ಗ್ರಾಮಸಹಿತ ಸರ್ವ ಸಾಮಾನ್ಯವಾಗಿ ಕೊಟ್ಟಿದೆ. ಇದಕ್ಕೆ ವರ್ಷಕ್ಕೆ ಒಂದು ನಾಣ್ಯ ನಿರ್ಣಯ–ಸಾವಿರ ವರಹದ ಸ್ವಾಸ್ತಿಯನ್ನು ಕೊಡಮಾಡಿ ಬಳ್ಳಾರಿ, ಕುರುಗೋಡು, ತೆಕ್ಕಲಕೋಟೆ ಈ ಮೂರು ಮಹಾಲು ಜಕಾತಿಯಲ್ಲಿ ಪ್ರತಿ ಮಹಾಲಿಗೂ ಕಾಲುನಡೆ ೧ಕ್ಕೆ ದುಗ್ಗಾಣಿ ಪ್ರಕಾರ ಮೇಲುಕಾಸು ಸಹ ಸಂಪಾದಿಸಿ ಅನುಭವಿಸುತ್ತ ಸದರಿ ಮರಿಕೊಟ್ಟೂರ ಸ್ವಾಮಿಗಳು ಶಿವಪೂಜೆಯನ್ನು ಪ್ರಜೆಗಳ ಹಾಗೂ ರಾಜರ ಕಲ್ಯಾಣ ಕೋರುತ್ತ ಮಾಡಬೇಕೆಂದು ದಾನಪತ್ರದಲ್ಲಿಯ

ಲಿಖಿತ ಮನವಿಯಾಗಿದೆ.

ರಾಜಮಾನ್ಯ ರಾಜಪೂಜಿತ ಬಳ್ಳಾರಿ ಚರದ ಜಗಳೂರು ಕಲ್ಲುಮಠಾಧ್ಯಕ್ಷರಾದ ತೋಂಟದಾರ್ಯ ಮಹಾಸ್ವಾಮಿಗಳವರಿಗೆ ಶ್ರೀ ಮನ್ಮಹಾರಾಜಾಧಿರಾಜ ಖಂಡೆಯ ಯಶವಂತ, ಪರದಳ ವಿಭಾಂಡ, ಅರಿರಾಯ ಮಾನಮರ್ದನ ಖಂಡೆ ರಾಮಪ್ಪ ನಾಯಕರು ಬರೆಸಿಕೊಟ್ಟ ಭೂದಾನ ಪತ್ರದಲ್ಲಿ "ನಮ್ಮ ಹಿರಿಯರಿಗೆ ವಿಶೇಷ ಪುಣ್ಯಫಲ ಪ್ರಾಪ್ತಿಯಾಗಬೇಕೆಂದು ಮಜಕೂಲನಲ್ಲಿ ಒಂದು ಒಕ್ಕಳದ ಗದ್ದೆಯನ್ನು ಮಠಕ್ಕೆ ಕೆರೆ ಹೊಂದಲಿ ಜಾಗ ಸ್ಥಿರಮಾಡಿ, ನಾಲ್ಕುಮೂಲೆಗೆ ಲಿಂಗಮುದ್ರೆ ಸ್ಥಾಪಿಸಿಕೊಟ್ಟು ಇದ್ದೇವೆ. ಸದರಿ ಮಠಕ್ಕೆ ರಾಜಾನಟ್ಟಯೊಳಗೆ ಗಿಡ್ನಟ್ಟಿಯೊಳಗೆ ಮೂರು ಹೊಲಗಳ ಸೇರಿ ಒಂದು ಖಂಡುಗದ ಹೊಲಗಳು ಧಾರಾಪೂರ್ವಕ ಉದಕದತ್ತ ಮಾಡಿ ಕೊಟ್ಟಿರುತ್ತೇವೆ. ಸದ್ರಿ ಭೂಮಿಯೊಳಗಿಂದ ಬಂದ ತೇಜೋಪಾರ್ಜನೆಯಿಂದ ಬಂದ ಹಣವನ್ನು ಲಿಂಗಪೂಜೆಗೆ ವಿನೊಯೋಗಿಸಿ ತಾವು ನಮ್ಮ ಸಂಸ್ಥಾನಕ್ಕೆ ಆಶೀರ್ವಾದ ಕೊಟ್ಟು ಶಿಷ್ಯ ಪ್ರಶಿಷ್ಯರ ಪರಂಪರೆ ಅನುಭವಿಸಿಕೊಂಡು ಬರುವುದು.[೩೫] ಹೊಸಪೇಟೆಯ ಶ್ರೀ ಜಗದ್ಗುರು ಕೊಟ್ಟೂರಸ್ವಾಮಿ ಮಠದಲ್ಲಿ ದೊರೆತ ಮಹತ್ವಪೂರ್ಣವಾದ ಕಾಗದ ಪ್ರತಿಗಳಾಗಿವೆ.

## ೩.೪. ಕೈಫಿಯತ್ತುಗಳು

ದಕ್ಷಿಣ ಭಾರತಕ್ಕೆ ಬಂದ ಕ್ರೈಸ್ತ ಮಿಷನರಿಗಳಾದ ಹರ್ಮನ್ ಮೋಂಗ್ಲಿಂಗ್-ಗ್ರಂಥಸಂಪಾದನೆ, ಕಿಟ್ಟೆಲ್-ಶಬ್ದಮಣಿ ದರ್ಪಣ, ಫ್ಲೀಟ್-ಜನಪದ ಲಾವಣಿಗಳು, ಬಿ.ಎಲ್. ರೈಸ್-ಶಾಸನಗಳ ಸಂಗ್ರಹ ಹಾಗೂ ಕರ್ನಲ್ ಮೆಕೆಂಝಿ ಕೈಫಿಯತ್ತುಗಳ ಸಂಗ್ರಹ ಕಾರ್ಯ ಮಾಡಿದವರಲ್ಲಿ ಆದ್ಯರು. ಹೀಗಾಗಿ ಕರ್ನಲ್ ಮೆಕೆಂಝಿನ್ನು ಕೈಫಿಯತ್ತುಗಳ ಜನಕ ಎಂದು ಕರೆಯುತ್ತಾರೆ. ಇವರು ಕೈಫಿಯತ್ತುಗಳ ಕುರಿತು ಅವುಗಳ ಮಹತ್ವ ಮತ್ತು ಜ್ಞಾನವನ್ನು ತಿಳಿಸಿದ ಮೊದಲಿಗರು. ಕರ್ನಾಟಕದ ಕೆಲವೊಂದು ಪ್ರದೇಶಗಳಿಗೆ ಸಂಚರಿಸಿ ಕೈಫಿಯತ್ತು ಸಂಗ್ರಹಿಸಿದ್ದಾರೆ. ಇದಾದ ನಂತರ ಡಾ.ಎಂ.ಎಂ. ಕಲಬುರ್ಗಿ ಅವರು ಉತ್ತರ ಕರ್ನಾಟಕವನ್ನು ಒಳಗೊಂಡಂತೆ ಅನೇಕ ಭಾಗಗಳಿಗೆ ಭೇಟಿ ನೀಡಿ ಕೈಫಿಯತ್ತುಗಳನ್ನು ಸಂಗ್ರಹ ಮಾಡಿದ್ದಾರೆ. ಇವರು "ಕರ್ನಾಟಕದ ಕೈಫಿಯತ್ತು"(೧೯೯೪) ಎಂಬ ಸಂಪಾದನೆಯ ಕೃತಿಯನ್ನು ಹೊರತಂದರು. ಕೈಫಿಯತ್ತುಗಳ ಮಹತ್ವವನ್ನು ತಿಳಿಸಿದವರು ಕರ್ನಲ್ ಮೆಕೆಂಝಿ. ಆದರೆ ಅವುಗಳ ಸಂಗ್ರಹ ಕಾರ್ಯ ಮತ್ತು ವಸ್ತುನಿಷ್ಠ ವಿಶ್ಲೇಷಣೆ ಕೆಲಸವನ್ನು ಮಾಡಿದವರಲ್ಲಿ ಡಾ.ಎಂ.ಎಂ. ಕಲಬುರ್ಗಿ ಎರಡನೆಯವರು. ಇಂತಹ ಮಹತ್ವದ ಕೈಫಿಯತ್ತುಗಳು ಕರ್ನಾಟಕದ ಸಂಸ್ಕೃತಿಯನ್ನು ಶೋಧಿಸುವಲ್ಲಿ ಪ್ರಮುಖ ಆಕರ ಸಾಮಗ್ರಿಯಾಗಿವೆ. ತುಂಬಾ ನಿಖರವಾಗಿ ವಸ್ತು ಸ್ಥಿತಿಯನ್ನು ತಿಳಿಸುವಲ್ಲಿ ಕೈಫಿಯತ್ತುಗಳ

ಪಾತ್ರ ಮಹತ್ವವಾದದ್ದು. ಒಟ್ಟಾರೆಯಾಗಿ 'ಕರ್ನಾಟಕದ ಕೈಫಿಯತ್ತು' ಎಂಬ ಕೃತಿಯಲ್ಲಿ ಬರುವ ಹಂಡೆ ಅರಸರ ಕುರಿತಾದ ಕೈಫಿಯತ್ತುಗಳನ್ನು ಆಕರ ಸಾಮಗ್ರಿಯನ್ನಾಗಿಸಿಕೊಂಡು ಸಂಶೋಧನೆಗೆ ಬಳಸಿಕೊಂಡಿದೆ.

ನಾಡಿನ ಚರಿತ್ರೆಯ ನಿರ್ಮಾಣಕ್ಕೆ ಶಾಸನಗಳಂತೆಯೇ ಕೈಫಿಯತ್ತುಗಳು ಉತ್ತಮವಾದ ಆಕರ ಸಾಮಗ್ರಿಗಳಾವೆ. ಇವು ತನ್ನದೇ ಆದ ಪ್ರಾಚೀನ ಇತಿಹಾಸವನ್ನು ಹೊಂದಿವೆ. ಇತಂಹ ಕೈಫಿಯತ್ತುಗಳು ಅರಮನೆ-ಗುರುಮನೆಗಳಲ್ಲಿ ಹಾಗೂ ಹಳ್ಳಿಯ ಪರಿಸರದಲ್ಲಿ ಹುಟ್ಟಿಕೊಂಡಿರುವುದು ಹೆಚ್ಚಾಗಿ ಕಾಣಬಹುದು. ಹೀಗಾಗಿ ಹಂಡೆ ಅರಸುಮನೆತನಕ್ಕೆ ಕೈಫಿಯತ್ತು ಮಹತ್ವದ ದಾಖಲೆಗಳಾಗಿವೆ. ಈ ದಾಖಲೆಗಳಿಗೆ ಸಂಬಂಧಿಸಿದಂತೆ ಡಾ.ಎಂ.ಎಂ ಕಲಬುರ್ಗಿ ಅವರು ಸಂಪಾದಿಸಿದ "ಕರ್ನಾಟಕ ಕೈಫಿಯತ್ತು" ಕೃತಿಯಲ್ಲಿ ಕುರುಗೋಡು ಕೈಫಿಯತ್ತು, ಬಳ್ಳಾರಿ ಕೈಫಿಯತ್ತು ಹಾಗೂ ಅನಂತಪುರ ಕೈಫಿಯತ್ತುಗಳು ಹಂಡೆ ಅರಸರ ಬಗ್ಗೆ ಮಾಹಿತಿ ನೀಡುವಲ್ಲಿ ಮಹತ್ವದ ಸಾಮಗ್ರಿಯಾಗಿವೆ. ಕುರುಗೋಡು ಕೈಫಿಯತ್ತು ಹಂಡೆ ಅರಸರ ಪ್ರಮುಖ ಐವರ ಮಕ್ಕಳ ಕುರಿತು ಸೊಗಸಾದ ಬಿರುದು ಗದ್ಯ-ಪದ್ಯ ರೂಪದಲ್ಲಿ ನಿರೂಪಿತಗೊಂಡಿದೆ.

"ಧರೆಗೆಧರ್ಮಜನಂಕುಶ
ಪರಬಲದೊಳ್ ಭೀಮದೇವ ಅರ್ಜುನರಾಮ
ದುರಧೀರನು ನಕುಲಮಲ್ಲನು
ನರೆಗೆಲೆ ಸಹದೇವ ಚಿಕ್ಕಮಲ್ಕ ವಜೀರಾ"[೩೬]

ಎಂದು ಹಾಡಿ ಹೊಗಳಿದ ಉಲ್ಲೇಖಗಳು ಕಂಡುಬರುತ್ತವೆ. ಈ ಎಲ್ಲ ಮೂಲಾಂಶಗಳ ಹಿನ್ನೆಲೆಯಲ್ಲಿ ಆಕರ ದೃಷ್ಟಿಯಿಂದ ಹಂಡೆ ಅರಸರ ಕುರಿತಾದ ಕೈಫಿಯತ್ತುಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**ಅನಂತಪುರ ಕೈಫಿಯತ್ತು**

ಅನಂತಪುರ ಕೈಫಿಯತ್ತು ರಚನೆಯಾಗುವುದಕ್ಕಿಂತ ಪೂರ್ವದಲ್ಲಿ ಅಂದರೆ ಕ್ರಿ.ಶ. ೧೭೫೦ರಿಂದ ೧೮೧೦ರಲ್ಲಿನ ತೆಲುಗಿನ ಹಸ್ತಪ್ರತಿಗಳಲ್ಲಿದ್ದ ಹಂಡೆ ಅರಸರ ವಿವರಗಳನ್ನು ೧೮೫೩ರಲ್ಲಿ ಸಿ.ಪಿ ಬ್ರೌನ್ ಅನುವಾದ ಮಾಡಿ "ದಿ ವಾರ್ ಆಫ್ ದಿ ರಾಜಾಸ್" ಎಂಬ ಕೃತಿಯನ್ನು ಹೊರತಂದಿದ್ದಾರೆ. ಈ ಕೃತಿಯ ಕನ್ನಡ ಅನುವಾದ "ಬುಕ್ಕರಾಯ ಚರಿತ್ರೆ" ಎಂಬ ಹೆಸರಿನಲ್ಲಿ ಪ್ರಕಟವಾಗಿದೆ. ಆದರೆ ಅನಂತಪುರದ ಕೈಫಿಯತ್ತನ್ನು ಇದು 'ಕರ್ನಾಟಕ ಕೈಫಿಯತ್ತು' ಎಂಬ ಕೃತಿಯಲ್ಲಿ ಪ್ರಕಟಿಸಲಾಗಿಲ್ಲ. ಮುಖ್ಯವಾಗಿ ಮೈಸೂರು ಓರಿಯಂಟಲ್ ಲೈಬ್ರರಿಯ

ಸಂಗ್ರಹದಲ್ಲಿರುವ ಈ ಹಸ್ತಪ್ರತಿ(ಕೆ.ಎ.೧೨೭ ಪ್ರಕಾರ-ಗದ್ಯ ಹಸ್ತಪ್ರತಿ ಉದ್ದ ೧೩, ಅಗಲ ೮.೧ ಪತ್ರ ೧-೨೯ ಗರಿ ೩೩ ಫಂಕ್ತಿ ೩೮ ಅಕ್ಷರ), ಇದರ ಕಾಲ ಕೃತಿಯಲ್ಲಿ ಉಕ್ತವಾದಂತೆ ಶಾಲಿವಾಹನ ಶಕ ೧೭೩೩ ಅಂದರೆ ಕ್ರಿ.ಶ. ೧೮೧೧ ಆಗಿದ್ದು ಇದು ಗದ್ಯ ಪ್ರಕಾರದಲ್ಲಿ ರಚನೆಯಾಗಿದೆ. ಕೃತಿಯ ರಚನಕಾರನ ಹೆಸರು ಗ್ರಂಥದಲ್ಲಿ ಕಂಡುಬಂದಿಲ್ಲ. ಆದರೆ "ಕರ್ನಲ್ ಮನ್ರೋ ಅವರು ಸಿದ್ಧಪ್ಪನಾಯಕನಿಗೆ ನಿಮ್ಮ ಪೂರ್ವಜರ ಕೈಫಿಯತ್ತು ಬರೆದು ಪಟ್ಟಿ ತೆಗೆದುಕೊಂಡು ಬಾಯೆಂದು ಅಪ್ಪಣೆ ಕೊಟ್ಟಿದ್ದರಿಂದ ಅದೇ ಪ್ರಕಾರ ಹಳೆಯ ರೈತರು ನಾಲ್ವರನ್ನು ಕುಳ್ಳಿರಿಸಿ ವಕೀಲ ಕೊತ್ತಚರವುನಿಂದ ಹೊಸಕೆರೆ ಶೀನಪ್ಪ, ಬಾಳಪ್ಪ ರಾಮಣ್ಣನವರ ನರಸಪ್ಪ ದೇಸಾಯಿ ತಿಮ್ಮನವೆಂಕಟಪ್ಪ ಮುಂತಾದವರನ್ನು ಕುಳ್ಳಿರಿಸಿಕೊಂಡು ಪರಂಪರೆಯ ಯಾವತ್ತು ಪೂರ್ವೋತ್ತರ ಬರೆಸಿಕೊಟ್ಟಿದ್ದರಿಂದ ರಾಜ ಶ್ರೀ ಮಂಡ್ರೊ ಸಾಹೇಬರು ಆಧಾರಿಸಿ ತಿಂಗಳು ೧ಕ್ಕೆ ಕಂಠರಾಯ ೭೫ ವರಹ ಸಂಬಳ ನಿಷ್ಕರ್ಷೆ ಮಾಡಿ ಬುಕ್ಕಪಟ್ಟಣದ ಸಮೀಪದಲ್ಲಿ ಇರುವ ಸಿದ್ಧರಾಮಪುರವು ಅವರಿಗೆ ಸಲ್ಲುವ ಉಪಗ್ರಾಮಗಳು ಇದಲ್ಲದೆ ಪ್ರತಿಗ್ರಾಮದಲ್ಲಿ ಯಿದ್ದ ರುಸ್ತುಂ ಜಪ್ತಿಮಾಡಿ ಪೂರ್ವದಲ್ಲಿ ಬರೆದ ಪ್ರಕಾರ ತಿಂಗಳಿಗೆ ಸಂಬಳಕೊಟ್ಟು ರಶೀದಿ ತೆಗೆದುಕೊಳ್ಳುವ ಹಾಗೆ ರಾಜಶ್ರೀ ಮಂಡ್ರೋಲ್ ಸಾಹೇಬರು ಹುಕುಂ ಮಾಡಿ ಸನದ್ದು ಬರೆಸಿ ತಮ್ಮ ಸೈನಿಸಿ ಕೊಟ್ಟರು" ಎಂಬ ವಿವರ ಬುಕ್ಕರಾಯ ಚರಿತ್ರೆಯಲ್ಲಿ ಬರುತ್ತದೆ. ಹೀಗೆ ನಾಲ್ಕಾರು ಜನ ಕೂಡಿ ಈ ವಂಶದ ಚರಿತ್ರೆಯನ್ನು ಬರೆಸಿರುವುದು ಕಂಡುಬರುತ್ತದೆ. ಮೇಲಿನ ಉಲ್ಲೇಖವನ್ನು ಗಮನಿಸಲಾಗಿ ಅನಂತಪುರ ಕೈಫಿಯತ್ತಿನಲ್ಲಿ ರಚನೆಯಾಗಿರುವುದು ಕಂಡುಬರುತ್ತದೆ. ಈ ಹಿಂದೆ ಅನಂತಪುರವನ್ನು ಬುಕ್ಕರಾಯ ಸಮುದ್ರ, ಅನಂತ ಸಾಗರವೆಂತಲೂ ಕರೆದಿರುವುದು ಇಲ್ಲಿ ಗಮನಿಸಬಹುದು.

ಒಟ್ಟಾರೆಯಾಗಿ ಹಂಡೆ ಅರಸುಮನೆತನಕ್ಕೆ ಸಂಬಂಧಿಸಿದಂತೆ ಕುರುಗೋಡು ಕೈಫಿಯತ್ತು, ಬಳ್ಳಾರಿ ಕೈಫಿಯತ್ತು ಹಾಗೂ ಅನಂತಪುರ ಕೈಫಿಯತ್ತುಗಳು ಹಂಡೆ ಅರಸರ ವಂಶಾವಳಿಯ ವಿವರ, ಆಡಳಿತದ ವೈಖರಿ ಹಾಗೂ ಸಾಂಸ್ಕೃತಿಕ ಅಧ್ಯಯನಕ್ಕೆ ಪೂರಕವಾದ ಮಾಹಿತಿ ನೀಡಬಲ್ಲವು. ಹೀಗಾಗಿ ಕೈಫಿಯತ್ತುಗಳನ್ನು ಆಕರ ಸಾಮಗ್ರಿಯನ್ನಾಗಿ ಬಳಸಿಕೊಳ್ಳಲಾಗಿದೆ. ಈ ಕೈಫಿಯತ್ತಿನಲ್ಲಿ ಹಂಡೆ ಅರಸರು ವೀರಶೈವರು, ಲಿಂಗವಂತರು ಅಂತ ದಾಖಲಾಗಿದೆ.

### ಬಳ್ಳಾರಿ ಕೈಫಿಯತ್ತು

ಬಳ್ಳಾರಿ ಹಾಗೂ ಕುರುಗೋಡು ಕೈಫಿಯತ್ತುಗಳಲ್ಲಿ ಹಂಡೆ ಅರಸರ ಬಗ್ಗೆ ಹೆಚ್ಚಾಗಿ ವ್ಯತ್ಯಾಸಗಳು ಕಂಡುಬರುವುದಿಲ್ಲ. ಎರಡೂ ಒಂದೇ ಮಾದರಿಯಲ್ಲಿವೆ. ಮುಖ್ಯವಾಗಿ ಬಳ್ಳಾರಿ ಕೈಫಿಯತ್ತಿನಲ್ಲಿ ಹಂಡೆ ಅರಸರ ಪ್ರಮುಖ ದೊರೆಯಾದ ಬಾಲದ ಹನುಮಪ್ಪನಾಯಕನಿಗೆ

ಬಿಜಾಪುರದ ಸುಲ್ತಾನನಾದ ಆದಿಲ್ ಶಾಹಿಯು "ವಜೀರಪ್ಪನಹ" ಎಂಬ ಬಿರುದು ನೀಡಿದ ವಿವರ ಕಂಡುಬರುತ್ತದೆ. ಈ ಸಂದರ್ಭದಲ್ಲಿ ದಕ್ಷಿಣ ಪ್ರಾಂತದಲ್ಲಿ ಅರಾಜಕತೆ ಇದ್ದುದರಿಂದ ಸೂಕ್ತ ನಾಯಕನಾದ ಹಂಡೆ ಬಾಲದ ಹನುಮಪ್ಪನಾಯಕನ್ನು ಬಂಕಾಪುರದ ಪ್ರದೇಶಕ್ಕೆ ನೇಮಿಸಿದ ಮಾಹಿತಿ ಕಂಡುಬರುತ್ತದೆ. ತರುವಾಯ ಹಂಡೆ ಬಾಲದ ಹನುಮಪ್ಪನಾಯಕನಿಗೂ ಸುಲ್ತಾನನಾದ ಆದಿಲ್‌ಶಾಹಿ ಮಧ್ಯ ಕಲಹಗಳು ಕಂಡುಬಂದುದರಿಂದ ಹನುಮಪ್ಪನಾಯಕನು ಬಳ್ಳಾರಿ ಪ್ರಾಂತಕ್ಕೆ ವಲಸೆ ಬರುತ್ತಾನೆ. ಈ ಮುಖಾಂತರವಾಗಿ ಕುರುಗೋಡು ಹಾಗೂ ತೆಕ್ಕಲಕೋಟೆಗಳಲ್ಲಿ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತಾನೆ. ನಂತರದಲ್ಲಿ ತನ್ನ ಐವರು ಮಕ್ಕಳನ್ನು ಬೇರೆ ಬೇರೆ ಪ್ರಾದೇಶಗಳಿಗೆ ನಿಯೋಜನೆ ಮಾಡಿರುವ ಮಾಹಿತಿಯು ಎರಡು ಕೈಫಿಯತ್ತುಗಳಲ್ಲಿ ಉಲ್ಲೇಖಿಸಿರುವುದು ಕಂಡುಬರುತ್ತದೆ. ಬಳ್ಳಾರಿ ಕೈಫಿಯತ್ತಿನಲ್ಲಿ ಹಂಡೆ ಅರಸುಮನೆತನದ ಆಳ್ವಿಕೆ ಬಗ್ಗೆ ಮಾಹಿತಿಯನ್ನು ಕಾಣಬಹುದು. ಹಂಡೆ ಹನುಮಪ್ಪ ನಾಯಕನಿಂದ ಹಿಡಿದು ತನ್ನ ಐದು ಜನ ಮಕ್ಕಳ ಆಳ್ವಿಕೆಯ ವಿವರದಿಂದ ಹಿಡಿದು ಕೊನೆಯ ಅರಸರವರೆಗೆ ಮಾಹಿತಿ ನೀಡುತ್ತದೆ.

ಈ ಕೈಫಿಯತ್ತಿನ ಪ್ರಕಾರ In the Bellary Gazetter of 1916 balada hanumappanayak was the first palegara of Bellary belonged to the Hande Kuruba caste. ಎಂದು ದಾಖಲಾಗಿದೆ.

**ಕುರುಗೋಡು ಕೈಫಿಯತ್ತು**

ಹಂಡೆ ಅರಸುಮನೆತನಕ್ಕೆ ಸಂಬಂಧಿಸಿದಂತೆ ಮೂಲ ಆಕರ ಸಾಮಗ್ರಿಯಲ್ಲಿ ಕೈಫಿಯತ್ತು ಮಹತ್ವದಾಗಿದೆ. ಬಳ್ಳಾರಿ ಕೈಫಿಯತ್ತು, ಕುರುಗೋಡು ಕೈಫಿಯತ್ತು ಹಾಗೂ ಅನಂತಪುರದ ಕೈಫಿಯತ್ತುಗಳು ಪ್ರಮುಖವಾಗಿವೆ. ಕುರುಗೋಡು ಕೈಫಿಯತ್ತಿನಲ್ಲಿ ಉಲ್ಲೇಖವಾದ ಸ್ವರೂಪವನ್ನು ಗಮನಿಸಲಾಗಿ ಬಿಜಾಪುರದ ಅಲಿ ಆದಿಲ್‌ಶಾಹಿಯ ಸೀಮೆಯ ಮುತ್ತಗಿ ಎಂಬ ಗ್ರಾಮದಲ್ಲಿ ಹಂಡೆ ಹನುಮಪ್ಪನಾಯಕನು ಸರದಾರನಾಗಿ ಆಳ್ವಿಕೆ ನಡೆಸುತ್ತಿದ್ದನು. ಮುಂದೆ ಬಾದಶಹನ ಅಧೀನಕ್ಕೆ ಒಳಪಟ್ಟು ಅವನಿಂದ 'ವಜೀರವರು' ಎಂಬ ಬಿರುದು ಪಡೆದುಕೊಳ್ಳುತ್ತಾನೆ.

ಕುರುಗೋಡು ಕೈಫಿಯತ್ತು ಹಂಡೆ ಬಾಲದ ಹನುಮಪ್ಪನಾಯಕನಿಗೆ ಐದು ಜನ ಮಕ್ಕಳಿರುವುದರ ಬಗ್ಗೆ ಮಾಹಿತಿ ನೀಡುತ್ತದೆ. ಈ ಐದು ಜನ ನಾಯಕರ ಬಗ್ಗೆ 'ಭಟಾಂಗಿನಿ' ಸಾಹಿತ್ಯವು

ಅಂಕುಶರಾಯನನ್ನು ಬಹುಧರ್ಮಿಷ್ಟ,

ದ್ಯಾಮಣ್ಣನಾಯಕನು ಬಹುಪರಾಕ್ರಮಿ.

ನಿಚ್ಚಮದುವಣಿಗ ರಾಮಪ್ಪನಾಯಕ ಬಹುಭೋಗಿ

ಹಿರೇಮಲ್ಕಪ್ಪನಾಯಕ ಹಾಗೂ ಚಿಕ್ಕಮಲ್ಕಪ್ಪನಾಯಕ ಇವರುಗಳನ್ನು ಪ್ರಸಿದ್ಧ ಪುರುಷರೆಂದು[೩೭] ಹೊಗಳುತ್ತದೆ. ಹೀಗೆ ಕುರುಗೋಡು ಕೈಫಿಯತ್ತಿನ ಉಲ್ಲೇಖದ ಪ್ರಕಾರ ಬಾಲದ ಹನುಮಪ್ಪ ನಾಯಕನು ತನ್ನ ಐದು ಮಂದಿ ಮಕ್ಕಳನ್ನು ಕರೆದುಕೊಂಡು ಬಿಜಾಪುರದ ಸುಲ್ತಾನನಾದ ಅಲಿ ಆದಿಲ್‌ಶಾಹಿ ಕಡೆ ಭೇಟಿಯಾಗಲು ಹೋಗುತ್ತಾನೆ. ಬಾಲದ ಹನುಮಪ್ಪನಾಯಕನ ಮಕ್ಕಳು ಬಹು ಪರಾಕ್ರಮಿ, ಬಲಾಢ್ಯರಾಗಿದ್ದು ಮತ್ತು ಸೌಂದರ್ಯರಾಗಿದ್ದು ಇವರನ್ನು ಗಮನಿಸಿದ ಬಾದಶಾಹನು "ಈ ಮಕ್ಕಳೊಳಗೆ ಒಬ್ಬನನ್ನು ನಂಗೆ ಕೊಡು ಎಂದು ಕೇಳಿದನು. ಸುಲ್ತಾನನ ಮಾತನ್ನು ಗಮನಿಸಿದ ಬಾಲದ ಹನುಮಪ್ಪನಾಯಕನು ಕೋಪಗೊಂಡು ನಿಮ್ಮ ಜನನಿ ಒಳಗೆ ಒಬ್ಬ ಹೆಂಗಸನ್ನು ಕೊಟ್ಟರೆ ಈ ತರಹದ ಒಬ್ಬನನ್ನು ಹುಟ್ಟಿಸಿ ಕೊಡುತ್ತೇನೆ" ಎಂದು ಹೇಳಿ ಅಲ್ಲಿಂದ ತನ್ನ ಸೈನ್ಯಸಹಿತವಾಗಿ ವಿಜಾಪುರದ ಬಿಟ್ಟು ಕೃಷ್ಣಾನದಿ ಮೂಲಕ ಬಳ್ಳಾರಿ ಪ್ರಾಂತದ ಕಡೆ ಬಂದಿರುವ ಕುರಿತು ಮಾಹಿತಿ ದೊರಕುತ್ತದೆ.

ಹಂಡೆ ಬಾಲದ ಹನುಮಪ್ಪ ನಾಯಕನು ಈ ಪ್ರದೇಶಕ್ಕೆ ಬಂದು ರಾಜ್ಯವನ್ನು ವಿಸ್ತರಿಸಿ ತನ್ನ ಮಕ್ಕಳಿಗೆ ಕೆಲವೊಂದು ಪ್ರದೇಶಗಳ ನಾಯಕತ್ವ ವಹಿಸಿದ. ಅಂಕುಶರಾಯನು ನಂದ್ಯಾಲಾ, ಶಿರವಾಳ ಪ್ರಾತಕ್ಕೆ ಹಿರೇಮಲ್ಕಪ್ಪನಾಯಕ, ಅನಂತಪುರ ಧರ್ಮವರ ಪ್ರಾಂತಕ್ಕೆ ನಿಚ್ಚಮದುವಣಿಗ, ರಾಮಪ್ಪನಾಯಕನು ರಾಯದುರ್ಗದ ಸೀಮೆ ಮತ್ತು ಕುಂದರ್ಪಿ ಗ್ರಾಮಗಳನ್ನು, ದ್ಯಾಮಣ್ಣನಾಯಕ, ಚಿಕ್ಕಮಲ್ಲಪ್ಪನಾಯಕನನ್ನು ಬಳ್ಳಾರಿ ಕುರುಗೋಡು, ತೆಕ್ಕಲುಕೋಟೆ, ಸಿರುಗುಪ್ಪಿ ಕಣೆಕಲ್ಲು ರೂಪನಗುಡಿ, ವಡ್ಡು, ದರೋಜಿ ಮುಂತಾದ ಪ್ರಾಂತಗಳ ಆಳ್ವಿಕೆ ನಡೆಸುವುದರ ಬಗ್ಗೆ ಮಾಹಿತಿಯು ದೊರಕುತ್ತದೆ.

ಪವಾಡಪ್ಪನಾಯಕನು ಕುರುಗೋಡು ಪ್ರಾಂತದಲ್ಲಿ ನಾಲ್ಕು ವರ್ಷಗಳ ಕಾಲ ಆಳ್ವಿಕೆ ನಡೆಸಿದ. ಇತನಿಗೆ ಜನಸಾಮಾನ್ಯರ ಬಗ್ಗೆ ಅನುಕಂಪವಿಲ್ಲದ ಕಾರಣ ಹಾಗೂ ದುರ್ದಶೆಯಿಂದ ಬೇಗನೆ ಮರಣ ಹೊಂದಿದ. ಪವಾಡಪ್ಪನಾಯಕನ ಚಿಕ್ಕಪ್ಪ ಚಿಕ್ಕಮಲ್ಕಕಪ್ಪನಾಯಕನ ಮಗ ಚಿಕ್ಕನಾಯಕ ಸಾಹೇಬ ಬಳ್ಳಾರಿಯಲ್ಲಿ ದೊರೆತನ ಮಾಡಿಕೊಂಡು ಇದ್ದನು. ಕಣೆಕಲ್ಲು, ರೂಪನಗುಡಿ, ವಡ್ಡು, ದರೋಜಿ ಫೌಜುದಾರಿಕೆಯಿಂದ ಕೊಟ್ಟಿದ್ದವು. ಹೀಗೆ ಜಾಗೀರಿ ಗ್ರಾಮಗಳ ಮೂಲಕ ಬಳ್ಳಾರಿ ಹಾಗೂ ತೆಕ್ಕಲುಕೋಟೆಯಲ್ಲಿ ಚಿಕ್ಕನಾಯಕ ಸಾಹೇಬನ ದೊರೆತನ ಹೆಚ್ಚಾಗಿದ್ದದ್ದು ಕಾಣಬಹುದು.

ದ್ಯಾಮಪ್ಪನಾಯಕನು ಕುರುಗೋಡು ಠಾಣ್ಯ ಹಾಕಿದ ಮಾಹಿತಿ ಶಾಸನಗಳ ಸನ್ನದು ಹಾಕಿದ ಮಾಹಿತಿ. ಉಮ್ಮಳಿ ಗ್ರಾಮ ಸೋಮಸಮುದ್ರಗಳಲ್ಲಿ ಜಾಮೀದಾರರಿಗೆ ತಮ್ಮ ಅಧಿಕಾರದ ಕೆಲಸ ಹೋದುದರಿಂದ ಮನಸ್ಸಿನಲ್ಲಿ ವಿಕಲ್ಪ ಹುಟ್ಟಿ ವಂದಾವರ್ತಿ ನಾಡಕುಲಕರ್ಣಿ ತಿಮ್ಮಪ್ಪಯೆಂಬವನು ಗುಡೆಕೋಟೆಗೆ ಹೋಗಿ ಅಲ್ಲಿ ಸಂಸ್ಥಾನಿಕರ ಆಶ್ರಯ ಮಾಡಿದನು. ಮುಂದೆ ಕುರುಗೋಡು ಕೋಟೆ ದೊಡ್ಡದೆಂದು ಅದನ್ನು ನಿಭಾಯಿಸಲಾರದು ಎಂದು ಈ ದುರ್ಗಕ್ಕೆ ಪೂರ್ವಭಾಗವಾದ ಯರ್ರದುರ್ಗದ ಗುಡ್ಡಕ್ಕೆ ಕಿಲ್ಲೆ ಕಟ್ಟಿಸುವುದರ ಮೂಲಕ ಪ್ರಾರಂಭ ಮಾಡುತ್ತಾನೆ. ದ್ಯಾಮಪ್ಪನಾಯಕನು ಕುರುಗೋಡು ಠಾಣ್ಯ ಹಾಕಿಸಿ ಯರ್ರದುರ್ಗದ ಮೇಲೆ ಎರಡು ಬುರುಜು ಕಟ್ಟಿಸಿದನು. ಕೈಫಿಯತ್ತಿನ ಉಲ್ಲೇಖದ ಪ್ರಕಾರ ದ್ಯಾಮಪ್ಪನಾಯಕನಿಗೆ ಇಬ್ಬರು ಹೆಂಡರು, ಮೊದಲ ಹೆಂಡತಿ ಪದ್ಮಮ್ಮ ಮತ್ತು ಎರಡನೇ ಹೆಂಡತಿ ನೀಲಮ್ಮ. ಪದ್ಮಮ್ಮನಿಗೆ ಮೂವರು ಗಂಡು ಮಕ್ಕಳು ಹಿರೇರಾಮಪ್ಪನಾಯಕ, ಹನುಮಪ್ಪನಾಯಕ ಮತ್ತು ಚಿಕ್ಕರಾಮಪ್ಪನಾಯಕ ಎಂಬುವವರು. ನೀಲಮ್ಮಳಿಗೆ ಸಂತಾನವಿಲ್ಲ. ಪದ್ಮಮ್ಮನ ಮಕ್ಕಳು ಅಥವಾ ದ್ಯಾಮಪ್ಪನಾಯಕನ ಪುತ್ರರು ಪ್ರಾಂತವನ್ನು ಹಂಚಿಕೊಂಡ ವಿವರ ಹಿರೇರಾಮಪ್ಪನಾಯಕ ಬಳ್ಳಾರಿ ಸೀಮೆ, ಹನುಮಪ್ಪನಾಯಕ ಕುರುಗೋಡು ಸೀಮೆ ಹಾಗೂ ಚಿಕ್ಕರಾಮಪ್ಪನಾಯಕನು ತೆಕ್ಕಲುಕೋಟೆಗಳಲ್ಲಿ ಆಳ್ವಿಕೆ ನಡೆಸಿದರು.

ದ್ಯಾಮಪ್ಪನಾಯಕನ ಮಕ್ಕಳಿಗೆ ಸಂತಾನವಿಲ್ಲದ ಕಾರಣ ಇವನ ಚಿಕ್ಕ ಹೆಂಡತಿಯಾದ ನೀಲಮ್ಮಳು ಅವರ ಸಂಬಂಧಿಕರ ಮೂಲದಿಂದ ಪೂರ್ವದ ಹಂಡೆ ಹನುಮಪ್ಪನಾಯಕನ ಹಿರೇಮಗನಾದ ಅಂಕುಶರಾಯನಿಗೆ ನಂದ್ಯಾಲ, ಶಿರಿವಾಳದ ದೊರೆತನ ಕೊಟ್ಟರು. ಅವರ ಸಂತತಿಯವನಾದ ಶಿದ್ಧಪ್ಪ ಪ್ರಸನ್ನಪ್ಪ ಎಂಬುವವರು ಬಳ್ಳಾರಿಗೆ ಪೂರ್ವ ಭಾಗದಲ್ಲಿ ಹುದ್ರಾಳು ಎಂಬ ಗ್ರಾಮವನ್ನು ಖರ್ಚುವೆಚ್ಚಕ್ಕೆ ಬಳ್ಳಾರಿ ಅವರ ಕಡೆಯಿಂದ ತೆಗೆದುಕೊಂಡು ವ್ಯವಸಾಯ ಮಾಡಿಕೊಂಡು ಇದ್ದರು. ಆ ಶಿದ್ಧಪ್ಪನಿಗೆ ಇಬ್ಬರು ಮಕ್ಕಳು. ಕ್ರಮವಾಗಿ ದೊಡ್ಡತಲೆರಾಮಪ್ಪನಾಯಕ ಹಾಗೂ ಹನುಮಪ್ಪನಾಯಕ ಇಬ್ಬರು ಬಳ್ಳಾರಿ ಕುರುಗೋಡು ಹಾಗೂ ತೆಕ್ಕಲಕೋಟೆ ಈ ಮೂರು ಸ್ಥಳಗಳಿಗೆ ಪಟ್ಟಾಭಿಷೇಕವನ್ನು ಮಾಡಿದರು. ಈ ಸಂದರ್ಭದಲ್ಲಿ ದೊಡ್ಡತಲೆರಾಮಪ್ಪ ನಾಯಕನಿಗೆ ಹತ್ತು ವರ್ಷ ಆದ್ದರಿಂದ ನೀಲಮ್ಮನು ಸಂಬಂಧಿಕರನ್ನು ಇಟ್ಟುಕೊಂಡು ಮೂರು ವರ್ಷ. ಆಳ್ವಿಕೆ ನಡೆಸಿದಳು. ಮುಂದೆ ರಾಮಪ್ಪನಾಯಕನ ತಂದೆ ಶಿದ್ಧಪ್ಪನಾಯಕ ಆತನ ತಮ್ಮ ಪ್ರಸನ್ನನಾಯಕನನ್ನು ಶಿರಶ್ಛೇದ ಮಾಡಿಸಿದಳು. ಈ ಮೂಲಕ ರಾಜಕೀಯ ಕುತಂತ್ರವನ್ನು ಬಳಸಿದಳು. ತಂತ್ರಗಾರಿಕೆಯ ಹಿನ್ನೆಲೆಯಲ್ಲಿ ನೀಲಮ್ಮಳ ಶಿರಶ್ಛೇದವನ್ನು ಬಳ್ಳಾರಿಯಲ್ಲಿ ಮಾಡಿದರು. ಮುಂದೆ ದೊಡ್ಡತಲೆರಾಮಪ್ಪನಾಯಕನು ಆನೆಗುಂದಿ ಅರಸ ವೀರವೆಂಕಟ ಪತಿರಾಯನ ಮಗ

ತಿಮ್ಮಪ್ಪಯ್ಯರಾಯನ ವಿರುದ್ಧ ಹೋರಾಡಿ ಕೆಲವು ಗ್ರಾಮಗಳನ್ನು ಠಾಣ್ಯ ಹಾಕಿಕೊಂಡಿದ್ದನು. ಹೀಗೆ ದೊಡ್ಡತಲೆರಾಮಪ್ಪನಾಯಕನು ಆಳ್ವಿಕೆ ಮಾಡಿದ ಪ್ರಸಂಗಗಳನ್ನು ಕೈಫಿಯತ್ತಿನಲ್ಲಿ ಉಲ್ಲೇಖಿಸಲಾಗಿದೆ.

ಕುರುಗೋಡು ರಾಮಪ್ಪನಾಯಕನ ಹೆಂಡತಿ ಶಿದ್ಧಮ್ಮ, ಹನುಮಪ್ಪನಾಯಕನ ಹೆಂಡತಿ ಪದ್ಮಮ್ಮ ಈ ಇಬ್ಬರು ಸಂಬಂಧಿಕರು ಸೇರಿಕೊಂಡು ನಮ್ಮ ಸಂತತಿ ಅವರು ಇಲ್ಲದೆ ಹೋದರು. ಮುಂದೆ ಈ ದೊರೆತನಕ್ಕೆ ಒಬ್ಬನ್ನನಾದರೂ ನೇಮಕ ಮಾಡಬೇಕೆಂಬ ಮಸಲತ್ತು ನಡೆಸಿದರು. ಹನುಮಪ್ಪನಾಯಕನ ಭಾವಮೈದುನನ ಮಗ ಆರು ವರುಷದ ಕೂಸಿಗೆ ದ್ಯಾಮಪ್ಪನಾಯಕ ಎಂಬ ಹೆಸರನ್ನು ಇಟ್ಟುಕೊಂಡು ದೊರೆತನ ಮಾಡಿದರು. ಮುಂದೆ ಕೆಂಚನಗುಡ್ಡದಲ್ಲಿ ಸಿದ್ಧಮ್ಮ ಮತ್ತು ಪದ್ಮಮ್ಮ ತಮ್ಮ ಸಂಬಂಧಿಕರನ್ನು ಕರೆಸಿ ದೊಡ್ಡಪ್ಪನಾಯಕನ ದೊರೆತನ ಮಾಡಿಸಲು ಅನಂತಪುರದಿಂದ ಹಂಡೆವಂಶಸ್ಥರ ಪ್ರಸನ್ನಪ್ಪನಾಯಕನ ವಂಶಸ್ಥರಲ್ಲಿ ಹುಡುಗನನ್ನು ತೆಗೆದುಕೊಂಡು ಬಂದು ಕುರುಗೋಡಿನಲ್ಲಿ ಪಟ್ಟ ಕಟ್ಟಿಸಿದರು. ಆತನು ಪ್ರಸನ್ನರಾಮಪ್ಪನಾಯಕನು ಮುಂದೆ ಕುರುಗೋಡಿನಲ್ಲಿ ದೊರೆತನ ಮಾಡಿದನು. ಇತ್ತ ಬಳ್ಳಾರಿಯಲ್ಲಿ ದೊಡ್ಡಪ್ರಸನ್ನಪ್ಪನಾಯಕನ ದೊರೆತನ ಇತ್ತು. ದೊಡ್ಡಪ್ಪನಾಯಕನು "ಕುರುಗೋಡು ತನ್ನ ಸ್ವಾಧೀನ ಮೀರಿತು ಎಂದು ತಿಳಿದನು. ಪ್ರಸನ್ನರಾಮಪ್ಪ ನಾಯಕನು ಮತ್ತು ದೊಡ್ಡಪ್ಪನಾಯಕನು ಆಳ್ವಿಕೆ ನಡೆಸಿದ ವಿವರವನ್ನು ಕುರುಗೋಡು ಕೈಫಿಯತ್ತಿನಲ್ಲಿ ಉಲ್ಲೇಖಿತವಾಗಿದೆ.

### ಬುಕ್ಕರಾಯ ಸಮುದ್ರಂ ಮತ್ತು ಅನಂತಪುರ ಎರಡು ಗ್ರಾಮಗಳ ಕೆರೆಯ ಕೈಫಿಯತ್ತು

ಮೆಕಂಜಿಯವರು ಶೋಧಿಸಿದ ಐತಿಹಾಸಿಕ ಸಂಗ್ರಹಗಳಲ್ಲಿಯ 'ಅರಸರ ಯುದ್ಧಗಳು' ಕೃತಿಯಿಂದ ಮೂಲ ಸ್ಥಾನಿಕ ಅರಸರ ವಂಶಾವಳಿಯ ಬರಹ. ಕ್ರಿ.ಶ. ೧೯೨೦ರಲ್ಲಿ ಮರುಮುದ್ರಣಗೊಂಡು ಅಪ್ಪರಾವ ಗುರುಜಾಡು ಸಂಪಾದನೆಯ, "ಹಂಡೆ ಅನಂತಪೂರಂ ಸ್ಥಾನಿಕ ಚರಿತ್ರೆ" ಎಂಬ ಗ್ರಂಥದಲ್ಲಿ ಬುಖ್ಖರಾಯ ಸಮುದ್ರಂ ಮತ್ತು ಅನಂತಪೂರ ಎರಡು ಗ್ರಾಮಗಳ ಕೆರೆಯ ಕೈಫಿಯತ್ತು ತೆಲಗು ಮತ್ತು ಆಂಗ್ಲ ಭಾಷೆಯಲ್ಲಿ ಮುದ್ರಣಗೊಂಡಿದೆ.

ಗಾರ್ಗೆಯ ಎಂಬ ಸಂತನ ಹೆಸರಿನ ಆ ಗ್ರಾಮವು ಪೋರುರು ಗ್ರಾಮದಲ್ಲಿ ನಂದವರಿಕಾ ಬ್ರಾಹ್ಮಣ ಕುಟುಂಬದ ಥಾಕರಾಜು ಮತ್ತು ಅವನ ಪತ್ನಿ ಮೆಲಮ್ಮ ದಂಪತಿಗಳಿಗೆ ಚಿಕ್ಕಪ್ಪ ಎಂಬ ಪುತ್ರ ನಿದ್ದನು. ಥಾಕರಾಜು ಮರಣದ ನಂತರ ಮೆಲಮ್ಮ ಆ ಊರನ್ನು ಬಿಟ್ಟು ತಮ್ಮ ಹೊಟ್ಟೆ ಪಾಡಿಗಾಗಿ ಮಗನೊಂದಿಗೆ ವಿಜಯನಗರಕ್ಕೆ ಹೋದಳು. ಒಂದು ದಿನ ತನ್ನ ಮಗನ್ನು ಕೊದಂಡಸ್ವಾಮಿ ಮಂದಿರದಲ್ಲಿ ಬಿಟ್ಟು ಕೆಲಸವನ್ನು ಹುಡುಕಲಿಕ್ಕೆ ಹೊದಳು ಮಗು ದೇವಾಲಯದ

ಮುಂದೆ ನೆಲದ ಮೇಲೆ ಮಲಗಿತ್ತು. ಆಗ ಹುತ್ತಿನಿಂದ ಹೊರ ಬಂದ ಖಳಿಂಗ ಸರ್ಪ ತನ್ನ ಹೆಡೆಯನ್ನು ಬಿಚ್ಚಿ ಆ ಮಗುವಿನ ಮುಖದ ಮೇಲೆ ಬಿಸಿಲು ಬೀಳದಂತೆ ಹೆಡೆಯೆತ್ತಿ ನಿಂತಿತು. ಆಗ ಜನರೆಲ್ಲಾ ಭಯ ಬಿತಿಗೊಂಡು ಸರ್ಪ ಮಾಂತ್ರಿಕ ನಾಗಬೋಗಿ ಎಂಬವನನ್ನು ಕರೆತರಲು ಅದೆ ಸಮಯದಲ್ಲಿ ಆ ಹುಡುಗ ಎಚ್ಚರವಾಗಲು ಹಾವು ಸರಿದು ಹೋಯಿತು. ಆ ನಾಗಬೋಗ ಮಾಂತ್ರಿಕ ಮಗುವನ್ನು ಅಪ್ಪಿಕೊಂಡು ನೀನು ಮುಂದೆ ಶ್ರೇಷ್ಠ ವ್ಯಕ್ತಿ ಆದನಂತರ ನನಗೆನು ಕೊಡುವೆ ಎಂದು ಕೇಳಲು, ಚಿಕ್ಕಪ್ಪ ಮುಂದೆ ನಾನು ಭೂ ಶೋಧನೆ ಮಾಡಿ ದೊಡ್ಡ ಕೆರೆ ಹಾಗೂ ಗ್ರಾಮಗಳನ್ನು ನಿಮ್ಮ ಹೆಸರಿನಿಂದ ಕಟ್ಟಿಸುವೆ ಎಂದು ಉತ್ತರಿಸುತ್ತಾನೆ.

ಬುಕ್ಕರಾಜರ ಮುಖ್ಯಮಂತ್ರಿಯಾದ ನಾರಯಣಪ್ಪನ ಮನೆಯಲ್ಲಿ ಮನೆಗೆಲಸಕ್ಕೆಂದು ಮೆಳಮ್ಮ ಸೇರಿಕೊಂಡಳು ಮೆಳಮ್ಮನ ಮಗ ಚಿಕ್ಕಪ್ಪನನ್ನು ನಾರಾಣಪ್ಪ ಮಂತ್ರಿಯೇ ಸಾಕಿ ಬೆಳಸಿದನು ಒಂದು ದಿನ ಬುಕ್ಕರಾಜರು ದೆಹಲಿ ಸಾಮ್ರಾಟನಿಂದ ಮದ್ಯರಾತ್ರಿಯಲ್ಲಿ ಒಂದು ಆಜ್ಞಾಪತ್ರವನ್ನು(ರಾಯಸವನ್ನು) ಪಡೆದರು. ಆ ಸಮಯದಲ್ಲಿ ಬರಹಗಾರರು ಯಾರೊಬ್ಬರು ಇಲ್ಲದ ಕಾರಣ, ರಾಜ ಕೆಲ ಸೇವಕರನ್ನು ಮತ್ತು ಬರಹಗಾರರನ್ನು ಕರೆತನ್ನಿ ಎಂದು ಕಳುಹಿಸಿದನು. ಸೈನಿಕರು ನಾರಯಣಪ್ಪ ಮಂತ್ರಿಯ ಮನೆಯ ಮುಂದಿನ ಕಛೇರಿಯಲ್ಲಿ ಮಲಗಿದ್ದ ಈ ಚಿಕ್ಕಪ್ಪನನ್ನು ಎಬ್ಬಿಸಿ ಬುಕ್ಕರಾಜನ ಮುಂದೆ ನಿಲ್ಲಿಸಿದರು. ಆ ಚಿಕ್ಕಪ್ಪ ರಾಯಸವನ್ನು ಓದಿ ಸವಿಸ್ತಾರವಾಗಿ ಬುಕ್ಕರಾಜನಿಗೆ ಹೇಳಲು ರಾಜ ಹರ್ಷಿತನಾದನು. ಮರು ದಿವಸ ಆ ರಾಯಸಕ್ಕೆ ಉತ್ತರ ಕೊಡಬೆಕಾಗಿದ್ದ ಬುಕ್ಕರಾಜನು ರಾಯಸವನ್ನು ಹುಡುಕಲು ಸಿಗಲಿಲ್ಲ. ಆಗ ಮತ್ತೆ ಆ ಚಿಕ್ಕಪ್ಪನನ್ನು ಕರೆತರಲು, ಓದಿದ ಪರಮಾನಿನ ರಾಯಸವನ್ನು ಮತ್ತೊಮ್ಮೆ ಬರೆದನು. ಮುಂದೆ ಆ ಮೊದಲಿನ ಮೂಲ ರಾಯಸದ ಪರಮಾನು ಬುಕ್ಕರಾಜನ ಶಯಾಗ್ರಹದ ತುಂಡಿನ ಮೇಲಿದ್ದುದ್ದನ್ನು ಬುಕ್ಕರಾಜ ನೋಡಿ ಆ ಪರಮಾನಿಗು, ಚಿಕ್ಕಪ್ಪ ಸ್ಮರಣೆಯಿಂದ ಬರೆದ ಪರಮಾನಿಗೂ ಯಾವ ವ್ಯತ್ಯಾಸವು ಕಾಣಲಾಗಿ ಬುಕ್ಕರಾಜನು ಅತೀವ ಆನಂದಿತನಾಗಿ ಆ ಚಿಕ್ಕಪ್ಪನನ್ನು ಮಂತ್ರಿಯನ್ನಾಗಿ ನೇಮಿಸಿಕೊಂಡು ಅವನಿಗೆ "ಒಡೆಯರ" ಎಂದ ಬೀರುದಾಂಕಿತ ವನಿತ್ತನು.

ಬುಕ್ಕರಾಜರು ದಂಡಯಾತ್ರೆಗೆ ಹೋಗುವಾಗ ಎಲ್ಲಾ ಆಡಳಿತವನ್ನು ಈ ಚಿಕ್ಕಪ್ಪಗೆ ಒಪ್ಪಿಸುತ್ತಿದ್ದರು. ರಾಜರು ಇರದಾಗ ಆಡಳಿತದ ವೆಚ್ಚಕ್ಕೆ ಚಿಕ್ಕಪ್ಪನಿಗೆ ಮಹಾರಾಣಿಯವರು ಮುಂಗಡವಾಗಿ ಒದಗಿಸುತ್ತಿದ್ದರು. ಆದರೆ ಆ ಚಿಕ್ಕಪ್ಪ ಆ ಹಣ ಖರ್ಚುಮಾಡದೆ ಇಡುತ್ತಿದ್ದನು. ಯಾವಾಗ ರಾಜ ದಂಡಯಾತ್ರೆಯಿಂದ ಮರಳಿ ಬಂದಾಗ ಈ ಚಿಕ್ಕಪ್ಪನ ಮೇಲೆ ಬಹಳ ಆನಂದಿತನಾಗಿ ನಿನಗೆ ಆ ಎಲ್ಲಾ ಹಣವನ್ನು ಕಾಣಿಕೆಯಾಗಿ ಕೊಡುವೆ ಎಂದು ಹೆಳಲು, ಆಗ

ಚಿಕ್ಕಪ್ಪ ರಾಜರಿಗೆ ವಿನಂತಿಸಿಕೊಂಡು ಅದೆಲ್ಲವನ್ನು ಖಜಾನೆಗೆ ಕೊಟ್ಟನು. ಮುಂದೆ ಸರಿಯಾದ ಸ್ಥಳ ಈ ಚಿಕ್ಕಪ್ಪ ಶೊಧಿಸಿ ಆ ಹಣದಿಂದ ಕೆರೆ ಮತ್ತು ಗ್ರಾಮಗಳನ್ನು ಕಟ್ಟಿಸಲು ಯೋಚಿಸಿದನು.

ಈ ಚಿಕ್ಕಪ್ಪ ಒಡೆಯ ವಿಜಯನಗರದ ಪೂರ್ವರಾಜ್ಯದಲ್ಲಿ ಸಂಚರಿಸುವಾಗ ದಾರಿಯಲ್ಲಿ ಎರಡು ಗುಡ್ಡಗಳ ನಡುವೆ ಹರಿಯುವ ನದಿಗೆ ಕೆರೆ ಕಟ್ಟಿಸಿ ಅದಕ್ಕೆ ನಾಗಸಮುದ್ರಂ ಎಂದು ಹೆಸರಿಸಿ ಮುಂದೆ ತನ್ನ ಬಾಲ್ಯದ ಘಟನೆಯನ್ನು ಸ್ಮರಿಸಿಕೊಂಡು ಸರ್ಪಮಾಂತ್ರಿಕನ ಹೆಸರಿನಿಂದ ನಾಗಭೊಗಿ ಎಂದು ನಾಮಕರಣ ಮಾಡಿದನು.

ಮುಂದೆ ಈ ಚಿಕ್ಕಪ್ಪ ಒಡೆಯರ ಕ್ರಿ.ಶ.೧೩೬೪ರಲ್ಲಿ ತೆಂಕಲು ಪ್ರಾಂತ್ಯದ ನಂದೆಲ ತಾಲೂಕಿನ ದೇವರು ಗುಡ್ಡದ ಹತ್ತಿರ ಹರಿಯುತ್ತಿದ್ದ ಪಾಂಡುನದಿಯನ್ನು ನೋಡಿ ಆ ದೇವರು ಗುಡ್ಡದ ಬೇಟ್ಟಕ್ಕೆ ಅಡ್ಡಗಟ್ಟಿ ಒಂದು ತಟಾಕೆ ನಿರ್ಮಾಣ ಮಾಡಿಸಿ, ವಿಶಾಲವಾದ ಕೆರೆ ಕಟ್ಟಿಸಿ ಇದರ ಒಂದು ಬದಿಯಲ್ಲಿ ಗ್ರಾಮವನ್ನು ಕಟ್ಟಿಸಿ ತನ್ನ ದೊರೆಯ ಹೆಸರಿನಿಂದ ಬುಕ್ಕರಾಯ ಸಮುದ್ರಂ ಅಂತ ನಾಮಕರಣ ಮಾಡಿ, ಆ ಕೆರೆಯ ಮತ್ತೊಂದು ಬದಿಯಲ್ಲಿ ಇನ್ನೊಂದು ಗ್ರಾಮ ಕಟ್ಟಿಸಿ ತನ್ನ ದೊರೆಸಾನಿ ಹೆಸರಿನಿಂದ ಅನಂತಸಾಗರವೆಂದು ನಾಮಕರಣ ಮಾಡಿ ಆ ದೇವರಗುಡ್ಡ ಬೆಟ್ಟದಲ್ಲಿ ಶ್ರೀ ವೆಂಕಟೇಶ್ವರ ದೇವಾಲಯ ಕಟ್ಟಿಸಿ ಶಾಸನ ಹಾಕಿಸುತ್ತಾನೆ.

ಮುಂದೆ ಕ್ರಿ.ಶ ೧೫೬೭ರಲ್ಲಿ ವಿಜಯನಗರದ ಚಕ್ರವರ್ತಿ ಆಳಿಯ ರಾಮರಾಯನ ಕಾಲದಲ್ಲಿ ಕೆರೆಯನ್ನು ಒಳಗೊಂಡ ಈ ಎರಡು ಗ್ರಾಮಗಳು ವಿಜಯನಗರದ ಸಾಮಂತರಾಜ ಹಂಡೆ ಹನುಮಪ್ಪನಾಯಕನ ಆಳ್ವಿಕೆಗೆ ಒಳಪಡುತ್ತವೆ. ಮುಂದೆ ಹಂಡೆ ಅರಸರಿಂದ ಈ ಕೆರೆ ಬೃಹತ್ತಾಕಾರವಾಗಿ ವಿಸ್ತಿರ್ಣಗೊಂಡಿತು ಎಂದು ಬುಕ್ಕರಾಯ ಸಮುದ್ರಂ ಮತ್ತು ಅನಂತಪುರ ಕೈಫಿಯತ್ತಿನಿಂದ ಮಾಹಿತಿ ಸಿಗುತ್ತದೆ.

### ೩.೫. ಹಂಡೆ ಅರಸುಮನೆತನದ ವಂಶಾವಳಿಗಳು

ಕನ್ನಡ ದಾಖಲು ಸಾಹಿತ್ಯಕ್ಕೆ ಸೇರುವ ಮತ್ತೊಂದು ಪ್ರಕಾರವೆಂದರೆ ವಂಶಾವಳಿ. ವಂಶಾವಳಿ ಎಂದರೆ ಕುಲ, ಸಂತತಿ, ಪೀಳಿಗೆ, ಸಂತಾನ ಹಾಗೂ ವಂಶಾನುಕ್ರಮ ಎಂಬಿತ್ಯಾದಿ ಅರ್ಥವನ್ನು ಪಡೆದುಕೊಂಡಿದೆ. 'ವಂಶ', 'ವಂಶಜ ಎಂಬ ಪದಕ್ಕೆ 'ವಳಿ' ಎಂಬ ಆಖ್ಯಾತ ಪ್ರತ್ಯಯ ಸೇರಿಕೊಂಡು 'ವಂಶಾವಳಿ' ಎಂಬ ಸಮಸ್ತ ಪದವಾಗಿದೆ.[೩೮] (ವಂಶ=ಪೀಳಿಗೆ, ವಳಿ=ಸಾಲು, ತಲೆಮಾರು ಎಂದರ್ಥ). ಯಾವುದೇ ಒಂದು ಸಂತತಿಯ ಮೂಲಪುರುಷನಿಂದ ಆರಂಭಿಸಿ ಆತನ ತಂದೆ-ತಾಯಿ, ಹೆಂಡತಿ-ಮಕ್ಕಳು, ಬಂಧು-ಬಳಗ, ಗುರು-ಸಾಧನೆ ಮತ್ತು ವ್ಯಕ್ತಿತ್ವವನ್ನು ವಿವರವಾಗಿ ಬಣ್ಣಿಸುವುದಕ್ಕೆ ವಂಶಾವಳಿಯೆನ್ನುತ್ತಾರೆ. ಹೀಗಾಗಿ ಮೇಲಿನ ಎಲ್ಲ

ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಹಂಡೆ ಅರಸರ ವಂಶಾವಳಿಯನ್ನು ಆಡಳಿತದ ಕಾಲಾನುಕ್ರಮದಲ್ಲಿ ಹೆಸರಿಸಿ ಅವರ ವಂಶದ ಇತಿವೃತ್ತವನ್ನು ತಿಳಿಯಬಹುದಾಗಿದೆ.

ಹಂಡೆ ಅನಂತಪುರ ಕೈಫಿಯತ್ತಿನಲ್ಲಿ ಈ ಅರಸರ ವಂಶಾವಳಿಯು ಬಾಲದ ಹನುಮಪ್ಪ ನಾಯಕನು ಕ್ರಿ. ಶ.೧೫೬೯ ರಲ್ಲಿ ನಂದ್ಯಾಲಕ್ಕೆ ಬರುವುದರೊಂದಿಗೆ ಈ ಅರಸರ ಇತಿಹಾಸವು ಪ್ರಾರಂಭವಾಗುತ್ತದೆ. ಕ್ರಮವಾಗಿ ಇಮ್ಮಡಿ ಹಂಪರಾಯನು ಕ್ರಿ ಶ. ೧೫೮೪ ರಿಂದ ೧೫೯೬ರವರೆಗೆ ಹನ್ನೆರಡು ವರ್ಷಗಳ ಕಾಲ ಆಳ್ವಿಕೆ ನಡೆಸಿದ. ಈತನ ತರುವಾಯ ಮಲಕಪ್ಪನಾಯಕ ಸುಮಾರು ೨೫ವರ್ಷಗಳ ಕಾಲ ಆಳ್ವಿಕೆ ನಡೆಸುತ್ತನೆ. ಮುಂದೆ ದೇವಪ್ಪನಾಯಕ, ಚಿಕ್ಕರಾಮಪ್ಪ ನಾಯಕ, ನಿಚ್ಚಮದ ಲಿಂಗಪ್ಪ ನಾಯಕ ಮತ್ತು ಇಮ್ಮಡಿ ಹಂಪನಾಯಕ ಪ್ರಮುಖವಾಗಿ ಅನಂತಪುರ, ನಂದ್ಯಾಲ, ಧರ್ಮವರ, ನಿಡುಮಾಮಿಡಿ, ಕುದರ್ಪಿ ಹಾಗೂ ಕೋತ್ತಚೇರುವು ಪ್ರದೇಶಗಳಲ್ಲಿ ಆಳ್ವಿಕೆ ನಡೆಸುತ್ತಾರೆ.

ಬಳ್ಳಾರಿ ಕೈಫಿಯತ್ತಿನಲ್ಲಿ ಹಂಡೆ ಅರಸರ ಮೂಲ ಪುರುಷ ಬಾಲದ ಹುನುಮಪ್ಪ ನಾಯಕನು ಪ್ರಮುಖ ವ್ಯಕ್ತಿ ಈತನಿಗೆ ಐದು ಜನ ಮಕ್ಕಳು ಕ್ರಮವಾಗಿ ಅಂಕುಶರಾಯ, ದೇವಪ್ಪನಾಯಕ, ನಿಚ್ಚಮದುವಣಿಕ ರಾಮಪ್ಪನಾಯಕ, ಹಿರಿಯ ಮಲುಕಪ್ಪ ನಾಯಕ ಹಾಗೂ ಚಿಕ್ಕ ಮಲುಕಪ್ಪ ನಾಯಕ ಬಳ್ಳಾರಿ ಸುತ್ತಮುತ್ತಲಿನ ಪ್ರದೇಶಗಳನ್ನು ಆಳ್ವಿಕೆ ನಡೆಸುತ್ತಾರೆ.

ಕುರುಗೋಡು ಕೈಫಿಯತ್ತುಗಳಲ್ಲಿ ಕಂಡುಬರುವ ವಂಶಾವಳಿಯ ಪ್ರಕಾರ ಮೂಲಪುರುಷ ಬಾಲದ ಹನುಮಪ್ಪನಾಯಕ, ಯೀತಗೆ ಐದು ಮಕ್ಕಳು ೧. ಅಂಕುಶರಾಮಗೆ ನಂದ್ಯಾಶೀಮೆ, ೧ ದ್ಯಾವಪ್ಪನಾಯಕಗೆ ಬಳ್ಳಾರಿ ವಗ್ಯೆರೆ ಶೀಮೆ, ಯೀತನ ಮಗ ಪವಾಡರಾಮಪ್ಪನಾಯಕಗೆ ಸಂತಾನವಿಲ್ಲ. ೧ ರಾಮಪ್ಪನಾಯಕ ಯೀತನಿಗೂ ಸಂತತಿಯಿಲ್ಲ. ೧ ಹಿರಿಯ ಮಲಕಪ್ಪನಾಯಕ ಅನಂತಪುರದ ಶೀಮೆ. ೧ ಚಿಕ್ಕಮಲಕಪ್ಪನಾಯಕ ಬಳ್ಳಾರಿ ವಗ್ಯೆರೆ, ಚಿಕ್ಕಮಲಕಪ್ಪನಾಯಕನ ಸಂತತಿ ಬಳಾ[>ರಿ] ಶೀಮೆ ಆಳಿದರು. ಯೀತನ ಮಗ ಚಿಕ್ಕನಾಯಕ ಸಾಹೇಬ, ಯೀತನ ಮಗ ದೇವಪ್ಪನಾಯಕ, ಯೀತನ ಹಿರೆಹೆಂಡತಿ ಮಕ್ಕಳು ಕಿರೆರಾಮಪ್ಪನಾಯಕ ಹನುಮಪ್ಪನಾಯಕ ಚಿಕ್ಕರಾಮಪ್ಪನಾಯಕ ಕೂಡಿ ಆ ೩ ಯೀ ಮೂವರಿಗೂ ಸಂತತಿಯಲ್ಲ. ತರುವಾಯಾ ಹನುಮಪ್ಪನಾಯಕನ ಜೇಷ್ಟಪುತ್ರ ಅಂಕುಶರಾಯನ ಸಂತತಿ ಶಿವ[>ದ್ದ]ಪ್ಪನಾಯಕನ ಮಕ್ಕಳು ೨ ದೊಡ್ಡತಲೆರಾಮಪ್ಪನಾಯಕ, ಯೀತಗೆ ಸಂತತಿಯಿಲ್ಲ, ಹನುಮಪ್ಪನಾಯಕ ಯೀತಗೂ ಸಂತತಿಯಿಲ್ಲ. ಸದರಿ ಬರದ ಶಿವ[>ದ್ದ]ಪ್ಪನಾಯಕನ ತಮ್ಮ ಪ್ರಸನ್ನಪ್ಪನಾಯಕನ ಸಂತತಿ. ಪ್ರಸನ್ನರಾಮಪ್ಪನಾಯಕ ಯೀತಗೆ ಸಂತತಿಯಿಲ್ಲ. ಸಿದ್ದಪ್ಪನಾಯಕನ ಮಗ ಹನುಮಪ್ಪನಾಯಕನು ಅನ್ಯಕುಲಜ್ಯಾ ಸಾಕಿದವನು ದೊಡ್ಡಪ್ಪನಾಯಕ ಯೀತನಿಗೂ ಸಂತತಿಯಿಲ್ಲ.[೩೯]

ಒಟ್ಟಾರೆಯಾಗಿ ಈ ಅಧ್ಯಯನದಲ್ಲಿ ಹಂಡೆ ಅರಸುಮನೆತನಕ್ಕೆ ಸಂಬಂಧಿಸಿದ ಆಕರ ಸಾಮಗ್ರಿಗಳ ಕುರಿತು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಕಾವ್ಯ–ಪುರಾಣಗಳು, ಶಾಸನಗಳು, ಕೈಫಿಯತ್ತುಗಳು ಹಾಗೂ ವಂಶಾವಳಿ ಹಂಡೆ ಅರಸುಮನೆತನಕ್ಕೆ ಮಹತ್ವದ ದಾಖಲೆಗಳಾಗಿವೆ. ಈ ಎಲ್ಲ ಸಾಹಿತ್ಯ ಮತ್ತು ಸಾಹಿತ್ಯೇತರ ಆಕರಗಳನ್ನು ಬಳಸಿಕೊಂಡು ಹಂಡೆ ಅರಸರ ಸಾಂಸ್ಕೃತಿಕ ಅನನ್ಯತೆಯನ್ನು ಕಂಡುಕೊಳ್ಳಲಾಗಿದೆ.

**ಅಡಿಟಿಪ್ಪಣಿಗಳು**

೧. ಕಣ್ಣನ್ ಕೆ.ಎಸ್., ೨೦೦೧, ವಿರೂಪಾಕ್ಷ ವಸಂತೋತ್ಸವ ಚಂಪೂ, ಪು.೨೬

೨. ನಾಗಭೂಷಣ ಸಿ., ೧೯೯೯, ಕನ್ನಡ ಸಾಹಿತ್ಯ ಸಂಸ್ಕೃತಿ ಶೋಧನೆ, ಪು.೧೯೦

೩. ಚೆನ್ನಕ್ಕ ಪಾವಟೆ, ೨೦೦೫, ಸಂಸ್ಕೃತಿ ಅಧ್ಯಯನ, ಪು.೧೧೨

೪. ಅದೇ, ಪು. ೧೧೩

೫. ರವೀಂದ್ರನಾಥ ಕೆ., ೨೦೦೦, ಕನ್ನಡ ದಾಖಲು ಸಾಹಿತ್ಯ, ಪು.೧೨೪

೬. ಕಲಬುರ್ಗಿ ಎಂ.ಎಂ., ೧೯೯೪, ಕರ್ನಾಟಕ ಕೈಫಿಯತ್ತು, ಪು.೪೫೧

೭. ಪಾಟೀಲ ಎಸ್.ಸಿ., ೨೦೧೪, ಭಟಾಂಗಿನಿ ಸಾಹಿತ್ಯ, ಪು.೧

೮. ಅದೇ, ಪು.೧

೯. ಅದೇ, ಪು.೨

೧೦. ಅದೇ, ಪು.೨

೧೧. ಅದೇ, ಪು.೨

೧೨. ಅದೇ, ಪು.೨

೧೩. ಅದೇ, ಪು.೩

೧೪. ಅದೇ, ಪು.೫

೧೫. ಅದೇ, ಪು.೫

೧೬. ಅದೇ, ಪು.೭

೧೭. ಶಿರೂರ ಬಿ.ವಿ.(ಸಂ), ೨೦೦೩, ಭಕ್ತಿರಸ ಸೋನೆ, ಪು.೨೦೪

೧೮. ಅದೇ, ಪು.೨೦೫

೧೯. ಉಮಾಪತಿಶಾಸ್ತ್ರಿ ಗೌ.ಮ., ೧೯೮೩, ಹಂಪೆ ಹೇಮಕೂಟ ಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಕೊಟೂರು ಗುರುಪರಂಪರೆ, ಪು.೬

೨೦. ಅದೇ, ಪು.೧೧

೨೧. ಅದೇ, ಪು.೧೩

೨೨. ಅದೇ, ಪು.೧೪

೨೩. ಅದೇ, ಪು.೧೬

೨೪. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧, ಪು.೧೪೪

೨೫. ಅದೇ, ಪು.೧೭

೨೬. ಅದೇ, ಪು.೧೮

೨೭. ಅದೇ, ಪು.೨೧

೨೮. ಪಾಟೀಲ ಎಸ್.ಸಿ., ೨೦೧೪. ಶಾಸನೋಕ್ತ ಹಂಡೆ ಅರಸುಮನೆತನ, ಪು.೬೬

೨೯. ಅದೇ, ಪು.೮೦

೩೦. ಅದೇ, ಪು.೮೯

೩೧. ಅದೇ, ಪು.೯೭

೩೨. ಅದೇ, ಪು.೯೮

೩೩. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೭, ರಾಯಚೂರು ಜಿಲ್ಲೆ, ಪು.೩೭೩

೩೪. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧, ಬಳ್ಳಾರಿ ಜಿಲ್ಲೆ, ಸಿರುಗುಪ್ಪ ತಾಲೂಕು, ಶಾಸನ ಸಂಖ್ಯೆ ೬೩

೩೫. ಉಮಾಪತಿಶಾಸ್ತ್ರಿ ಗೌ.ಮ., ೧೯೮೩, ಹಂಪೆ ಹೇಮಕೂಟ ಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಕೊಟ್ಟೂರ ಗುರುಪರಂಪರೆ, ಪು.೫.

೩೬. ಕಲಬುರ್ಗಿ ಎಂ.ಎಂ., ೧೯೯೪, ಕರ್ನಾಟಕ ಕೈಫಿಯತ್ತು, ಪು.೪೫೧

೩೭. ಅದೇ, ಪು.೪೫೧

೩೮. ರವೀಂದ್ರನಾಥ ಕೆ., ೨೦೦೦, ಕನ್ನಡ ದಾಖಲು ಸಾಹಿತ್ಯ, ಪು.೧೧೫

೩೯. ಕಲಬುರ್ಗಿ ಎಂ.ಎಂ., ೧೯೯೪, ಕರ್ನಾಟಕ ಕೈಫಿಯತ್ತು, ಪು.೪೬೪

# ಅಧ್ಯಾಯ : ನಾಲ್ಕು

## ಹಂಡೆ ಅರಸುಮನೆತನ : ಚಾರಿತ್ರಿಕ ಹಿನ್ನೆಲೆ

೪.೧. ಶಾಸನಗಳ ಉಲ್ಲೇಖಿತ ಹಂಡೆ ಅರಸರ ಇತಿಹಾಸ

೪.೨. ಹಂಡೆ ಮತ್ತು ಹಂಡೆ ವಜೀರ ಪದದ ಅರ್ಥ

೪.೩. ಹಂಡೆ ಅರಸುಮನೆತನದ ಮೂಲ

೪.೪. ಹಂಡೆ ಅರಸುಮನೆತನದ ಗುರುಪರಂಪರೆ

೪.೫. ಹಂಡೆ ಅರಸುಮನೆತನದ ಬಿರುದಾವಳಿಗಳು

೪.೬. ಹಂಡೆ ಅರಸುಮನೆತನದ ಭೌಗೋಳಿಕ ವ್ಯಾಪ್ತಿ

೪.೭. ಹಂಡೆ ಅರಸರ ಕೊನೆಯ ದಿನಗಳು

ಅಧ್ಯಾಯ : ನಾಲ್ಕು

# ಹಂಡೆ ಅರಸುಮನೆತನ : ಚಾರಿತ್ರಿಕ ಹಿನ್ನೆಲೆ

ಸಮಾಜದಲ್ಲಿ ಯಾವುದೇ ಒಂದು ಮನೆತನವಾಗಿರಬಹುದು ಅಥವಾ ಸಮುದಾಯವಾಗಿರಬಹುದು ಅವುಗಳಿಗೆ ಒಂದು ಹಿನ್ನೆಲೆ ಇರುತ್ತದೆ. ಅದು ಪ್ರಾದೇಶಿಕವಾಗಿ ಮತ್ತು ಸಾಮಾಜಿಕವಾಗಿ ಸಾಮ್ಯತೆ ಮತ್ತು ಭಿನ್ನತೆಗಳಿಂದಲೂ ಕೂಡಿರಬಹುದು. ಬಹಳ ವೈವಿಧ್ಯಪೂರ್ಣ ಹಾಗೂ ಸಮೃದ್ಧ ಪರಂಪರೆಯನ್ನು ಹೊಂದಿರುವ ಈ ನಾಡಿನಲ್ಲಿ ಅನೇಕ ಸಣ್ಣಪುಟ್ಟ ಮನೆತನಗಳು ಹುಟ್ಟಿಕೊಂಡವು. ಯಾವುದೇ ಅರಸರಾಗಲಿ, ಪಾಳೆಯಗಾರರಾಗಲಿ ಮೊದಲು ಅಧಿಕಾರ ವಹಿಸಿಕೊಂಡು ಕೈಗೊಳ್ಳುವ ಕಾರ್ಯವೇ ರಾಜ್ಯ ವಿಸ್ತರಣೆ ಮಾಡುವುದು. ಆಂತರಿಕ ಭದ್ರತೆಗೋಸ್ಕರ ಆಡಳಿತವನ್ನು ಸುವ್ಯವಸ್ಥಿತವಾಗಿ ನಡೆಸಲು ಹಾಗೂ ಜನಕಲ್ಯಾಣಕ್ಕಾಗಿ ಹಂಡೆ ಅರಸು ಮನೆತನ ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಹಾಗೂ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಚಿಕ್ಕ ಮನೆತನವಾದರೂ ಅಚ್ಚುಕಟ್ಟಾದ ಮನೆತನವನ್ನು ನಿರ್ಮಾಣ ಮಾಡಿದರು ಹಂಡೆ ಅರಸರು. ಹೀಗೆ ಸಮಾಜದಲ್ಲಿ ಮಾನವರ ಜೀವನವನ್ನು ರೂಪಿಸುವಲ್ಲಿ ಹಾಗೂ ವಾಸಿಸುವ ಜನಾಂಗಗಳು ಸಾಂಸ್ಕೃತಿಕವಾಗಿ ತಮ್ಮ ಬದುಕಿನ ಆಚಾರ–ವಿಚಾರ, ನಡೆ–ನುಡಿ, ಧಾರ್ಮಿಕ ಆಚರಣೆಗಳು, ಹಬ್ಬ–ಹರಿದಿನಗಳು, ಕುಟುಂಬದ ಶಿಷ್ಟಾಚಾರಗಳನ್ನು ಪೋಷಿಸುವಲ್ಲಿ ಜನಾಂಗಗಳ ಪಾತ್ರ ಮಹತ್ವವಾಗಿದೆ. ಈ ಮೇಲಿನ ಎಲ್ಲ ಅಂಶಗಳನ್ನು ಗಮನಿಸಿ ಹಂಡೆ ಅರಸುಮನೆತನದ ಚಾರಿತ್ರಿಕ ಹಿನ್ನೆಲೆಯನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಹಂಡೆ ಅರಸು ಮನೆತನದ ಚಾರಿತ್ರಿಕ ಹಿನ್ನೆಲೆಯನ್ನು ನಾವು ಮುಖ್ಯವಾಗಿ ಎರಡು ಹಂತದಲ್ಲಿ ಕಾಣುತ್ತೇವೆ. ೧. ವಿಜಯನಗರ ಪೂರ್ವದ ಹಂತ ೨. ವಿಜಯನಗರೋತ್ತರ ಕಾಲದ ಹಂತ ಈ ಚರಿತ್ರೆಗೆ ಮೂಲ ಆಕರಗಳಾಗಿ ನಮಗೆ ಶಾಸನಗಳು ಪ್ರಮುಖವಾಗಿ ಕಂಡುಬರುತ್ತವೆ.

## ೪.೧. ಶಾಸನಗಳ ಉಲ್ಲೇಖಿತ ಹಂಡೆ ಅರಸರ ಇತಿಹಾಸ

ಹಂಡೆ ಅರಸ ಕುರಿತು ಮಾತನಾಡುವ ಸಂದರ್ಭದಲ್ಲಿ ಹಂಡೆ ಶಬ್ದದ ಕುರಿತು ಅನೇಕ ವಿಚಾರಗಳು ಬರುವುದು ಸಹಜ. ಈ ಕುರಿತು ವಿದ್ವಾಂಸರು ಬೇರೆ ಬೇರೆ ರೀತಿಯಲ್ಲಿ ಅರ್ಥೈಸುತ್ತ ಬಂದಿದ್ದಾರೆ. ಡಾ. ಎಂ.ಎಂ.ಕಲಬುರ್ಗಿಯವರು "ಶಾಸನೋಕ್ತ ಲಿಂಗಾಯತ ಹಂಡೆ ಅರಸುಮನೆತನ" ಗ್ರಂಥಕ್ಕೆ ಮುನ್ನುಡಿ ಬರೆಯುತ್ತಾ ಪಂದಿಗ, ಹಂದಿಗ, ಪಂಡಿಗ, ಹಂಡಿಗ, ಪಂಡೆ, ಹಂಡೆ ರೂಪತಾಳುತ್ತಾ ಬಂದಿದೆ ಎಂದು ಹೇಳುತ್ತಾ, ವೈದಿಕ ಧರ್ಮದಲ್ಲಿ ಕಣ್ವ ಋಷಿ ಮೂಲದವರು ಕಣ್ವ ಬ್ರಾಹ್ಮಣರೆನಿಸುವಂತೆ ಪಳ್ದಿಗ ರಾಜ ಮೂಲದವರು ಹಂಡೆ ಲಿಂಗಾಯತರೆನಿಸಿದರೆಂದು ಹೂಡಿದ ಇಲ್ಲಿಯ ವಾದದಲ್ಲಿ ಸತ್ಯಾಂಶವಿದೆ ಎನಿಸುತ್ತದೆ. ಇದಕ್ಕೆ ಹೆಮ್ಮವಾಡಿಗೆ ಶಾಸನ ನೇರ ಆಧಾರವಾಗಿದೆ ಎಂದು ಹೇಳುತ್ತಾರೆ.[೧] ಪಂದಿ ಅರಸರ ಹೆಸರಿನ ಶಾಸನವು ನಮಗೆ ಮೊದಲು ಸಿಗುವುದು ಆಂಧ್ರಪ್ರದೇಶದ ಕರ್ನೂಲ್ ಜಿಲ್ಲೆಯ ತಾಡಪತ್ರಿ ತಾಲೂಕಿನ ಗಡ್ಡನವಾರಿಪಲ್ಲಿ ಪಟ್ಟಯ್ಯ ಎಂಬ ಗ್ರಾಮದ ರಾಷ್ಟ್ರಕೂಟರ ಶಾಸನ ಕ್ರಿ.ಶ. ೯೦೦ರಲ್ಲಿ 'ಪಂದಿಯರಸ' ಎಂಬ ಹೆಸರಿನ ಶಾಸನ ಉಪಲಬ್ಧವಾಗಿದೆ. ಮುಂದೆ "ಕ್ರಿ.ಶ. ೯೬೮ರಲ್ಲಿ ಚಿತ್ರದುರ್ಗ ತಾಲೂಕಿನ ಬೇವಿನಹಳ್ಳಿ ಗ್ರಾಮದ ಆಂಜನೇಯ ದೇವಾಲಯದ ಪ್ರಾಕಾರದಲ್ಲಿರುವ ಶಿಲಾಶಾಸನದಲ್ಲಿ ಮಾನ್ಯಖೇಟದಿಂದ ರಾಷ್ಟ್ರಕೂಟರ ಕೊಟ್ಟಿಗದೇವನ ಆಳ್ವಿಕೆಯಲ್ಲಿ ಮಹಾಸಾಮಂತ 'ಪಂದಿಗ ಅರಸ' ಮುದಲೂರು, ಮುಳಗವಾಡಿ ಎಂಬ ಗ್ರಾಮಗಳನ್ನು ದಾನ ನೀಡಿದ ವಿವರ ವಿದೆ.[೨] ಇಲ್ಲಿಯ 'ಪಂದಿಗ' ಶಬ್ಧದ ಮುಂದಣ ರೂಪ ಹಂದಿಗ. ಕ್ರಿ.ಶ. ೧೧೧೬ರ ಜೇವರ್ಗಿ ತಾಲೂಕಿನ ಕೊಂಡಗುಳಿ ಶಾಸನದಲ್ಲಿ 'ಶ್ರೀ ಮನ್ಮಹಾಸಾಮಂತ ಬೈಸರಸರು ಹಂದಿ ಅರಸರು ಹಗರಟಗಿ ಮೂರುನೂರುಮಂ ತ್ರಿಭೋಗಾಭ್ಯಂತರ ಸಹಿತ ಸುಖದಿನಾಳುತ್ತಿರಮಿರಲು ಮನ್ನೆಯ ಬೈಸರಸ ಹಂದಿಯರಸರ ಕೈಯಲು ಕಣಂಬೇಸ್ವರದ ದೇವಸ್ಥಾನದ ಜೀರ್ಣೋದ್ಧಾರಕ್ಕೆ... ದತ್ತಿ ನೀಡಿದ ವಿವರವಿದೆ.[೩] ಇಲ್ಲಿ ಈ ಹಂದಿ ಅರಸರು ಹಗರಟಗಿ ಮುನ್ನೂರನ್ನು ಆಳುತ್ತಿದ್ದ ವಿವರವಿದೆ. ಇಲ್ಲಿ 'ಪಂದಿ' ಮತ್ತು 'ಹಂದಿ' ಇವೆರಡು ಸಮಾನಾರ್ಥವನ್ನು ಹೊಂದಿವೆ. ಕ್ರಿ.ಶ. ೧೧೨೮ರಲ್ಲಿ ರಾಯಚೂರು ತಾಲೂಕಿನ ಜೇಗರಕಲ್ಲು ಗ್ರಾಮದ ಶಾಸನದಲ್ಲಿ ಕಲ್ಯಾಣ ಚಾಲುಕ್ಯ ತ್ರಿಭುವನಮಲ್ಲನು (ವಿಕ್ರಮಾಧಿತ್ಯ-VI) ಮಲ್ಲಿಕಾರ್ಜುನ ದೇವಸ್ಥಾನದ ಪೂಜಾಕಾರ್ಯಗಳಿಗೆ, ದೀಪ, ಹೂದೋಟ ಮತ್ತು ಕೆರೆಯ ಅವಶ್ಯಕತೆಗಾಗಿ 'ಮಹಾಮಂಡಳೇಶ್ವರ ವೀರ ಹಂಡೆ ಅರಸರ ಪ್ರಸ್ತಾಪವು ಬರುತ್ತದೆ.[೪] ಇಲ್ಲಿ ನೇರವಾಗಿ ಹಂಡೆ ಅರಸರ ಉಲ್ಲೇಖ ವ್ಯಕ್ತವಾಗಿರುವುದನ್ನು ಗಮನಿಸಬಹುದು.

ಕ್ರಿ.ಶ.೧೧೨೯ರ ಕಲ್ಯಾಣ ಚಾಲುಕ್ಯ ಚಕ್ರವರ್ತಿ ೩ನೇ ಸೋಮೇಶ್ವರನ ಆಳ್ವಿಕೆಯ ಸುರಪೂರ ತಾಲೂಕಿನ ಮುದನೂರು ಗ್ರಾಮದಲ್ಲಿ ಮಾರ್ಕಂಡೇಶ್ವರ ದೇವಸ್ಥಾನದ ಶಾಸನದಲ್ಲಿ ದೇವಸ್ಥಾನದ ಪೂಜೆ, ಅಂಗಭೋಗ ನೈವೇದ್ಯಗಳಿಗಾಗಿ ಭೂಮಿಯನ್ನು ದತ್ತಿಯಾಗಿ ನೀಡಿದ್ದು, ಇಲ್ಲಿ ಮಹಾಸಾಮಂತ ಹಂಡೆನಾಯಕನ ಉಲ್ಲೇಖವಿದೆ.[೫] ಕ್ರಿ.ಶ. ೧೧೪೫ರ ಮುದ್ದೇಬಿಹಾಳ ತಾಲೂಕಿನ ಬೇಲೂರು ಗ್ರಾಮದ ಕಲ್ಯಾಣ ಚಾಲುಕ್ಯ ಚಕ್ರವರ್ತಿ ೨ನೇ ಜಗದೇಕ ಮಲ್ಲನ ಆಳ್ವಿಕೆಯ ಈ ಶಾಸನದಲ್ಲಿ "ಮಹಾಮಂಡಳೇಶ್ವರಂ ಹೆಮ್ಮಾಡಿದೇವರಸರ ಮಹಾಪಸಾಯತಂ ಸರ್ವಾಧಿಕಾರಿ ಹಿರಿಯ ಹೆಗ್ಗಡೆ ಹಂದೆಯನಾ[ಯ*]ಕಂ ಹಗರಿಟ್ಟಗೆ ೩೦೦ವಂ ತ್ರಿಭೋಗಾಭ್ಯನ್ತರದಿ[ನಾ*]ಳುತ್ತಮಿರೆ. . . . ."[೬] ಎಂಬ ಉಲ್ಲೇಖವಿದೆ. ಹಂದೆ ನಾಯಕರು ಹಗರಟಗಿ ಮುನ್ನೂರನ್ನು ಆಳುತ್ತಿದ್ದ ವಿಷಯ ಇಲ್ಲಿ ಪ್ರಸ್ತಾಪವಾಗಿದೆ.

ಈ ಮೇಲಿನ ಶಾಸನಗಳಲ್ಲದೇ ೧೨ನೆಯ ಶತಮಾನದ ಬಸವಣ್ಣನವರ ಮತ್ತು ಮಧುವಯ್ಯನವರ ವಚನಗಳಲ್ಲಿಯೂ ಸಹ 'ಹಂದೆ', 'ಹಂದೆನೃಪ' ಎಂಬ ಪದಗಳು ಬಳಕೆಯಾಗಿವೆ.[೭] ಮತ್ತು ಸಿದ್ಧರಾಮನ ವಚನದಲ್ಲಿ...

> ಓಂಕಾರದಲ್ಲಿ ಬಿಂದು ಅತ್ಯುತ್ತರಂಗಳಲಿ
> ಮೇಲು ಪಂದಿಯಾಗಿಕ್ಕು ಯೋಗಿನಾಥ[೮]

ಎಂಬುದಾಗಿ ಉಲ್ಲೇಖಗೊಂಡಿದೆ.

ಕ್ರಿ.ಶ. ೧೧೮೨ರ ಸುರಪುರ ತಾಲೂಕಿನ ಹೆಮ್ಮಡಗಿ ಗ್ರಾಮದ ಬಸವೇಶ್ವರಗುಡಿಯ(ಹಂಡೇಶ್ವರ ದೇವಸ್ಥಾನ)ಲ್ಲಿ ಕಲ್ಯಾಣ ಚಾಲುಕ್ಯ ಚಕ್ರವರ್ತಿ ತ್ರಿಭುವನಮಲ್ಲ ವೀರಸೋಮೇಶ್ವರನ ಕಾಲದ ಶಾಸನವಿದ್ದು, ದಂಡನಾಯಕ ಬಂಮ್ಮಿದೇವ "ತಾಂ ಪರಮ ಮಾಹೇಶ್ವರನಪ್ಪುದರಿಂ ಧರ್ಮ್ಮಾನುರಾಗಿಯಾಗಿ" ಹೆಮ್ಮವಾಡಗಿಯ ಹಂದೇಶ್ವರದೇವರಿಗೆ ದತ್ತಿ ನೀಡಿದನಂತೆ. ಈ ಮೊದಲು ಮೇಲಿನ ಪಂಕ್ತಿಯಲ್ಲಿ ಹಂದೇಶ್ವರ ದೇವಸ್ಥಾನ ಕಟ್ಟಿಸಿದ ಹಂಡರಸನನ್ನು

> ಈಶ್ವರಭಕ್ತಂ ಪರಮ ಮ
> ಹೇಸ್ವರನೌದಾರ್ಯ್ಯತುಂಗನೂರ್ಜ್ಜಿತ ತೇಜಂ
> ಸಾಸ್ವತಮೆನೆ ಮಾಡಿಸಿ ಪಂ
> ದೇಸ್ವರಮಂ ಸುಪ್ರತಿಷ್ಠಿತಂ ಹಂದರಸಂ॥

ಎಂದು ಈ ಶಾಸನದಲ್ಲಿ ವರ್ಣಿಸಲಾಗಿದೆ.

ಹಾಗೆಯೇ 'ಹೆಮ್ಮವಾಡಿಗೆಯ ಪ್ರಭು ಸೌಧೊರೆ ಹಂದಿಮರಸರ ಪುತ್ರಂ ಭಾವರಾಜನ ವಂಶಾವತಾರಮೆಂತೆಂದಡೆ . . . .' ಎಂದು ಹೇಳುತ್ತ ಇಲ್ಲಿ ಬಾದಾಮಿ ಚಾಲುಕ್ಯರ ಹಾಗೂ

ಕಲ್ಯಾಣ ಚಾಲುಕ್ಯರ ವಂಶಾವಳಿಯೊಂದಿಗೆ ಹಂದಿಯರಸರ ವಂಶಾವಳಿಯನ್ನು ನೀಡಲಾಗಿದೆ. ಮತ್ತು ವಸಿಷ್ಠ ಗೋತ್ರ, ವರಾಹ ಲಾಂಛನದ ವಂಶಸ್ಥರೆಂದು ಈ ಶಾಸನ ತಿಳಿಸುತ್ತದೆ. ಸಾಲು ೨೩ರಲ್ಲಿ ಹಂಡೇಸ್ವರ ದೇವರು, ಸಾಲು ೨೮ರಲ್ಲಿ ಹಂದೇಶ್ವರ ದೇವರು, ಸಾಲು ೪೮ರಲ್ಲಿ ಪಂದೇಶ್ವರ ದೇವರ ದೇವಸ್ಥಾನ, ಸಾಲು ೪೯, ೫೦ರಲ್ಲಿ ಪಂದಿರಾಜನು ಹಂದೇಶ್ವರ ದೇವಸ್ಥಾನ ನಿರ್ಮಿಸಿದ ಉಲ್ಲೇಖವಿದೆ.[೯] ಈ ಶಾಸನದಲ್ಲಿ ಹಂದಿಯರಸರು, ಪಂದಿಯರಸರು, ಹಂದೇಶ್ವರ ದೇವಸ್ಥಾನ, ಪಂದೇಶ್ವರ ದೇವಸ್ಥಾನ, ಹಂಡೆಯರಸರು, ಹಂಡೇಶ್ವರ ದೇವಸ್ಥಾನ ಎಂಬ ಪದಗಳು ಮತ್ತು ಇವರು ಈಶ್ವರ ಭಕ್ತರು ಈ ಅರಸರು ಶೈವ(ವೀರಶೈವ) ಪರಂಪರೆಯವ ರಾಗಿದ್ದುದನ್ನು ಸ್ಪಷ್ಟಪಡಿಸುತ್ತವೆ. ಇದರಿಂದ ಪಂದಿಯರಸರು, ಹಂದಿಯರಸರು, ಹಂಡೆಯರಸರು ಎಲ್ಲವೂ ಒಂದೇ ಅರ್ಥದ ಪದಗಳೆಂದು ಖಚಿತವಾಗುತ್ತದೆ.

ಕ್ರಿ.ಶ.೧೧೯೪ರ ರಾಯಚೂರು ಜಿಲ್ಲೆಯ ಚಿಕ್ಕಸುಗೂರು ಗ್ರಾಮದ ಜೆಗರಕಲ್ ಮಲ್ಲನಗೌಡನ ಹೊಲದಲ್ಲಿನ ವೀರಗಲ್ಲಿನ ಮೇಲಿರುವ ಶಾಸನವು ಮಹಾಮಂಡಳೇಶ್ವರ ಹಂದಿಯರಸ ಮತ್ತು ಮೊರಟದ ಮಲ್ಲರಸರು ತಳಹನೂರ ಕೋಟೆಯಲ್ಲಿ ಕಾದಾಡಿ ತಳಹನೂರನ್ನು ನೆತ್ತರುವಟ್ಟವಾಗಿ ಪಡೆದ ವಿಷಯ ತಿಳಿಸುತ್ತದೆ.[೧೦] ಇಲ್ಲಿ ಹಂದಿಯರಸರು ಮಹಾಮಂಡಳೇಶ್ವರರಾಗಿದ್ದ ವಿಷಯವಿದೆ.

ಕ್ರಿ.ಶ.೧೧೯೬ರ ರಾಯಚೂರು ಜಿಲ್ಲೆಯ ಮಾನ್ವಿ ತಾಲೂಕಿನ ಮಲ್ಲಟ ಗ್ರಾಮದ ಅಲ್ಲಮದೇವಾಲಯದ ಶಾಸನದಲ್ಲಿ ಕಲ್ಯಾಣ ಚಾಲುಕ್ಯ ವಿಕ್ರಮನ ಕಾಲದಲ್ಲಿ ಅವನ ಮಹಾ ಮಂಡಳೇಶ್ವರನಾದ ಮಲ್ಲದೇವರಸ ರಾಜ್ಯಭಾರ ಮಾಡುತ್ತಿದ್ದಾಗ, ಕೊಡೆಯ ಹಂದಿಗನು ಮತ್ತು ಭಿಲ್ಲಮನ ಸಾಹಣಿ ಬ್ರಹ್ಮನು ಒಟ್ಟಾಗಿ ದಂಡೆತ್ತಿ ಬಂದು ಯುದ್ಧ ಮಾಡಿ ೧೭೦೦ ತಲೆಯನ್ನು ರಾಸಿಮಾಡಿ ಜಯವನ್ನು ಪಡೆದ ವಿವರ ಹೀಗಿದೆ. "...ಕೊಡೆಯ ಹಂದಿಯತನುಂ ಜಿಲ್ಲಮನ ಸಾಹಣಿ ಬ್ರಹ್ಮವನುಂ ಕಿಳ್ತೋಕ್ಕು ತಮಗಾದ ಹಿರಿದ ಹ ಭಂಗ ಕಾರಣಂ ಹೆಲ್ಲದ ಸವ್ವರಣವೆರಸು ವೆತ್ತಿಬರಲು ಇದಿರಾಗಿ ನಡದು ಕಾದಿ ದೆಸಾ ದಿವ್ಯಂ ಮಾಡಿ ಬಡಿ ಸಿ ಹಲಂಬರಂ ಕೊಂದು ನಾಲರು ಸಾಸಿರದೆಳೂನೂರು ತಲೆಯಂ ರಾಸಿಯಮಾಡಿ ಬಸವಂ ಪಡೆದು ಜಗಕೆಲ್ಲಂ ವೀರವಂ ಯರವುತ್ತಿರಲು..."[೧೧]

ಕ್ರಿ.ಶ.೧೧೯೯ರ ರಾಯಚೂರು ಜಿಲ್ಲೆಯ ಮಾನ್ವಿ ತಾಲೂಕಿನ ಕವಿತಾಳ ಗ್ರಾಮದ ವೀರಭದ್ರೇಶ್ವರ ದೇವಸ್ಥಾನದ ಶಾಸನದಲ್ಲಿ "ಯಾದವ ಜೈತುಗಿ ದೇವನು ದೇವಗಿರಿ ನೆಲೆವೀಡಿನಿಂದ ರಾಜ್ಯಭಾರ ಮಾಡುತ್ತಿರುವಾಗ, ಚಾಮೇಶ್ವರ ದೇವರಿಗೆ ದತ್ತಿಬಿಟ್ಟ ಶಾಸನದಲ್ಲಿ ಹಂದಿಯರಸರ[೧೨] ಪ್ರಸ್ತಾಪವಿದೆ.

ಹರಿಹರ (ಸು. ೧೧೮೦ ರಿಂದ ೧೨೫೦ರ ಅವಧಿ)ನು ತನ್ನ ಬಸವರಾಜ ದೇವರ ರಗಳೆಯಲ್ಲಿ "ಎಲೆದೇವ ಎಲೆತಂದೆ ಎಲೆಲೆ ಹಂದೆ ಕೂಡಲಸಂಗ, ಸೈತಾಗು ಸೈತಾಗು" ಎಂಬ ನುಡಿ ಹಾಗೆಯೇ ಮತ್ತೊಂದು ಕಡೆ "ಎಲೆ ಎಲೆ ಕಾಡಿ ಕಾಡಲಮ್ಮದ ತಂದೆ, ನೀಂ ಕೇಳು, ಬೇಡಿ ಬೇಡಲಮ್ಮದೆ ಹಂದೆ ನೀಂ ಕೇಳು"[೧೩] ಎಂಬ ನುಡಿಯಲ್ಲಿ ಹಂಡೆ ಶಬ್ದ ಬಳಕೆಯಾಗಿರುವುದು ಕಂಡುಬರುತ್ತದೆ.

ಕ್ರಿ.ಶ. ೧೪೦೭ರ ಗೂಳಪಾಳ್ಯಂ(ಗುತ್ತಿ–ಆಂಧ್ರಪ್ರದೇಶ)ಶಾಸನದಲ್ಲಿ ಹಂಡೆನಾಯಕರ[೧೪] ಉಲ್ಲೇಖವಿದೆ. ಹಾಗೆಯೇ ಕ್ರಿ.ಶ. ೧೫೩೭ರ ಸಿರಗುಪ್ಪಾ ತಾಲೂಕಿನ ಸಿರಿಗೆರೆ ಶಾಸನ[೧೫] ಕ್ರಿ.ಶ. ೧೫೬೮ರ ಮುದುಗಲ್ಲಿನ ಶಾಸನದಲ್ಲಿ ಹಂಡರಸ ಗಂಡ ಎಂಬ ಉಲ್ಲೇಖವಿದೆ.[೧೬] ಕ್ರಿ.ಶ. ೧೫೭೭ರ ಕಡದರಬೆಂಚಿ (ಗುತ್ತಿ–ಆಂಧ್ರಪ್ರದೇಶ)ಯ ಶಾಸನದಲ್ಲಿ ಹಂಡೆಯ ಹನುಮನಾಯಕನ[೧೭] ಉಲ್ಲೇಖವಿದೆ. ಕ್ರಿ.ಶ. ೧೫೯೭ರ ಹಂಡೆ ಹನುಮ ನಾಯಕನ ಅಂಕುಶರಾಯನ ಶಾಸನ[೧೮] ಕ್ರಿ.ಶ. ೧೫೯೯ರ ಹೊಸಪೇಟೆ ತಾಲೂಕಿನ ಮುದ್ದಾಪುರ ಶಾಸನ ಹಂಡೆ ಹನುಮನಾಯಕನ ಮಗಳಾದ ರಾಮಮ್ಮಳಿಗೆ ಸೇರಿದ ಶಾಸನ[೧೯] ಕ್ರಿ.ಶ.೧೬೦೩ರ ರಾಯಚೂರು ಜಿಲ್ಲೆಯ ಸಿಂಧನೂರು ತಾಲೂಕಿನ ಅರಳಿಹಳ್ಳಿಯ ಶಾಸನವು[೨೦] ಶ್ರೀಮನ್ ಮಹಾರಾಜಾಧಿರಾಜ ರಾಜಶ್ರೀ ಹಂಡೆ ಮಲುಕಪ್ಪ ನಾಯಕರು ಹೆಸರಿನ ಶಾಸನವಿದೆ.[೨೧] ಕ್ರಿ.ಶ. ೧೬೬೩ರ ಹಂದ್ರಾಳು ಶಾಸನದಲ್ಲಿ ಶ್ರೀ (ಸಿದ್ಧ)ರಾಮೇಶ್ವರ ದೇವರ ವರಪುತ್ರರಾದ ಹಂಡೆ ಚಿಕ್ಕ ಮಲಕಪ್ಪನಾಯಕನ ವಜೀರ ಪದವಿಗೆ ಬಿಟ್ಟ ಶಾಸನ.[೨೨] ಹೀಗೆ ಹಲವಾರು ಶಾಸನಗಳು ಇವರ ಆಳ್ವಿಕೆಯ ಅವಧಿಯಲ್ಲಿ ಕನ್ನಡ, ತೆಲುಗು ಮುಂತಾದ ಭಾಷೆಗಳಲ್ಲಿರುವುದು ಕಂಡುಬರುತ್ತದೆ.

ಈ ಮೇಲಿನ ಶಾಸನಗಳಲ್ಲಿ ಹಂದೆ ಅರಸರು ತಮ್ಮ ಪೂರ್ವಜರಾದ ಬಾದಾಮಿ ಮತ್ತು ಕಲ್ಯಾಣ ಚಾಲುಕ್ಯ ಅರಸರನ್ನು ಸ್ಮರಿಸಿಕೊಳ್ಳುತ್ತ ತಮ್ಮ ವಂಶಾವಳಿಯನ್ನು ಹೇಳಿಕೊಂಡಿದ್ದಾರೆ. ಎರಡನೆಯದಾಗಿ ಬಾದಾಮಿ ಚಾಲುಕ್ಯರು ಹಾರೀತ ಮತ್ತು ವಶಿಷ್ಠ ಗೋತ್ರದವರಾಗಿದ್ದುದು ಮತ್ತು ವರಾಹ ಲಾಂಛನವನ್ನು ಹೊಂದಿರುವುದು ತಿಳಿದ ವಿಷಯವಾಗಿದೆ. ಇದೇ ಪರಂಪರೆ ಕಲ್ಯಾಣ ಚಾಲುಕ್ಯರಲ್ಲಿಯೂ ಮುಂದುವರೆದಿದೆ. ಈ ಹಂದಿಯರಸರೂ ತಾವು ವಶಿಷ್ಠ ಗೋತ್ರದವರು ಮತ್ತು ವರಾಹ ಲಾಂಛನದವರು ಎಂದು ತಮ್ಮ ಎಲ್ಲ ಶಾಸನಗಳಲ್ಲಿ ಹೇಳಿಕೊಂಡಿದ್ದಾರೆ. ಇವು ಈ ಅರಸರ ಮತ್ತು ಚಾಲುಕ್ಯರ ಸಂಬಂಧವನ್ನು ದೃಢಪಡಿಸುತ್ತದೆ. ಈ ಅರಸರು ಮಹಾ ಮಂಡಳೇಶ್ವರರಾಗಿ ಮಹಾಸಾಮಂತರಾಗಿ, ಸಾಮಂತರಾಗಿ ಆಳ್ವಿಕೆ ಮಾಡಿದ ವಿವರಗಳು ಶಾಸನಗಳಲ್ಲಿವೆ. ಬೇವಿನಹಳ್ಳಿ ಶಾಸನದಲ್ಲಿ ಬಾದಾಮಿ ಚಾಲುಕ್ಯ ಮಂಗಳೇಶನ ವರೆಗೆ ಇವರ

ವಂಶಾವಳಿ ವಿಸ್ತಾರಗೊಂಡಿದೆ. ಪಂದಿಗರಾಜ ತಾನು ಚಾಲುಕ್ಯಸರ್ವಜ್ಞನೆಂದು ಹೇಳಿ ಕೊಂಡಿದ್ದಾನೆ. ಇದನ್ನು ಗಮನಿಸಿದರೆ ಇವರು ಚಾಲುಕ್ಯ ವಂಶಸ್ಥರೆಂದು ತಿಳಿದುಬರುತ್ತದೆ.

ಮಹಾಮಂಡಳೇಶ್ವರರು ಸಾಮಾನ್ಯವಾಗಿ ರಾಜವಂಶಿಯರೇ ಆಗಿದ್ದಾರೆ. ಈ ಹಿನ್ನೆಲೆಯಲ್ಲಿ ಮೇಲಿನ ಎಲ್ಲ ಉನ್ನತ ಹುದ್ದೆಗಳಲ್ಲಿದ್ದ ಹಂದಿಯರಸರು ಕಲ್ಯಾಣ ಚಾಲುಕ್ಯರ ವಂಶಸ್ಥರಾಗಿ ಅಥವಾ ಅವರ ಸಂಬಂಧಿಗಳಾಗಿರುವುದು ಮೇಲಿನ ಶಾಸನಗಳಿಂದ ಸ್ಪಷ್ಟವಾಗುತ್ತದೆ. ಅಲ್ಲದೇ ಇವರು ಶೈವ ಅರಸರಾಗಿ ಮುಂದೆ ವೀರಶೈವ ಪರಂಪರೆಯಲ್ಲಿ ಬೆಳೆದು ಬಂದಿರುವುದು ಹೆಮ್ಮಡಿಗೆಯ ಶಾಸನ ಸ್ಪಷ್ಟಪಡಿಸುತ್ತದೆ.

೧೬ನೆಯ ಶತಮಾನದಲ್ಲಿ ಬಳ್ಳಾರಿ ಪ್ರದೇಶದಲ್ಲಿ ಹೊಸಪೇಟೆಯ ಶ್ರೀ ಜಗದ್ಗುರು ಕೊಟ್ಟೂರ ಸಂಸ್ಥಾನ ಮಠ, ಅನಂತಪುರ, ಆಂಧ್ರ ಪ್ರದೇಶದಲ್ಲಿ ಶ್ರೀಶೈಲ ಜಗದ್ಗುರು ನಿಡುಮಾಮಿಡಿ ಪೀಠ ಹಾಗೂ ಕುರುಗೋಡ, ಬಂಕಾಪುರ, ಗದಗ-ಡಂಬಳ ಪ್ರದೇಶದಲ್ಲಿ ಗದುಗಿನ ಶ್ರೀ ತೋಂಟದ ಜಗದ್ಗುರು ಪೀಠ ಪರಂಪರೆಯ ಜಗದ್ಗುರುಗಳು ಹಂಡೆ ಪಾಳೆಗಾರರಿಗೆ ರಾಜಗುರು ಗಳಾಗಿರುವರು. ಹೀಗೆ ಇವರು ಲಿಂಗಾಯತ ವೀರಶೈವ ಪರಂಪರೆಯಲ್ಲಿ ಬೆಳೆದು ಬಂದಿದ್ದು, ಅನೇಕ ವೀರಶೈವ ಮಠ, ಮಂದಿರಗಳಿಗೆ ನೂರಾರು ಎಕರೆ ಭೂದಾನ, ದೇವಾಲಯ ಮತ್ತು ಕೆರೆಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ.

ಒಟ್ಟಾರೆ ಹಂಡೆ ಅರಸರು ೯ನೇ ಶತಮಾನದಿಂದ ೧೮೧೧ರವರೆಗೆ ಅಂದರೆ ೧೯ನೆಯ ಶತಮಾನದ ವರೆಗೆ ಆಳ್ವಿಕೆ ಮಾಡಿರುವುದು ಐತಿಹಾಸಿಕ ದಾಖಲೆಗಳಿಂದ ಇವರು ಚರಿತ್ರೆಯು ಬೆಳೆದು ಬಂದಿರುವುದು ತಿಳಿದುಬರುತ್ತದೆ.

### ೪.೨. ಹಂಡೆ ಮತ್ತು ಹಂಡೆವಜೀರ ಪದದ ಅರ್ಥ

### ಹಂಡೆ ಪದದ ಅರ್ಥ

ಕ್ರಿ. ಶ. ೧೧೮೨(ಶಾಸನೋಕ್ತ ಸಂದರ್ಭ)ರ ಹೆಮ್ಮಡಿಗೆಯ ಶಾಸನದಲ್ಲಿ ಉಲ್ಲೇಖಗೊಂಡಂತೆ ೬೩ ಸಾಲಿನ ಈ ಶಾಸನದಲ್ಲಿ ಸಾಲು ೨೩ರಲ್ಲಿ ಹಂಡೇಸ್ವರ ದೇವರು, ಸಾಲು ೨೮ರಲ್ಲಿ ಹಂದೇಶ್ವರ ದೇವರು, ಸಾಲು ೪೮ರಲ್ಲಿ ಪಂದೇಶ್ವರ ದೇವರ ದೇವಸ್ಥಾನ, ಸಾಲು ೪೯, ೫೦ರಲ್ಲಿ ಪಂದಿರಾಜ ಹಂದೇಶ್ವರ ದೇವಸ್ಥಾನ ಮಾಡಿದ ಕುರಿತು ಉಲ್ಲೇಖವಿದೆ. ಈ ಶಾಸನದಲ್ಲಿ ಹಂದಿಯರಸರು, ಪಂದಿಯರಸರು, ಹಂದೇಶ್ವರ ದೇವಸ್ಥಾನ, ಪಂದೇಶ್ವರ ದೇವಸ್ಥಾನ, ಹಂಡೆಯರಸರು, ಹಂಡೇಶ್ವರ ದೇವಸ್ಥಾನ ಎಂಬ ಪದಗಳು ಮತ್ತು ಇವರು ಈಶ್ವರ

ಭಕ್ತರಾಗಿದ್ದುದರಿಂದ ಶೈವ(ವೀರಶೈವ) ಪರಂಪರೆಯವರಾಗಿದ್ದುದು ಈ ಶಾಸನದಲ್ಲಿ ಸ್ಪಷ್ಟವಾಗಿ ಉಲ್ಲೇಖಿತಗೊಂಡಿರುವುದನ್ನು ಗಮನಿಸಬಹುದಾಗಿದೆ. ಇದರಿಂದ ಪಂದಿಯರಸರು, ಹಂದಿಯರಸರು, ಹಂಡೆಯರಸರು ಎಲ್ಲವೂ ಒಂದೇ ಸಮಾನಾರ್ಥವನ್ನು ಹೊಂದುವಂತಹ ಶಬ್ದಗಳಾಗಿವೆ. ಈ ಶಾಸನದಲ್ಲಿ ಬಂದಿರುವ ಹಂಡೆ ಪದವು ಹಂದೆ, ಪಂದೆ ಎಂಬ ಪದಗಳಿಗೆ ಸಮಾನಾರ್ಥಕವಾದ ಪದಗಳಾಗಿವೆ. ಇದರಿಂದ ಹಂದೆ ಅರಸರ ಶಾಸನಗಳು, ಪಂದೆ ಅರಸರ ಶಾಸನಗಳು, ಹಂಡೆ ಅರಸರ ಶಾಸನಗಳು ಉಪಲಬ್ದವಿದ್ದು ಇವೆಲ್ಲವುಗಳು ಒಂದೆ ಅರಸರಿಗೆ ಅಂದರೆ ಹಂಡೆ ಅರಸರಿಗೆ ಸಂಬಂಧಿಸಿದ ಶಾಸನಗಳಾಗಿದ್ದುದರಿಂದ ಇಲ್ಲಿ ಆ ಎಲ್ಲ ಶಾಸನಗಳನ್ನು ಗಮನಿಸಿ ಹಂಡೆ ಅರಸರ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

**ಹಂಡೆವಜೀರ ಪದದ ಅರ್ಥ**

'ವಜೀರ' (ಆದಿಲ್‌ಶಾಹಿ ಅರಸರ ಸಂದರ್ಭ)ಎನ್ನುವ ಪದವು ಮೂಲತಃ ಮುಸ್ಲಿಂ ಅರಸರ ಕಾಲದಲ್ಲಿ ಬಳಕೆಯಾಗಿರುವುದು ಕಂಡುಬರುತ್ತದೆ. ವಿಜಾಪುರದ ಸುಲ್ತಾನ್ ಅಲಿ ಆದಿಲ್‌ಶಾ ಮುಸ್ಲಿಂ ದೊರೆ ಹನುಮಪ್ಪ ನಾಯಕನಿಗೆ ವಜೀರ್ ಎಂಬ ಬಿರುದನ್ನು ನೀಡಿ ಗೌರವಿಸುತ್ತಾನೆ. ಹೀಗಾಗಿ ಹಂಡೆ ಹನುಮಪ್ಪ ನಾಯಕನಿಂದ ಮತ್ತು ಅವನ ಮಗ ಹಂಡೆ ಹಿರಿಯ ಮಲಕಪ್ಪ ನಾಯಕ ಸಹ ವಜೀರ್ ಎಂಬ ಬಿರುದು ಪಡೆದಿರುವುದು ಕಂಡುಬರುತ್ತದೆ. ಮುಂದೆ ಇವರ ವಜೀರ ಪದವಿಗೆ ಕ್ರಿ.ಶ. ೧೬೬೩ರ ಅಂದ್ರಾಳು ಶಾಸನ ಸಹ ನೀಡಿರುವುದು ದಾಖಲೆಗಳಿಂದ ತಿಳಿದುಬರುತ್ತದೆ. ವಜೀರ್ ಎಂಬುದು ಕನ್ನಡದಲ್ಲಿ ಮಂತ್ರಿ, ಅಮಾತ್ಯ, ದಿವಾನ ಎಂಬ ಪದವು ಮುಸ್ಲಿಂ ಅರಸರ ಕಾಲದಲ್ಲಿ ಗೌರವಸೂಚಕವಾಗಿ ಮತ್ತು ಒಂದು ಹುದ್ದೆಯಾಗಿ ಬಳಕೆಯಾಗಿರುವುದು ಕಂಡುಬರುತ್ತದೆ.

ಹೀಗಾಗಿ ಹಲವಾರು ಜನಾಂಗಗಳ ವ್ಯವಸ್ಥೆಯಿಂದ ಕೂಡಿದ ಭಾರತದಂತಹ ದೇಶದಲ್ಲಿ ಒಂದು ವೃತ್ತಿ ಸಂಬಂಧಿತ, ಜಾತಿ-ಜನಾಂಗದವರ ಉಗಮ ಇಲ್ಲಿಂದಲೇ ಆಯಿತೆಂದು ಹೇಳಲು ಸಾಧ್ಯವಿಲ್ಲ. ಮುಂದೆ ಒಂದು ಜನಾಂಗದ ಹಿನ್ನೆಲೆಯಲ್ಲಿ ಇತರೆ ಸಮುದಾಯಗಳು ವೃತ್ತಿವಾಚಕವಾಗಿಯೋ, ಸ್ಥಳವಾಚಕವಾಗಿಯೋ, ಜಾತಿಸೂಚಕವಾಗಿಯೋ ಹಲವಾರು ಪಂಗಡ-ಉಪಪಂಗಡಗಳಾಗಿ ಕವಲೊಡೆದಿವೆ. ಈ ನಿಟ್ಟಿನಲ್ಲಿ 'ಹಂಡೆ' ಅರಸರ ಹಿನ್ನೆಲೆಯಲ್ಲಿ ಹಂಡೆ ಪದ ನಿಷ್ಪತ್ತಿಯನ್ನು ಶಾಸನಗಳ ಆಧಾರಗಳ ಮೂಲಕ ಚರ್ಚಿಸಲಾಗಿದೆ. 'ಹಂಡೆ ವಜೀರ' ಎಂಬ ಅರ್ಥಸ್ವರೂಪ ೧೬ನೇ ಶತಮಾನದ ಸಂದರ್ಭದಲ್ಲಿ ಗ್ರಹಿತವಾಗಿದೆ.

ಈ ಅರಸರು ೧೫-೧೬ನೇ ಶತಮಾನದಲ್ಲಿ ಬಿಜಾಪುರ ಸುಲ್ತಾನನಿಂದ ವಜೀರ ಎಂಬ ಬಿರುದಿಗೆ ಪಾತ್ರರಾಗಿ ಮುಂದೆ ಕೃಷ್ಣಾನದಿ ಮುಖಾಂತರ ಬಳ್ಳಾರಿ ಕಡೆ ವಲಸೆ ಬಂದ ನಂತರ

ವೀರಶೈವ ಮತದ ಪೀಠಗಳಾದ ಹಂಪೆ ಹೇಮಕೂಟ, ಕೊಟ್ಟೂರುಸ್ವಾಮಿ ಮಠ, ನಿಡುಮಾಮಿಡಿ ಮಠಗಳಿಗೆ ದಾನ ನೀಡಿದ ವಿವರಗಳು ಕಂಡುಬರುತ್ತವೆ.

ಹಂಡೆ ಪದದ ಮತ್ತು ಹಂಡೆ ವಜೀರ ಪದಗಳ ಭಿನ್ನತೆಯನ್ನು ಕುರಿತು ವಿದ್ವಾಂಸರು ಹೀಗಾಗಲೇ ತಮ್ಮ ಅಭಿಪ್ರಾಯಗಳನ್ನು ಚರ್ಚಿಸಿದ್ದಾರೆ. ಚರ್ಚೆಯು ಹಂಡೆ ಎಂಬ ಪದದಿಂದ ಆರಂಭವಾಗುತ್ತದೆ. ಕೊನೆಗೆ ಆದರ ಮುಕ್ತಾಯವು ಜನಾಂಗ ಅಥವಾ ಸಮುದಾಯವನ್ನು ಗುರುತಿಸುವ ನಿಟ್ಟಿನಲ್ಲಿ ಕೊನೆಗೊಳ್ಳುತ್ತದೆ. ಹೀಗಾಗಲೇ ಹಲವಾರು ಚರ್ಚೆಗಳ ಮೂಲಕ ಹಂಡೆ ಪದದ ವಿಸ್ತಾರವನ್ನು ನೋಡಲಾಗಿದೆ. ಹಂಡೆ ಎಂಬ ಪದಕ್ಕೆ ವೃತ್ತಿವಾಚಕವಾಗಿ, ಸ್ಥಳವಾಚಕವಾಗಿ ಹಾಗೂ ಜಾತಿ ಸೂಚಕವಾಗಿ ಇರಬಹುದೆಂದು ವಿದ್ವಾಂಸರರು ಭಿನ್ನ ನೆಲೆಯಲ್ಲಿ ಚರ್ಚಿಸಿದ್ದಾರೆ. ಈ ಮೇಲಿನ ಮೂರು ರೀತಿಯಲ್ಲಿ ನೋಡುವಾಗ ಹಂಡೆ ಎಂಬ ಪದವನ್ನು ವ್ಯಕ್ತಿನಾಮ ವಾಚಕವಾಗಿಯೂ ಅಧ್ಯಯನ ಮಾಡುವ ಅವಕಾಶವಿದೆ.

ವ್ಯಕ್ತಿನಾಮ ವಾಚಕವಾಗಿ ನೋಡುವುದದಾರೆ ಸಮಾಜದಲ್ಲಿ ವ್ಯಕ್ತಿಗಳ ಮತ್ತು ಸಮುದಾಯಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯನ್ನು ತಿಳಿದುಕೊಳ್ಳಲು ಸಹಾಯಕವಾಗುತ್ತದೆ. ಉದಾಹರಣೆಗೆ: ಸುಬ್ರಮಣ್ಯರಾವ್, ಶ್ರೀನಿವಾಸ್ ಅಯ್ಯಂಗಾರ್, ಪ್ರಾಣೇಶ್‌ರಾವ್ ಈ ರೀತಿಯ ಹೆಸರುಗಳನ್ನು ಗುರುತಿಸಿದರೆ ಮೇಲ್ವರ್ಗದ ಸಮುದಾಯಕ್ಕೆ ಸೇರಿದ ವ್ಯಕ್ತಿಗಳೆಂದು ಗುರುತಿಸಬಹುದು. ಹಾಗೆಯೇ ಕರಿಯ, ಮಾದ, ಚಿನ್ನಿ, ಹನುಮ, ಬಸ್ಯ ಮುಂತಾದ ಹೆಸರುಗಳು ನೋಡಿದ ಕೂಡಲೆ ಕೆಳಜಾತಿಯ ವ್ಯಕ್ತಿಗಳೆಂದು ಗುರುತಿಸಬಹುದು. ಹೀಗೆ ಸಮಾಜದಲ್ಲಿ ವ್ಯಕ್ತಿಗಳ ಮೂಲಕ ಜಾತಿ, ವರ್ಗ, ಲಿಂಗ, ವರ್ಣ ಹಾಗೂ ಧರ್ಮಗಳು ಮುಂತಾದ ಅಂಶಗಳು ವ್ಯಕ್ತಿನಾಮಗಳ ಮೂಲಕ ಗುರುತಿಸಬಹುದು. ಹೀಗಾಗಿ ಈ ಮೇಲಿನ ಸಾಮಾಜಿಕ ಭಿನ್ನಾಂಶಗಳ ಮೂಲಕ ಪ್ರವೇಶಿಸಿದರೆ ವ್ಯಕ್ತಿನಾಮಗಳಿಂದ ಚಾರಿತ್ರಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ಕಂಡುಕೊಳ್ಳಬಹುದು. ಆದ್ದರಿಂದ ವ್ಯಕ್ತಿನಾಮಗಳ ಅಧ್ಯಯನದಿಂದಲೂ ಪ್ರವೇಶಿಸುವುದಕ್ಕೆ ಅವಕಾಶವಿದೆ.

ಹಂಡೆ ಅರಸರ ಪರಂಪರೆಯನ್ನು ಗಮನಿಸಿದರೆ ಮುಖ್ಯವಾಗಿ ಈ ಮನೆತನದಲ್ಲಿ ಹಂಡೆ ಹನುಮಪ್ಪನಾಯಕ, ಅಂಕುಶರಾಯ, ದ್ಯಾಮಪ್ಪನಾಯಕ, ನಿಚ್ಚಮದುವಣಿಗ ರಾಮಪ್ಪನಾಯಕ, ಹಿರೇಮಲ್ಲಪ್ಪನಾಯಕ ಚಿಕ್ಕಮಲ್ಲಪ್ಪನಾಯಕ, ಸಿದ್ಧಪ್ಪನಾಯಕ, ದೊಡ್ಡತಲೆ ರಾಮಪ್ಪನಾಯಕ, ಹಂಡೆ ಹನುಮಪ್ಪನಾಯಕ, ಪ್ರಸನ್ನಪ್ಪನಾಯಕ, ಪವಾಡಪ್ಪನಾಯಕ ಹಾಗೂ ನೀಲಮ್ಮ ನಾಯಕಿ ಈ ರೀತಿಯಾಗಿ ಅರಸರ ಮತ್ತು ನಾಯಕಿಯರ ಹೆಸರುಗಳು ಕಂಡುಬಂದಿವೆ ಎಂದು ಹೇಳಬಹುದು.

## ೪.೩. ಹಂಡೆ ಅರಸರ ಮೂಲ

ಹಂಡೆ ಅರಸರ ಮೂಲವನ್ನು ಈ ಹಿಂದೆ ಚರ್ಚಿಸಿದಂತೆ ವಿಜಯನಗರ ಪೂರ್ವ ಮತ್ತು ವಿಜಯನಗರೋತ್ತರ ಎಂದು ಎರಡು ಹಂತದಲ್ಲಿ ಈ ಅರಸರ ಮೂಲದ ಕುರಿತು ಚರ್ಚಿಸುವ ಅಗತ್ಯವಿದೆ. ವಿಜಯನಗರ ಪೂರ್ವದ ಹಂಡೆ ಅರಸರ ಶಾಸನವು ನಮಗೆ ಮೊದಲು ಉಪಲಬ್ದವಿರುವುದು ಆಂದ್ರ ಪ್ರದೇಶದ ಕರ್ನೂಲ್ ಜಿಲ್ಲೆಯ ತಾಡಪತ್ರಿ ತಾಲೂಕಿನ ಗಡ್ಡವಿವಾರಿಪಲ್ಲಿ ಪಟ್ಟಯ್ಯ ಎಂಬ ಗ್ರಾಮದಲ್ಲಿ ಸಿಕ್ಕಿರುವ ಕ್ರಿ.ಶ.೯೦೦ರ ಪಂದಿ ಅರಸನ ರಾಷ್ಟ್ರಕೂಟರ ಅರಸನಾಗಿರುವ ಉಲ್ಲೇಖವಿದೆ. ಇಲ್ಲಿಂದಲೆ ಹಂಡೆ ಅರಸು ಮನೆತನದ ಮೂಲವನ್ನು ಗುರುತಿಸಬೇಕಾಗಿದೆ. ಕ್ರಿ.ಶ.೯೬೮ರಲ್ಲಿ ಚಿತ್ರದುರ್ಗ ತಾಲೂಕಿನ ಬೇವಿನಹಳ್ಳಿ ಗ್ರಾಮದ ಶಾಸನವು ಮಾನ್ಯಖೇಟದಿಂದ ರಾಷ್ಟ್ರಕೂಟರ ಕೊಟ್ಟಿಗದೇವನ ಆಳ್ವಿಕೆಯಲ್ಲಿ ಮಹಾಸಾಮಂತ ಪಂದಿಗ ಅರಸ ಮುದಲೂರು, ಮುಳಗವಾಡಿ ಎಂಬ ಗ್ರಾಮಗಳನ್ನು ದಾನ ನೀಡಿದ ವಿವರವಿದೆ. ಈ ಶಾಸನದ ಪ್ರಭಾವವನ್ನು ಕ್ರಿ.ಶ.೯೬೮ರ ಈ ರಾಷ್ಟ್ರಕೂಟರ ಮಹಾಸಾಮಂತ ಪಂದಿಯರಸನ ಕುರಿತು ಬಂದ ಶಾಸನದಲ್ಲಿ ಗುರುತಿಸಬಹುದಾಗಿದೆ.

"ಮಹಾಸಾಮನ್ತ ಚಾಳುಕ್ಯ ಸರ್ವ್ವಜ್ಞಂ
ಗುಣರತ್ನಾಕರಂ ಸತ್ಯಕಾನೀನಂ
ಪರಹಿತಪವನಜಂ ಪರಬಲದಣುಗಂ
ದ್ರೋಹರ ಸೂಲಂ ಮದಕರಿಗಂಡ
ಶ್ರೀಮತ್ ಪಂದಿಗಂ"

ಎಂದಿರುವುದನ್ನು ಗಮನಿಸಬಹುದಾಗಿದೆ.

ಶಾಸನೋಕ್ತ ಚಾಳುಕ್ಯ ಸರ್ವ್ವಜ್ಞಂ ಗುಣರತ್ನಾಕರಂ ಎಂಬ ಬಿರುದು ಹೊಂದಿದ್ದ ಪಂದಿಗ ಅರಸನು ರಾಷ್ಟ್ರಕೂಟರಿಗಿಂತ ಪೂರ್ವದ ಬಾದಾಮಿ ಚಾಲುಕ್ಯರ ವಂಶಸ್ಥನೆಂಬುದು ಸ್ಪಷ್ಟವಾಗಿ ನಿರೂಪಿತವಾಗಿದೆ. ಬಾದಾಮಿ ಚಾಲುಕ್ಯ ಸಾಮ್ರಾಜ್ಯ ಅಳಿದು ಹೋದ ಮೇಲೆ ಆ ವಂಶಸ್ಥರು ರಾಷ್ಟ್ರಕೂಟರ ಅಧೀನದಲ್ಲಿ ಸಾಮಂತರಾಗಿ ಕಾರ್ಯ ನಿರ್ವಹಿಸುತ್ತಿರುವ ಸಂದರ್ಭದಲ್ಲಿ ಈ ಶಾಸನ ಬಂದಿರುವಂತಿದೆ.

ಹೀಗಾಗಿ ಈ ಹಂಡೆ ಅರಸರ ಮೂಲವು ಬಾದಾಮಿ ಚಾಲುಕ್ಯರ ಕಾಲದವರೆಗೂ ಹಿಂದಕ್ಕೆ ಹೋಗುತ್ತದೆ. ವಿಶೇಷವಾಗಿ ಮಹಾಮಂಡಳೇಶ್ವರ, ಮಹಾಸಾಮಂತ, ದಂಡನಾಯಕರನ್ನಾಗಿ ಚಕ್ರವರ್ತಿಯು ತನ್ನ ಹತ್ತಿರದ ಸಂಬಂಧಿಗಳನ್ನೇ ನೇಮಿಸುತ್ತಿದ್ದನು. ಹೀಗಾಗಿ ಈ ಶಾಸನೋಕ್ತ

ಮಹಾಸಾಮಂತ ಪಂದಿಗನು ಬಾದಾಮಿ ಚಾಲುಕ್ಯರ ವಂಶಸ್ಥನೆಂಬುದರಲ್ಲಿ ಎರಡು ಮಾತಿಲ್ಲ. ಹಂಡೆ ಅರಸರು ಬಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲ್ಲೂಕಿನ "ಮುತ್ತಗಿ" ೧೬ನೇ ಶತಮಾನದಲ್ಲಿ ಹಂಡೆ ಅರಸುಮನೆತನದ ಮೂಲಪುರುಷನೆಂದರೆ "ಗೌಡ ಲಕ್ಕಿನಾಯಕ." ಇವನಿಗೆ ಇಬ್ಬರು ಮಕ್ಕಳಿದ್ದರು. ಅವರು ಹಂಡೆ ಹನುಮಪ್ಪನಾಯಕ ಮತ್ತು ಬಳಗನಾಯಕ ಎಂಬುವರು. ಇವರಲ್ಲಿ ಬಳಗನಾಯಕನು ಬಸವನ ಬಾಗೇವಾಡಿ ಸುತ್ತಲಿನ ಪ್ರದೇಶವಾದ "ವಡವಡಗಿ" ಪ್ರಾಂತಗಳಲ್ಲಿ ನಾಡಗೌಡಕಿ ಕೆಲಸವನ್ನು ನಿರ್ವಹಿಸುತ್ತಿದ್ದನು ಹಾಗೂ 'ಮುತ್ತಗಿ' ಸುತ್ತಮುತ್ತಲಿನ ಮೂವತ್ತು ಪ್ರಾಂತಗಳ ನಿರ್ವಹಣೆಯನ್ನು ಹಂಡೆ ಹನುಮಪ್ಪನಾಯಕನು ಮಾಡುತ್ತಿದ್ದನು. ಈ ಮನೆತನದವರು ಧಾರ್ಮಿಕವಾಗಿ ಶೈವ ಪರಂಪರೆಯ ಆರಾಧಕರು. ಇವರು ಸೊನ್ನಲಾಪುರದ ಸಿದ್ಧರಾಮೇಶ್ವರರನ್ನು ಆರಾಧ್ಯ ದೇವರೆಂದು ಭಕ್ತಿಯಿಂದ ಮಣಿದವರು. ಇವರನ್ನು ದಾನಶಾನಗಳಲ್ಲಿ "ಶ್ರೀ ಸಿದ್ಧರಾಮದೇವ ವರ ಪ್ರಸನ್ನ"ರೆಂದು ಅಂಕಿತಗೊಂಡವರು. "ಇವರು ಜಾತಿಯೊಳಗೆ ಶಿವಭಕ್ತರು, ಲಿಂಗವಂತರು, ಇವರ ಕುಲದೈವ ವಿಜಾಪುರದ ಸೀಮೆಯೊಳಗೆಯಿದ್ದ ಸೊನ್ನಲಾಪುರದ ಸಿದ್ಧರಾಮೇಶ್ವರನು ಇವರು ಶಿವಪೂಜೆ ಮಾಡದೆ ಗಂಗಾಪಾನ ಸಹ ಮಾಡುವುದಿಲ್ಲ. ಮಧುರ ಆಹಾರಗಳೇ ಹೊರರ್ತು ಮದ್ಯ ಮಾಂಸಾದಿಗಳ ಭಕ್ಷಣೆ ಮಾಡರು, ಮೈನೆರೆದ ಹುಡುಗಿಯರನ್ನು ಮದುವೆ ಮಾಡಿಕೊಳ್ಳರು. ಒಂಬತ್ತು ವರುಷದೊಳಗಾಗಿ ಹೆಂಣುಗಳು ಯಿದ್ದರೆ ಪ್ರಸ್ತಮಾಡಿಕೊಳ್ಳುವುದೂ, ಕಾಲ ಪ್ರಮಾಣದಿಂದ ಗಂಡ ಸತ್ತರೆ ತಾಳಿ ಕೂಡಾವಳಿ ಮಾಡುವ ಸಂಪ್ರದಾಯವಿಲ್ಲಾ ಸತ್ತರೆ ಸಮಾಧಿ ವಿನಹ ದಹನ ಮಾಡರು"

ಇವರು ಆಧ್ಯಾತ್ಮಿಕ, ಆಚಾರ ಪೂರ್ಣವಾದ ಭಕ್ತಿಯಿಂದ ದೇವರನ್ನು ಕಂಡವರು. ಹಾಗೆಯೇ ಗುರುಪರಂಪರೆಯಲ್ಲಿ ಅಚಲವಾದ ನಂಬಿಕೆ. ತಮ್ಮ ಹಿರಿಯರಿಗೆ ಸುಕೃತವಾಗಲೆಂದು ಮಠಮಾನ್ಯಗಳಿಗೆ ದಾನದತ್ತಿ ನೀಡಿದ ಅನೇಕ ವಿವರಗಳು ದೊರೆಯುತ್ತವೆ.

ಹಂಡೆ ಪಾಳೆಗಾರರ ಮೂಲಪುರುಷನಾದ ಹಂಡೆ ಹನುಮಪ್ಪನಾಯಕನು ಬಿಜಾಪುರದ ಆದಿಲ್‌ಶಾಹಿ ಕೈಕೆಳಗೆ ಸರನಾಡಗೌಡನಾಗಿ, ತನ್ನ ಶೌರ್ಯ ಸಾಹಸಗಳಿಂದ ದೊರೆಯ ವಿಶೇಷ ಪ್ರೀತಿಯನ್ನು ಸಂಪಾದಿಸಿ ಸುಲ್ತಾನನ ಆಸ್ಥಾನದಲ್ಲಿ ದಂಡನಾಯಕನಾಗಿ ಕಾರ್ಯನಿರ್ವಹಿಸುತ್ತಿದ್ದನು. ಇವನ ಕಾರ್ಯದಕ್ಷತೆಯನ್ನು ಮನಗಂಡ ಸುಲ್ತಾನನು "ವಜೀರಪ್ಪ" ಎಂಬ ಬಿರುದು ಕೊಟ್ಟು ಗೌರವಿಸುತ್ತಾನೆ. ದಕ್ಷಿಣ ಪ್ರಾಂತ್ಯದ ಬಳ್ಳಾರಿ, ಕುರುಗೋಡು, ತೆಕ್ಕಲಕೋಟೆ ಹಾಗೂ ಬಂಕಾಪುರವನ್ನು ಸುಲ್ತಾನನಿಗೆ ನಿಯಂತ್ರಿಸುವುದು ತುಂಬಾ ಕಷ್ಟವಾಗಿತ್ತು. ಆಗ ಶೂರನಾದ ಹಂಡೆ ಬಾಲದ ಹನುಮಪ್ಪ ನಾಯಕನ ನೇತೃತ್ವದಲ್ಲಿ ಸೈನ್ಯವನ್ನು ಕೊಟ್ಟು ಈ ಪ್ರಾಂತಗಳ ಆಡಳಿತವನ್ನು

ನಿರ್ವಹಿಸಲು ಕಳುಹಿಸುತ್ತಾನೆ. ಬಂಕಾಪುರಕ್ಕೆ ಬಂದು ಅಲ್ಲಿ ತಲೆ ಎತ್ತಿದ ಅರಾಜಕತೆಯನ್ನು ಹೋಗಲಾಡಿಸಿ ಅನೇಕ ಸಾಮಾಜಿಕ ಮತ್ತು ಜನಹಿತವಾದ ಕಾರ್ಯಗಳನ್ನು ಮಾಡಿ ಪ್ರಜೆಗಳ ಅಪಾರ ವಿಶ್ವಾಸ ಗಳಿಸುತ್ತಾನೆ. ಈತನ ಸೇವಾನಿಷ್ಠೆಯನ್ನು ಪರಿಗಣಿಸಿ ಸುಲ್ತಾನನು ಬಿಜಾಪುರಕ್ಕೆ ಕರೆಸಿಕೊಂಡನು. ಹಂಡೆ ಬಾಲದ ಹನುಮಪ್ಪನಾಯಕನು ಮೊದಲು ಮೂರು ಪರಗಣಗಳಿಗೆ ಒಡೆಯನಾಗಿದ್ದು, ನಂತರದಲ್ಲಿ ಅವನ ಶೌರ್ಯ-ಸಾಹಸ ಮತ್ತು ಚಾಣಾಕ್ಷನಾಗಿರುವುದರಿಂದ ಸುಲ್ತಾನನು ಇವನನ್ನು ಹನ್ನೊಂದು ಪರಗಣಗಳಿಗೆ ಒಡೆಯನಾಗಿ ನೇಮಿಸುತ್ತಾನೆ.

### ೪.೪. ಹಂಡೆ ಮನೆತನದ ಗುರುಪರಂಪರೆ

ವಿಜಯನಗರ ಕಾಲದಲ್ಲಿ ಅಳಿಯ ರಾಮರಾಯನ ಕೃಪೆಗೆ ಪಾತ್ರರಾಗಿ ಮತ್ತು ಸಾಮಂತ ಅರಸರಾಗಿ, ಮಾಂಡಲಿಕರಾಗಿ ನಿಷ್ಠೆಯಿಂದ ದುಡಿದವರಲ್ಲಿ ಪ್ರಮುಖರಾದವರು ಈ ಅರಸರು. ಇದಕ್ಕೂ ಪೂರ್ವದಲ್ಲಿ ಬಿಜಾಪುರದ ಆದಿಲ್‌ಶಾಹಿಯೊಂದಿಗೆ ಉತ್ತಮ ಸಂಬಂಧ ಹೊಂದಿದ್ದರು. ನಂತರದಲ್ಲಿ ಈ ಇಬ್ಬರಿಗೂ ವೈಮನಸ್ಸಿನಿಂದ ಬಳ್ಳಾರಿ ಪ್ರದೇಶಕ್ಕೆ ವಲಸೆ ಬಂದು ವಿಜಯನಗರದ ಅರಸರಿಗೆ ಸಹಾಯಹಸ್ತವನ್ನು ಮಾಡುತ್ತಾನೆ. ಮುಂದೆ ಅಹ್ಮದ್ ನಗರದ ನಿಜಾಮಷಾ ಅರಸನ್ನು ಸೋಲಿಸಿ ವಿಜಯನಗರದ ಅರಸರಿಗೆ ತನ್ನ ನಿಷ್ಠೆಯನ್ನು ಪ್ರದರ್ಶಿಸಿದವನು ಹಂಡೆ ಹನುಮಪ್ಪ ನಾಯಕನು. ಹಂಡೆ ಅರಸರಿಗೆ ಗುರುಗಳ ಮೇಲೆ ಇದ್ದ ಭಕ್ತಿ, ದೇವರಲ್ಲಿ ಅಚಲವಾದ ನಂಬಿಕೆ ಅನುಪಮವಾದದ್ದು, ಇವರ ರಾಜ ಗುರುಪರಂಪರೆ ಮೂರು ರೀತಿಯಲ್ಲಿ ಬೆಳೆದುಬಂದಿರು ವುದನ್ನು ಈ ಕೆಳಗಿನಂತೆ ಗಮನಿಸಬಹುದು.

೧. ಬಳ್ಳಾರಿ ಪ್ರದೇಶದಲ್ಲಿ ಶ್ರೀ ಜಗದ್ಗುರು ಕೊಟ್ಟೂರು ಸಂಸ್ಥಾನ ಮಠದ ರಾಜಗುರು ಪರಂಪರೆ.

೨. ಅನಂತಪುರ ಪ್ರದೇಶದಲ್ಲಿ ಶ್ರೀ ಶೈಲ ಜಗದ್ಗುರು ನಿಡುಮಾಮಿಡಿ ಪೀಠದ ರಾಜಗುರು ಪರಂಪರೆ.

೩. ಕುರುಗೋಡು-ಬಂಕಾಪುರ ಪ್ರದೇಶದಲ್ಲಿ ಶ್ರೀ ತೋಂಟದ ಜಗದ್ಗುರು ಪೀಠ ಪರಂಪರೆ.

ಈ ಮೂರು ಪ್ರದೇಶಗಳಲ್ಲಿ ಮೂರು ಜನ ಬೇರೆ ಬೇರೆ ರಾಜಗುರುಗಳನ್ನು ಈ ಅರಸರು ಹೊಂದಿದ್ದರು. ಈ ಅರಸರ ಪ್ರತಿಯೊಂದು ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಸ್ವಾಮಿಗಳು ಮಾರ್ಗದರ್ಶನ ಮತ್ತು ಆಶೀರ್ವಾದವನ್ನು ನೀಡುತ್ತಿದ್ದರು. ಗುರುಗಳ ಅಪ್ಪಣೆ ಮೇರೆಗೆ ಈ ಹಂಡೆ ಅರಸರು ಬಹಳ ನಿಷ್ಠೆಯಿಂದ ನಡೆದುಕೊಳ್ಳುವುದರ ಮೂಲಕ ಧಾರ್ಮಿಕ ಕಾರ್ಯಗಳು ಮತ್ತು ಸಾಮಾಜಿಕ ಕಾರ್ಯಗಳನ್ನು ಕೈಗೊಳ್ಳುತ್ತಿದ್ದರು.

ಹಂಡೆ ಅರಸರ ಪ್ರಮುಖ ನಾಯಕನಾದ ಹಂಡೆ ಬಾಲದ ಹನುಮಪ್ಪನಾಯಕನು ಗುರುಪರಂಪರೆಗೆ ನೀಡಿದ ದಾನಪತ್ರ ಮತ್ತು ಬಳ್ಳಾರಿ ನಾಯಕರ ಕಾಲದಲ್ಲಿ ಪರಮ ತಪಸ್ವಿ ಶ್ರೀ ಕಪ್ಪಿನ ಚನ್ನಬಸವ ಸ್ವಾಮಿಗಳವರು ರಾಜಪೂಜಿತರು ಜನಮಾನ್ಯರೂ ಆಗಿದ್ದವರು. ಶ್ರೀ ಮಠದ ಪತ್ರಗಳಲ್ಲಿ ಬರುವ ಈ ಕೆಳಗಿನ ಒಕ್ಕಣಿಕೆ ಇದಕ್ಕೆ ನಿದರ್ಶನವಾಗಿದೆ.

"ಶ್ರೀಮತ್ಪರಮ ಕೈಲಾಸ ಸಿಂಹಸಾನಾರೂಢ ಪರಶಿವ
ಲೀಲಾಕೃತ ಕಳೇವರಮಪ್ಪ ನಂದೀಶಾದಿ ರುದ್ರಪ್ರಮಥ
ಗಣಂಗಳ ಸಾಂಪ್ರದಾಯವಿಡಿದೊಪ್ಪುವ ತೋಂಟದ
ಸಿದ್ಧಲಿಂಗಾರ್ಯರ ಕೃಪಾಪ್ರಸನ್ನರಾದ ತದ್ಗುರು
ಬೋಧಾಮೃತ ರಸವಾಂತು ಉಪದೇಶಿಸುವಲ್ಲಿ
ಶರಣ ಜನ ಹೃದಯಾನಂದ ಭಕ್ತ ಜನ ಮುಖ ಪಂಕಜ
ದಿವಾಕರ ಷಟುಸ್ಥಲ ಗಾನ ಪ್ರಭಾಪುಂಜ ರಂಜಿತ
ರಾಜರಾಜ ಶ್ರೀ ಹೇಮಕೂಟ ಸಿಂಹಾಸನಾಧ್ಯಕ್ಷರಾದ
ಶಿವಾನುಭವ ಚರಮೂರ್ತಿಗಳಾದಂಥ ಕಪ್ಪಿನ
ಚನ್ನಬಸವ ದೇವರವರ ಪಾದಪದ್ಮಂಗಳ ಸನ್ನಿಧಾನಕ್ಕೆ"

ಹಂಡೆ ಹನುಮಪ್ಪನಾಯಕನು ಗುರುಪರಂಪರೆ ಹಿನ್ನೆಲೆಯಲ್ಲಿ ಗುರುಗಳ ಆಶೀರ್ವಾದ ಅವರ ಅಪ್ಪಣೆಯಂತೆ ಶ್ರೀ ಶ್ರೀ ಹೇಮಕೂಟ ಸಿಂಹಾಸನಾಧ್ಯಕ್ಷರಾದ ಶಿವಾನುಭವ ಚರಮೂರ್ತಿ ಗಳಾದಂಥ ಕಪ್ಪಿನ ಚನ್ನಬಸವ ದೇವರ ವರ ಪಾದಪದ್ಮಂಗಳಿಗೆ ಮಣಿದು ಸ್ವಾಮಿನಿಷ್ಠೆಯನ್ನು ಪಾಲಿಸಿಕೊಂಡು ಬಂದವರು ಹಂಡೆ ಅರಸರು. ಇವರ ಗುರುಪರಂಪರೆಯು ಹೊಸಪೇಟೆಯ ಶ್ರೀ ಕೊಟ್ಟೂರಸ್ವಾಮಿ ಸಂಸ್ಥಾನ ಮಠದಲ್ಲಿ ಲಭ್ಯವಾಗಿರುವ ಕಾಗದ ಪತ್ರ ಸಾಹಿತ್ಯನ್ವಯ ಗುರು ಪರಂಪರೆಯ ವಿವರವಿದು.

| | | |
|---|---|---|
| ೧. | ಶ್ರೀ ಕಪ್ಪಿನ ಚನ್ನಬಸವ ಸ್ವಾಮಿಗಳು | ಕ್ರಿ.ಶ.೧೫೧೭ |
| ೨. | ಶ್ರೀ ಸಿದ್ಧೇಶ್ವರ ಸ್ವಾಮಿಗಳು | ಕ್ರಿ.ಶ.೧೫೨೧ |
| ೩. | ಶ್ರೀ ನಿರಂಜನಪ್ರಭು ಸ್ವಾಮಿಗಳು | ಕ್ರಿ.ಶ.೧೫೪೬ |
| ೪. | ಶ್ರೀ ಸಿದ್ಧಲಿಂಗ ಸ್ವಾಮಿಗಳು | ಕ್ರಿ.ಶ.೧೫೪೯ |
| ೫. | ಶ್ರೀ ಪಂಚಾಕ್ಷರಿ ಸ್ವಾಮಿಗಳು | ಕ್ರಿ.ಶ.೧೫೫೫ |
| ೬. | ಶ್ರೀ ಸಿದ್ಧರಾಮ ಸ್ವಾಮಿಗಳು | ಕ್ರಿ.ಶ.೧೬೩೦ |
| ೭. | ಶ್ರೀ ಮರಿ ಮಹಾಂತ ಸ್ವಾಮಿಗಳು | ಕ್ರಿ.ಶ.೧೬೬೨ |

೮. ಶ್ರೀ ಮರಿ ಕೊಟ್ಟೂರು ಸ್ವಾಮಿಗಳು ಕ್ರಿ.ಶ.೧೭೦೭

೯. ಶ್ರೀ ಮರಿ ತೋಂಟದಾರ್ಯ ಸ್ವಾಮಿಗಳು ಕ್ರಿ.ಶ.೧೭೨೭

೧೦. ಶ್ರೀ ಮರಿ ಮಹಾಂತ ಸ್ವಾಮಿಗಳು ಕ್ರಿ.ಶ.೧೭೩೪

೧೧. ಶ್ರೀ ಮರಿ ಕೊಟ್ಟೂರು ಸ್ವಾಮಿಗಳು ಕ್ರಿ.ಶ.೧೭೩೯

೧೨. ಶ್ರೀ ಚನ್ನಬಸವ ದೇವರು ಕ್ರಿ.ಶ.೧೭೪೬

೧೩. ಶ್ರೀ ಮರಿ ಕೊಟ್ಟೂರು ಸ್ವಾಮಿಗಳು ಕ್ರಿ.ಶ.೧೭೭೩

೧೪. ಶ್ರೀ ಮರಿ ಮಹಾಂತ ಸ್ವಾಮಿಗಳು ಕ್ರಿ.ಶ.೧೮೦೮

೧೫. ಶ್ರೀ ಚನ್ನಬಸವೇಶ್ವರ ದೇವರು ಕ್ರಿ.ಶ.೧೮೧೭

೧೬. ಶ್ರೀ ಕೊಟ್ಟೂರು ಸ್ವಾಮಿಗಳು ಕ್ರಿ.ಶ.೧೮೪೭

೧೭. ಶ್ರೀ ಮರಿ ಕೊಟ್ಟೂರು ಸ್ವಾಮಿಗಳು ಕ್ರಿ.ಶ.೧೮೯೭

೧೮. ಶ್ರೀ ಕೊಟ್ಟೂರು ಸ್ವಾಮಿಗಳು ಕ್ರಿ.ಶ.೧೯೩೨

೧೯. ಶ್ರೀ ಸಂಗನಬಸವ ಸ್ವಾಮಿಗಳು ಕ್ರಿ.ಶ.೧೯೭೨

ಈ ಗುರುಪರಂಪರೆಯಲ್ಲಿ ಶ್ರೀ ಕಪ್ಪಿನ ಚನ್ನಬಸವೇಶ್ವರ ಸ್ವಾಮಿಗಳು ಶ್ರೀ ಬಸವೇಶ್ವರ ಸ್ವಾಮಿಗಳ ಸಾಂಪ್ರದಾಯಿಕರಾಗಿ ಅಷ್ಟಾವರಣವೇ ಅಂಗವಾಗಿ, ಪಂಚಾಚಾರವೇ ಪ್ರಾಣವಾಗಿ ಆಚರಿಸಿ ಭಕ್ತರನ್ನು ಉದ್ಧರಿಸಿದ ಉಲ್ಲೇಖಗಳು ಅಪೂರ್ವವಾಗಿವೆ.

ಶ್ರೀ ಕಪ್ಪಿನ ಚನ್ನಬಸವೇಶ್ವರ ಸ್ವಾಮಿಗಳು ಬಹಳ ಕರ್ತೃತ್ವಶಾಲಿಗಳು. ಅವರು ಭಾರತದಲ್ಲಿ ಆಸೇತು-ಹಿಮಾಚಲದವರೆಗೆ ಪರಮಗುರು ಶ್ರೀ ತೋಂಟದ ಸಿದ್ಧಲಿಂಗಯತಿಗಳಂತೆ ಸಂಚರಿಸಿ ಧರ್ಮಪ್ರಚಾರ ಕೈಕೊಂಡವರು. ಕಲ್ಯಾಣ, ಕಲಬುರ್ಗಿ, ಬೀದರ, ಬಳ್ಳಾರಿ, ಕೊಟ್ಟೂರು, ಕುರುಗೋಡು, ಕಮಲಾಪುರ, ಹುನಗುಂದ, ಗೂಳ್ಯದ ಗುಡ್ಡ, ಬದಾಮಿ. ನರಗುಂದ, ನವಲಗುಂದ, ಡಂಬಳ, ಹುಬ್ಬಳ್ಳಿ, ಧಾರವಾಡ, ಬೆಳಗಾವಿ, ರಾಮದುರ್ಗ, ಕಂಚಿ ಮೊದಲಾದ ನಗರಗಳ ವರ್ತಕರು ಶ್ರೀ ಚನ್ನಬಸವ ಮಹಾಸ್ವಾಮಿಗಳವರನ್ನು ಸಮಸ್ತ ಬಿರುದಾವಳಿಗಳೊಂದಿಗೆ ಕಾಶಿ, ಕೇದಾರ, ಶ್ರೀಶೈಲ ಸೇತುಬಂಧ, ಶಿವಗಂಗೆ, ಉಳವಿ, ಗೋಕರ್ಣ ಕ್ಷೇತ್ರಯಾತ್ರೆಗಳಲ್ಲಿ ಸಮಸ್ತ ದೈವದವರೊಂದಿಗೆ ಸನ್ಮಾನಿಸಿದ ಪ್ರಸಂಗಗಳು ವಿಶಿಷ್ಟವಾಗಿವೆ.

ಶ್ರೀ ಕಪ್ಪಿನ ಚನ್ನಬಸವ ಸ್ವಾಮಿಗಳವರ ಕರಸಂಜಾತರು ಶ್ರೀ ಸಿದ್ಧೇಶ್ವರ ಸ್ವಾಮಿಗಳು. ಬಳ್ಳಾರಿಯ ರಾಜ ಹನುಮಪ್ಪನಾಯಕನು ಪೂಜ್ಯರ ಶಿವಯೋಗದ ಪ್ರಭಾವವನ್ನು ಕಂಡು, ಮೆಚ್ಚಿ ಅವರಿಗೆ ಅಲಕುಂದೆ, ಅಂದ್ರಹಾಳ, ಗೋನಾಳು, ಮುಂಡ್ರಿಗೆ, ಮಿಂಚೇರಿ, ಬೆಳಗಲ್ಲು,

ಬೊಬ್ಬುಕುಂಟೆ, ಇಬ್ರಾಂಪುರ, ಕಪ್ಪಗಲ್ಲು ಮೊದಲಾದ ಗ್ರಾಮಗಳಲ್ಲಿ ಭೂಮಿಯ ದತ್ತಿಗಳನ್ನು ಬಿಟ್ಟ ಉಲ್ಲೇಖವಿದೆ.

ಶ್ರೀ ಮರಿಕೊಟ್ಟೂರ ಸ್ವಾಮಿಗಳವರಿಗೆ ಕ್ರಿ.ಶ. ೧೭೧೭ರಲ್ಲಿ ಬಳ್ಳಾರಿಯ ರಾಜರಾದ 'ಹಂಡೆಯ ಯಶವಂತ, ಪರದಳ ವಿಭಾಡ, ಅರಿರಾಯ ಮಾನಮರ್ದನ ಸದಾ ಶ್ರೀ॥ ॥ ದೇವರ ವರಪ್ರಸನ್ನರಾದ' ಹಂಡೆ ಹಿರೇರಾಮಪ್ಪನಾಯಕರು ಬರೆಯಿಸಿದ ದಾನ ಪತ್ರದಲ್ಲಿ ಹಿರಿಯರಿಗೆ ಸುಕೃತವಾಗಬೇಕೆಂದು, ಪರಗಣೆ ಬಳ್ಳಾರಿಯ ವಿರಕ್ತಮಠದಲ್ಲಿ ದಾಸೋಹಧರ್ಮ ನಡೆಸುವುದಕ್ಕೆ, ಶ್ರೀಶೈಲ ಪಾತಾಳಗಂಗೆಯಲ್ಲಿ ಸಂಕಲ್ಪ ಮಾಡದ ಪ್ರಕಾರ ಭೂಮಿಯನ್ನು ಬಳ್ಳಾರಿಸೀಮೆ ಸಂಗನಕಲ್ಲು ಗ್ರಾಮಸಹಿತ ಸರ್ವಸಾಮಾನ್ಯವಾಗಿ ಕೊಟ್ಟುದಲ್ಲದೆ, ಇದಕ್ಕೆ ವರ್ಷಕ್ಕೆ ಒಂದು ನಾಣ್ಯ ನಿರ್ಣಯ-ಸಾವಿರ ವರಹದ ಸ್ವಾಸ್ತಿಯನ್ನು ಕೊಡಮಾಡಿ ಬಳ್ಳಾರಿ, ಕುರುಗೋಡು, ತೆಕ್ಕಲಕೋಟೆ ಈ ಮೂರು ಮಹಾಲು ಜಕಾತಿಯಲ್ಲಿ ಪ್ರತಿ ಮಹಾಲಿಗೂ ಕಾಲುನಡೆ ೧ಕ್ಕೆ ದುಗ್ಗಾಣಿ ಪ್ರಕಾರ ಮೇಲು ಕಾಸು ಸಹ ಸಂಪಾದಿಸಿ ಅನುಭವಿಸುತ್ತ ಸದರಿ ಮರಿಕೊಟ್ಟೂರ ಸ್ವಾಮಿಗಳು ಶಿವಪೂಜೆಯನ್ನು ಪ್ರಜೆಗಳ ಹಾಗೂ ರಾಜರ ಕಲ್ಯಾಣ ಕೋರುತ್ತ ಮಾಡಬೇಕೆಂದು ದಾನಪತ್ರದಲ್ಲಿಯ ಲಿಖಿತ ಮನನೀಯವಾಗಿದೆ.

ರಾಜಮಾನ್ಯ ರಾಜಪೂಜಿತ ಬಳ್ಳಾರಿ ಚರದ ಜಗಳೂರು ಕಲ್ಲುಮಠಾಧ್ಯಕ್ಷರಾದ ಶ್ರೀ ತೋಂಟದಾರ್ಯ ಮಹಾಸ್ವಾಮಿಗಳವರಿಗೆ ಶ್ರೀ ಮನ್ಮಹಾರಾಜಾಧಿರಾಜ ಖಂಡೆಯ ಯಶವಂತ, ಪರದಳ ವಿಭಾಂಡ, ಅರಿರಾಯ ಮಾನಮರ್ದನ ಖಂಡೆ ರಾಮಪ್ಪ ನಾಯಕರು ಬರೆಸಿಕೊಟ್ಟ ಭೂದಾನ ಪತ್ರದಲ್ಲಿ "ನಮ್ಮ ಹಿರಿಯರಿಗೆ ವಿಶೇಷ ಪುಣ್ಯಫಲ ಪ್ರಾಪ್ತಿಯಾಗಬೇಕೆಂದು ಮಜಕೂಲನಲ್ಲಿ ಒಂದು ಒಕ್ಕಳದ ಗದ್ದೆಯನ್ನು ಮಠಕ್ಕೆ ಕೆರೆ ಹೊಂದಲಿ ಜಾಗ ಸ್ಥಿರಮಾಡಿ, ನಾಲ್ಕು ಮೂಲೆಗೆ ಲಿಂಗಮುದ್ರೆ ಸ್ಥಾಪಿಸಿ ಕೊಟ್ಟು ಇದ್ದೇವೆ. ಸದರಿ ಮಠಕ್ಕೆ ರಾಜಾನಟ್ಟಿಯೊಳಗೆ ಗಿಡ್ನಟ್ಟಿಯೊಳಗೆ ಮೂರು ಹೊಲಗಳ ಸೇರಿ ಒಂದು ಖಂಡುಗದ ಹೊಲಗಳು ಧಾರಾಪೂರ್ವಕ ಉದಕದತ್ತ ಮಾಡಿಕೊಟ್ಟಿರುತ್ತೇವೆ. ಸದ್ರಿ ಭೂಮಿಯೊಳಗಿಂದ ಬಂದ ತೇಜೋಪಾರ್ಜನೆಯಿಂದ ಬಂದ ಹಣವನ್ನು ಲಿಂಗಪೂಜಗೆ ವಿನಿಯೋಗಿಸಿ ತಾವು ನಮ್ಮ ಸಂಸ್ಥಾನಕ್ಕೆ ಆಶೀರ್ವಾದ ಕೊಟ್ಟು ಶಿಷ್ಯ ಪ್ರಶಿಷ್ಯ ಪರಂಪರೆ ಅನುಭವಿಸಿಕೊಂಡು ಬರುವುದು. ಬಿಕ್ಕಲಂ ಜಬಾನಿ ನರಸಿಂಗರಾವು, ತೋಶೇಖಾನಿ ರಾಜಾಹನುಮಪ್ಪನಾಯಕ ದ.ಖುದ್ ದೇವನಾಗರಿ" ಎಂಬ ಬರಹ ಐತಿಹಾಸಿಕ ಸಂಶೋಧನೆಯ ದೃಷ್ಟಿಯಿಂದ ಮಹತ್ವಪೂರ್ಣವಾಗಿದೆ.

ಒಟ್ಟಾರೆಯಾಗಿ ಹಂಡೆ ಅರಸರು ಬಿಜಾಪುರ ಜಿಲ್ಲೆಯ ಮುತ್ತಗಿ ಪ್ರದೇಶದಿಂದ ಕೃಷ್ಣಾನದಿ ಮುಖಾಂತರವಾಗಿ ಬಳ್ಳಾರಿ ಪ್ರದೇಶಕ್ಕೆ ವಲಸೆ ಬರುವುದರ ಮೂಲಕ ತಮ್ಮ ಆಸ್ತಿತ್ವವನ್ನು

ಕಂಡುಕೊಂಡವರು. ಹಂಡೆ ಬಾಲದ ಹನುಮಪ್ಪನಾಯಕನು ಮೊದಲಿಗೆ ಮುತ್ತಗಿ ಪ್ರದೇಶದಲ್ಲಿ ಚಿಕ್ಕ-ಮುಟ್ಟ ಗ್ರಾಮಗಳಲ್ಲಿ ಒಡೆತನವನ್ನು ನಿರ್ವಹಿಸುತ್ತಿದ್ದನು. ವಿಜಯನಗರ ಪತನವಾದ ನಂತರದಲ್ಲಿ ಕ್ರಿ.ಶ.೧೫೬೭ರ ಸುಮಾರಿಗೆ ಬಳ್ಳಾರಿಗೆ ಬಂದು ಸಂಸ್ಥಾನವನ್ನು ನಿರ್ಮಾಣ ಮಾಡಿದನು. ಅಲ್ಲಿಂದ ಕ್ರಿ.ಶ.೧೬೩೨ರವರೆಗೆ ತನ್ನ ಆಳ್ವಿಕೆಯ ಸಂದರ್ಭದಲ್ಲಿ ಅಳಿಯ ರಾಮರಾಯನಿಗೆ ಬೆಂಗಾವಲಾಗಿ ನಿಂತು ವಿಜಯನಗರದ ಮಾಂಡಳಿಕನಾಗಿ ಯಶಸ್ವಿಯಾದನು. ಇದರಿಂದ ಹಂಡೆ ಅರಸರ ರಾಜ್ಯವು ಭೌಗೋಳಿಕವಾಗಿ ವ್ಯಾಪಿಸಲು ಕಾರಣವಾಯಿತು. ಮುಂದೆ ಇವನ ಮಕ್ಕಳು ಆಡಳಿತದ ಅನುಕೂಲಕ್ಕಾಗಿ ರಾಜ್ಯವನ್ನು ಐದು ವಿಭಾಗ ಕ್ರಮವಾಗಿ ವಿಗಂಡಿಸಿಕೊಂಡು ಆಡಳಿತ ವಹಿಸಿಕೊಂಡರು. ಅವುಗಳೆಂದರೆ ಬಂಕಾಪುರ ಸೀಮೆ, ಶಿರವಾಳ, ಕುಂದರ್ಪಿ ಸೀಮೆ, ಬಳ್ಳಾರಿ, ಕುರುಗೋಡು, ಅನಂತಪುರ, ಧರ್ಮಾವರಂ, ನಂದ್ಯಾಲ ಮೊದಲಾದ ಪ್ರದೇಶಗಳಿಗೆ ತಮ್ಮ ಭೌಗೋಳಿಕ ವ್ಯಾಪ್ತಿಯನ್ನು ವಿಸ್ತರಿಸಿದರು. ರಾಜಕೀಯ ಚತುರತೆ, ಧಾರ್ಮಿಕ ಕಾರ್ಯಗಳು ಹಾಗೂ ಸಾಮಾಜಿಕ ಕೆಲಸಗಳಿಗೆ ಆದ್ಯತೆ ನೀಡುತ್ತಿದ್ದವರು.

ಒಟ್ಟಾರೆಯಾಗಿ ಅಧ್ಯಾಯ ಮೂರರಲ್ಲಿ ಹಂಡೆ ಎಂಬುದು ಮನೆತನದ ಹೆಸರಾದರೂ ಈ ಅರಸರು ಅದೇ ಹೆಸರಿನಿಂದ ಗುರುತಿಸಿಕೊಂಡಿದ್ದಾರೆ. ಇತ್ತಿಚಿನ ದಿನಗಳಲ್ಲಿ ಹಂಡೆ ಎಂಬುದು ನಾಮವಾಚಕವಾಗಿ ಬಳಕೆಯಲ್ಲಿದ್ದು, ಭೌಗೋಳಿಕವಾಗಿ ಬೇರೆ ಬೇರೆ ಸಮುದಾಯಗಳು ಕಂಡುಬರುತ್ತಿವೆ. ಆಯಾ ಸಮುದಾಯಗಳಿಗೆ ಅನುಗುಣವಾಗಿ ಸಾಂಸ್ಕೃತಿಕ ಭಿನ್ನತೆ ಇರುವುದ್ದನ್ನು ನೋಡಬಹುದು. ಮುಖ್ಯವಾಗಿ ಹಂಡೆ ಮತ್ತು ಹಂಡೆ ವಜೀರ ಎಂಬ ಎರಡು ಪದಗಳನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ. ಯಾವುದೇ ಜನಾಂಗಗಳ ಕುರಿತು ಇಲ್ಲಿ ವಿವೇಚಿಸಲಾಗಿಲ್ಲ. ಹಂಡೆ ಅರಸರು ಗುರುಪರಂಪರೆಯನ್ನು ಭಕ್ತಿಯಿಂದ ಕಂಡವರು. ಗುರುಗಳ ಆಶೀರ್ವಾದ ಮತ್ತು ಅವರ ಅಪ್ಪಣೆಯಂತೆ ಅನೇಕ ಮಠ-ಮಾನ್ಯಗಳಿಗೆ ದಾನ-ದತ್ತಿ ನೀಡುವ ಮೂಲಕ ತಮ್ಮ ಹಿರಿಯರಿಗೆ ಪುಣ್ಯ ಪ್ರಾಪ್ತಿಯಾಗಲೆಂದು ಗುರುಗಳಿಗೆ ಭಕ್ತಿಯಿಂದ ಮಣಿದು ಸಮಾಜೋ-ಧಾರ್ಮಿಕ ಕಾರ್ಯಗಳಿಗೆ ಚಲನೆ ನೀಡುತ್ತಿದ್ದರು. ವಿಜಯನಗರದಂತಹ ಪ್ರಬಲ ಸಾಮ್ರಾಜ್ಯದ ಅಡಿಯಲ್ಲಿ ಇದ್ದು ಕೆಲವೊಂದು ಪ್ರದೇಶಗಳ ಮಾಂಡಲಿಕರಾಗಿ ಯಶಸ್ಸು ಕಂಡವರು. ಭೌಗೋಳಿಕವಾಗಿ ತಮ್ಮ ವ್ಯಾಪ್ತಿಯನ್ನು ವಿಸ್ತರಿಸಿ ಆಡಳಿತದ ಸುವ್ಯವಸ್ಥೆಯನ್ನು ಕಂಡುಕೊಂಡವರು ಹಂಡೆ ಅರಸರು. ಈ ಅಧ್ಯಾಯದಲ್ಲಿ ಹಂಡೆ ಅರಸರ ಮೂಲ, ಭೌಗೋಳಿಕ ವ್ಯಾಪ್ತಿ, ಹಂಡೆ ಪದದ ನಿಷ್ಪತ್ತಿ, ಹಂಡೆ ವಜೀರ ಪದದ ಅರ್ಥ, ಹಂಡೆ ಅರಸರ ಬಿರುದುಗಳು ಹಾಗೂ ಗುರುಪರಂಪರೆ ಕುರಿತು ಸವಿಸ್ತಾರವಾಗಿ ಚರ್ಚಿಸಲಾಗಿದೆ.

## ೪.೫. ಹಂಡೆ ಅರಸರ ಬಿರುದಾವಳಿಗಳು

ಹಂಡೆ ಅರಸರ ಬಿರುದುಗಳು ಅಥವಾ ಪ್ರಶಂಸೆಯು ಮುಖ್ಯವಾಗಿ ಅರಸರು ಕೊಡುವ ದಾನ-ದತ್ತಿಗಳ ಆಧಾರದ ಮೇಲೆ, ಅವರು ಮಾಡಿದ ಸಾಮಾಜಿಕ ಕಾರ್ಯಗಳು, ಆಡಳಿತ ಕಾರ್ಯಗಳನ್ನು ಆಧಾರವಾಗಿಟ್ಟುಕೊಂಡು ಬಿರುದುಗಳನ್ನು ನೀಡುತ್ತಿದ್ದರು. ಬಳ್ಳಾರಿ ಅರಸರಲ್ಲಿ ಪ್ರಮುಖನಾಗಿದ್ದ ಹಂಡೆಯ ಹನುಮಪ್ಪನಾಯಕನನ್ನು ಪರದಳ ವಿಭಾಡ ಅರಿರಾಯ ಮಾನಮರ್ದನ ಹಂಡೆ ಯಶವಂತ ಎಂಬ ಬಿರುದುಗಳನ್ನು ಪಡೆದಿದ್ದಾನೆ. ಶ್ರೀ ಮಠದ ಪೂಜ್ಯರಲ್ಲಿ ಒಬ್ಬರಾದ ಬಳ್ಳಾರಿಯ ಶ್ರೀ ಮರಿಕೊಟ್ಟೂರು ಸ್ವಾಮಿಗಳವರಿಗೆ ಪ್ರಿಯನಾಗಿದ್ದನು.

ಶ್ರೀ ಮನ್ಮಹಾರಾಜಾಧಿರಾಜ ಹಂಡೆಯಶವಂತ ಪರದಳ ವಿಭಾಡ ಅರಿರಾಯ ಮಾನಮರ್ದನ ಸದಾ ಶ್ರೀ ಸಿದ್ಧರಾಮೇಶ್ವರ ದೇವರ ವರಪ್ರಸನ್ನರಾದ ರಾಜಶ್ರೀ ಹಂಡೆ ಹಿರೇರಾಮಪ್ಪ ನಾಯಕ ಹೀಗೆ ಆಯಾ ರಾಜರ ಹೆಸರನ್ನು ಹೇಳುವುದು ಶಾಸನಗಳಲ್ಲಿ ದಾನಪತ್ರಗಳಲ್ಲಿ ಹಾಗೂ ಭಟಾಂಗಿನಿ ಸಾಹಿತ್ಯದಲ್ಲಿ ಕಂಡುಬರುತ್ತದೆ.

ಹಂಡೆ ಕುಲಚಕ್ರವರ್ತಿ, ಧೀರಭೋಗ ದೇವೇಂದ್ರ ಹುನುಮ ಭೂಪಾ ಹಂಡೆಯ ಕುಲತಿಲಕ, ಭೂಪಾಲಕುಲರತ್ನ ಇತ್ಯಾದಿ ಬಿರುದುಗಳು ಭಟಾಂಗಿನಿ ಸಾಹಿತ್ಯದಲ್ಲಿ ಉಲ್ಲೇಖ ಗೊಂಡಿವೆ.

ಬಿಜಾಪುರ ಸುಲ್ತಾನನಾದ ಆದಿಲ್‌ಶಾಹಿ ಹಂಡೆ ಹನುಮಪ್ಪನಾಯಕನಿಗೆ 'ಹಂಡೆ ವಜೀರ' ಎಂಬ ಬಿರುದು ನೀಡಿದ. ಅಲ್ಲಿಂದ ಈ ಮನೆತನದ ಶ್ರೇಯಸ್ಸು ಬಯಸುವ ಗುರು ಮಠಾಧೀಶರು, ಜನರು ಅನೇಕ ಬಿರುದುಗಳನ್ನು ನೀಡಿ ಗೌರವಿಸಿದ್ದಾರೆ. ಒಟ್ಟಾರೆಯಾಗಿ ಈ ಅರಸರ ನಾಡು-ನುಡಿ, ಸಂಸ್ಕೃತಿ, ಸಂಪ್ರದಾಯ ಮುಂತಾದ ಅಂಶಗಳಿಂದ ಇಂದಿಗೂ ಜನಮಾನಸದಲ್ಲಿ ಉಳಿದಿರುವುದು ಕಂಡುಬರುತ್ತದೆ.

## ೪.೬. ಹಂಡೆ ಅರಸುಮನೆತನದ ಭೌಗೋಳಿಕ ವ್ಯಾಪ್ತಿ

ಹಂಡೆ ಅರಸು ಮನೆತನದ ಭೌಗೋಳಿಕ ವ್ಯಾಪ್ತಿಯು ವಿಜಯನಗರ ಪೂರ್ವದ ಇತಿಹಾಸ ಅಸ್ಪಷ್ಟವಾಗಿದ್ದು, ವಿಜಯನಗರೋತ್ತರ ಕಾಲದ ಹಂಡೆ ಅರಸರ ಆಡಳಿತದ ವ್ಯಾಪ್ತಿಯು ಕರ್ನಾಟಕ, ಆಂದ್ರ, ಮಹಾರಾಷ್ಟ್ರ ಮುಂತಾದ ದಕ್ಷಿಣ ಭಾರತದುದ್ದಕ್ಕೂ ವಿಸ್ತಾರಗೊಂಡಿರುವುದು ಕಂಡುಬರುತ್ತದೆ. ಹಂಡೆ ಹನುಮಪ್ಪನಾಯಕನು ಬಿಜಾಪುರ ಜಿಲ್ಲೆಯ ಬಸವನ ಬಾಗೆವಾಡಿ ತಾಲ್ಲೂಕಿನ 'ಮುತ್ತಗಿ' ಎಂಬ ಪ್ರಾಂತದಲ್ಲಿ ಆಡಳಿತ ನಡೆಸುತ್ತಿದ್ದನು. ಮೂವತ್ತು ಹಳ್ಳಿಗಳಿಂದ ಕೂಡಿದ ಮುತ್ತಗಿ ಪ್ರಾಂತವು ಹಂಡೆ ಮನೆತನದ ಮೂಲಪುರುಷನಾದ ಹನುಮಪ್ಪನಾಯಕನು

ಈ ಪ್ರದೇಶಗಳ ಜವಾಬ್ದಾರಿಯನ್ನು ವಹಿಸಿಕೊಂಡಿದ್ದನು. ಈ ಮುತ್ತಗಿ ಪ್ರಾಂತವು ಬಿಜಾಪುರ ಸುಲ್ತಾನನಾದ ಆದಿಲ್‌ಶಾಹಿಯ ಆಡಳಿತಕ್ಕೆ ಒಳಪಟ್ಟಿದ್ದರಿಂದ ಹನುಮಪ್ಪನಾಯಕನ ಪರಾಕ್ರಮವನ್ನು ಮನಗಂಡ ಸುಲ್ತಾನನು ಯೋಗ್ಯ ರೀತಿಯಿಂದ ಹನುಮಪ್ಪನಾಯಕನನ್ನು ಅರಮನೆಗೆ ಬರಮಾಡಿಕೊಳ್ಳುತ್ತಾನೆ. ಅವನ ಸೇವಾಪರ ಮನೋಭಾವಕ್ಕೆ ಮೆಚ್ಚಿ ತನ್ನ ವಿಶ್ವಾಸದ ವ್ಯಕ್ತಿಯನ್ನಾಗಿ ಸ್ವೀಕರಿಸಿ ಬಹುಮಾನವನ್ನಿತ್ತು ಸತ್ಕರಿಸಿ ಮತ್ತು "ವಜೀರಪ್ಪ" ಎಂಬ ಬಿರುದನ್ನಿತ್ತು ಗೌರವಿಸುತ್ತಾನೆ. ಈ ಹೊತ್ತಿಗಾಗಲೇ ದಕ್ಷಿಣ ಪ್ರಾಂತವಾದ ಬಂಕಾಪುರದಲ್ಲಿ ಅರಾಜಕತೆ ಉಂಟಾಗಿದ್ದರಿಂದ ಸುಲ್ತಾನನು ಹಂಡೆ ಹನುಮಪ್ಪನಾಯಕನನ್ನು ಉಸ್ತುವಾರಿಯನ್ನಾಗಿ ನೇಮಿಸುತ್ತಾನೆ. ಈತನ ಮುಂದಾಲೋಚನ ಕ್ರಮ ಹಾಗೂ ಪರಾಕ್ರಮಿಯಾಗಿದ್ದರಿಂದ ಬಂಕಾಪುರದ ಅರಾಜಕತೆಯನ್ನು ತೊಲಗಿಸಿ ಶಾಂತಿಯುತವಾಗಿ ಪ್ರಜೆಗಳ ಯೋಗಕ್ಷೇಮವನ್ನು ವಿಚಾರಿಸುತ್ತಾನೆ. ಹೀಗೆ ಹಂಡೆ ಹನುಮಪ್ಪನಾಯಕನು ಸುಲ್ತಾನನ ವಿಶ್ವಾಸ ಸಂಪಾದಿಸಿಕೊಂಡಿದ್ದನು.

ಹಂಡೆ ಹನುಮಪ್ಪನಾಯನು ಐದು ಜನ ಮಕ್ಕಳನ್ನು ಕರೆದುಕೊಂಡು ಸುಲ್ತಾನನ ಭೇಟಿಯಾಗಲು ಹೋದ. ಸುಲ್ತಾನನು ಸುಂದರವಾದ ಮಕ್ಕಳನ್ನು ನೋಡಿ 'ನಿನ್ನ ಮಕ್ಕಳೊಳಗೆ ಒಬ್ಬ ಮಗನನ್ನು ನನಗೆ ಕೊಡು' ಸಂತಾನವಿಲ್ಲದ ಇಸ್ಲಾಂಧರ್ಮ ಬೆಳೆಯುವುದೆಂದು ಭಾವಿಸಿ ಹನುಮಪ್ಪನಾಯಕನ ಮುಂದೆ ಈ ವಿಚಾರವನ್ನು ಪ್ರಸ್ತಾಪಿಸಿದನು. ಹನುಮಪ್ಪನಾಯಕನಿಗೆ ಸಿಟ್ಟು ತಡೆಯಲಾರದೆ. ತುಂಬಾ ಕೋಪದಿಂದ ಸುಲ್ತಾನನಿಗೆ 'ನಿಮ್ಮ ಜನನದೊಳಗಿರುವ ಒಬ್ಬ ಬೀಬಿಯನ್ನು ಕೊಟ್ಟರೆ ಇಂತಹ ಮಗನನ್ನು ಹುಟ್ಟಿಸಿಕೊಡುತ್ತೇನೆ ಎಂದು ಉದ್ಗರಿಸಿ ಅಲ್ಲಿಂದ ಹೊರನಡೆಯುತ್ತಾನೆ. ಮುಂದೆ ಸುಲ್ತಾನನು ತನ್ನ ಸೈನ್ಯದೊಂದಿಗೆ ಹನುಮಪ್ಪನಾಯಕನ ಬೆನ್ನುಹತ್ತಿದ. ಈ ವೇಳೆಗೆ ಕೃಷ್ಣಾನದಿ ತುಂಬಿದ್ದರಿಂದ ಸುಲ್ತಾನನ ಸೈನ್ಯಕ್ಕೆ ಸಿಗದೆ ಮರಳಿ ಹೋದರು. ಇತ್ತ ಹನುಮಪ್ಪನಾಯಕನು ತನ್ನ ಐದು ಜನ ಮಕ್ಕಳೊಂದಿಗೆ ಕೃಷ್ಣಾನದಿಯ ಮೂಲಕ ಬಳ್ಳಾರಿಯ ಕಡೆಗೆ ವಲಸೆ ಬಂದನು. ಕೆಲಕಾಲ ಬಳ್ಳಾರಿಯಲ್ಲಿ ರಾಜ್ಯವಾಳಿದ್ದರಿಂದ ಇವರು ಬಳ್ಳಾರಿ ಅರಸರೆಂದು ಗುರುತಿಸಿಕೊಂಡವರು. ಕ್ರಿ.ಶ.೧೫೬೭ರಲ್ಲಿ ಬಳ್ಳಾರಿಗೆ ಬಂದು ಸಂಸ್ಥಾನ ಮಾಡಿದನು. ಮುಂದೆ ನಂದ್ಯಾಲ ಪ್ರದೇಶದಲ್ಲಿ ಕ್ರಿ.ಶ.೧೫೬೯ರಲ್ಲಿ ಆ ಪ್ರದೇಶವನ್ನು ತನ್ನದಾಗಿಸಿಕೊಂಡು ಭೌಗೋಳಿಕವಾಗಿ ಕುರುಗೋಡು, ಕುಂದರ್ಪಿ, ಅನಂತಪುರ, ಶಿರಿವಾಳ, ಶಿರಗುಪ್ಪೆ, ಧರ್ಮಾವರಂ ಮೊದಲಾದ ಪ್ರದೇಶಗಳ ರಾಜ್ಯವನ್ನು ಹಂಚಿಕೊಂಡರು.

ವಿಜಯನಗರ ಪತನದ ನಂತರ ಅನೇಕ ಸಣ್ಣಪುಟ್ಟ ಅರಸರು ಪ್ರಬಲರಾಗಿದ್ದರು. ಸದಾಶಿವರಾಯರ ಕಾಲದಲ್ಲಿ ಅಳಿಯ ರಾಮರಾಯನು ಸರ್ವಾಧಿಕಾರ ನಡೆಸುತ್ತಿದ್ದನು. ಆತನ ಪ್ರಾಬಲ್ಯವನ್ನು ಸಹಿಸದ ಆಗ ಕೋಶಾಧಿಕಾರಿಯಾಗಿದ್ದ ಬೊಕ್ಕಸದ ತಿಮ್ಮಯ್ಯನೆಂಬುವನು

ಚತುರಂಗ ಬಲವನ್ನು ತನ್ನ ಸ್ವಾಧೀನಪಡಿಸಿಕೊಂಡು ರಾಮರಾಯನನ್ನು ಸೆರೆಯಲ್ಲಿಡುವುದರಲ್ಲಿದ್ದನು. ತಾನೇ ವಿಜಯನಗರದ ಆಧಿಪತ್ಯವನ್ನು ಸ್ಥಾಪಿಸಲು ಮುಂದಾದನು. ವಿಜಯನಗರವನ್ನು ಆಹುತಿಗೊಳ್ಳಲು ಬಹಮನಿರಾಜ್ಯಗಳು ಹಾತೊರೆಯುತ್ತಿದ್ದವು. ಆಗ ರಾಮರಾಯನ ಆಪ್ತಬಂಧುವಾದ ಇಮ್ಮಡಿ ಕರಿಬಸವ ಸ್ವಾಮಿಗಳ ಆಜ್ಞೆಯ ಮೇರೆಗೆ ಸೊನ್ನಲಾಪುರದ ವರಪ್ರಸನ್ನರಾದ ಹಂಡೆ ಹನುಮಪ್ಪನಾಯಕನನ್ನು ಕರೆಸಿಕೊಂಡನು. ಈತನ ಸಹಾಯದಿಂದ ಆಳಿಯ ರಾಮರಾಯನು ಬೊಕ್ಕಸದ ತಿಮ್ಮಯ್ಯನ ಬಂಡಾಯವನ್ನು ಮುರಿದು ವಿಜಯನಗರವನ್ನು ಸ್ವಾಧೀನಪಡಿಸಿಕೊಂಡನು. ತರುವಾಯ ಹಂಡೆ ಹನುಮಪ್ಪನಾಯಕನು ನಿಜಾಂಷಾನನ್ನು ಕೈಸೆರೆ ಹಿಡಿದು ರಾಮರಾಯನಿಗೆ ಒಪ್ಪಿಸಿದನು. ಇದರ ಫಲವಾಗಿ ಹನುಮಪ್ಪನಾಯಕನಿಗೆ ವಿಜಯನಗರದ ಮಾಂಡಲಿಕನಾಗುವ ಭಾಗ್ಯ ದೊರೆಯಿತು. ಈತನ ಪರಾಕ್ರಮವನ್ನು ಕಂಡ ರಾಮರಾಯನು ಆತನಿಗೆ ನಂದ್ಯಾಲ, ಬುಕ್ಕರಾಯ ಸಮುದ್ರ, ಧರ್ಮಾವರ, ಕಣೇಕಲ್ಲು, ಬಳ್ಳಾರಿ, ಕುರುಗೋಡು ಗ್ರಾಮಗಳನ್ನು ಉಂಬಳಿಯಾಗಿ ಹಾಕಿಕೊಟ್ಟನು. ವಿಶಾಲವಾದ ಭೂ ಪ್ರದೇಶದಲ್ಲಿ ರಾಜ್ಯವನ್ನು ವಿಸ್ತರಿಸಿಕೊಂಡು ಆಳ್ವಿಕೆ ನಡೆಸುತ್ತಿದ್ದನು. ಮುಂದೆ ಹಂಡೆ ಬಾಲದ ಹನುಮಪ್ಪನಾಯಕನು ತನ್ನ ಐದು ಮಕ್ಕಳಿಗೆ ರಾಜ್ಯಭಾರವನ್ನು ಮಾಡಲು ಕೆಲವೊಂದು ಪ್ರದೇಶಗಳನ್ನು ನೀಡಿದ. ಮುಖ್ಯವಾಗಿ–

೧. ಅಂಕುಶರಾಯನಿಗೆ ಬಂಕಾಪುರ ಸೀಮೆ.

೨. ದ್ಯಾವಪ್ಪ ನಾಯಕನಿಗೆ ಶಿರಿವಾಳ.

೩. ನಿಚ್ಚಮದುವಣಿಗ ಲಿಂಗರಾಮಪ್ಪ ನಾಯಕನಿಗೆ ಕುಂದರ್ಪಿ ಸೀಮೆ.

೪. ಹಂಡೆ ಹಿರೇಮಲಕಪ್ಪನಿಗೆ ಅನಂತಪುರ, ಧರ್ಮಾವರಂ ಸೀಮೆ.

೫. ಚಿಕ್ಕಮಲ್ಲಪ್ಪನಾಯಕನಿಗೆ ಬಳ್ಳಾರಿ, ಕುರುಗೋಡು.

ಈ ಪ್ರದೇಶಗಳಿಗೆ ತನ್ನ ಆಧಿಪತ್ಯವನ್ನು ಸಾಧಿಸಲು ಹಂಡೆ ಹನುಮಪ್ಪನಾಯಕನು ಭೌಗೋಳಿಕವಾಗಿ ತನ್ನ ವ್ಯಾಪ್ತಿಯನ್ನು ವಿಸ್ತರಿಸಿದ. ಪ್ರಮುಖವಾಗಿ ಇವರ ಆಡಳಿತದ ಅವಧಿಯಲ್ಲಿ ಸಂಗನಕಲ್ಲು, ಬೇವಿನಹಳ್ಳಿ, ಬೊಬುಕುಂಟೆ, ಗೋನಹಾಳು, ಹಂದ್ರಾಳು, ಮುಂಡರಿಗಿ, ಮಣ್ಣೂರು ಹಾಗೂ ಕುಡುತಿನಿ ಇಂತಹ ಮೂವತ್ತಕ್ಕೂ ಹೆಚ್ಚು ಹಳ್ಳಿಗಳು ಸೇರಿದ್ದವು. ಹೀಗಾಗಿ ಹಂಡೆ ಹನುಮಪ್ಪನಾಯಕನ ಕಾಲವನ್ನು, ಹಂಡೆ ಅರಸರ ಕಾಲವನ್ನು ಸುವರ್ಣಯುಗವೆಂದು ಹೇಳ ಬಹುದು. ಅಧಿಕಾರ ಮತ್ತು ಭೌಗೋಳಿಕವಾಗಿ ಈ ಮನೆತವನ್ನು ವಿಸ್ತರಿಸಿದ ಕೀರ್ತಿ ಇವನದೆ. ತನ್ನ ಮಕ್ಕಳಿಗೆ ರಾಜ್ಯವನ್ನು ಹಂಚಿದ ನಂತರ ಈತನು ಬುಕ್ಕರಾಯ ಸಮುದ್ರದಲ್ಲಿ ಬಲವಾದ ಕೋಟೆಯನ್ನು ಕಟ್ಟಿಸಿಕೊಂಡು ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತ ನಡೆಸಿದನು. ಇದರಿಂದ ಇವನ ಭೌಗೋಳಿಕ ವ್ಯಾಪ್ತಿಯು ಎಷ್ಟಿತ್ತೆಂಬುದು ವ್ಯಕ್ತವಾಗುತ್ತದೆ.

ಒಟ್ಟಾರೆಯಾಗಿ ಈ ಅಧ್ಯಯನದಲ್ಲಿ ಹಂಡೆ ಪದದ ಅರ್ಥ, ಹಂಡೆ ಮನೆತನದ ಮೂಲ, ಹಂಡೆ ಮನೆತನದ ಗುರುಪರಂಪರೆ, ಹಂಡೆ ಮನೆತನದ ಬಿರುದಾವಳಿಗಳು ಹಾಗೂ ಹಂಡೆ ಮನೆತನದ ಭೌಗೋಳಿಕ ವ್ಯಾಪ್ತಿಯನ್ನು ಕುರಿತು ಚರ್ಚಿಸಲಾಗಿದೆ.

## ೪.೭. ಹಂಡೆ ಅರಸರ ಕೊನೆಯ ದಿನಗಳು

ಸುಮಾರು ಮೂರು ಶತಮಾನಗಳ ಕಾಲ ಆಳಿದ ಹಂಡೆ ಅರಸುಮನೆತನದವರು ವಿಜಯನಗರದ ಅರಸರಿಗೆ ಶ್ರೀರಕ್ಷೆಯಾಗಿ ನಿಂತವರು. ವಿಜಯಪುರದ ಸುಲ್ತಾನನಿಗೆ ಸಿಂಹಸ್ವಪ್ನವಾಗಿ ಕಾಡಿದವರು. ಲೋಕೋಪಕಾರಿ ಕಾರ್ಯಗಳ ಮೂಲಕ ಜನಮನ್ನಣೆಯನ್ನು ಪಡೆದವರು. ವೀರಶೈವ ಪರಂಪರೆಯನ್ನು ಅವಲಂಬಿಸಿದವರು ಮತ್ತು ಪರಧರ್ಮ ಸಹಿಷ್ಣತಾ ಭಾವನೆಯುಳ್ಳವರಾಗಿದ್ದು, ಇತಿಹಾಸದಲ್ಲಿ ತಮ್ಮದೇ ಆದ ಛಾಪನ್ನು ಮೂಡಿಸಿದ ಇವರ ಕೊನೆಯ ದಿನಗಳು ಕಷ್ಟದಾಯಕವಾಗಿದ್ದವು.

ಹಂಡೆ ಅರಸರ ಕೆಲವು ಅರಸರಿಗೆ ಸಂತಾನಭಾಗ್ಯ ಇಲ್ಲದಿರುವಿಕೆಯಿಂದಲೂ ಅಂತಃಕಲಹಗಳಿಂದಲೂ ಉಂಟಾದ ಅರಾಜಕತೆಯ ಸಂದರ್ಭದಲ್ಲಿ ಹೈದರಾಲಿಯು ಎಪ್ಪತ್ತುಸಾವಿರ ಸೈನ್ಯದೊಂದಿಗೆ ಬಂದು ಬಳ್ಳಾರಿ ಕೋಟೆಯನ್ನು ಮುತ್ತಿಗೆ ಹಾಕಿದನು. ತರುವಾಯ ಕಂಪನಿ ಸರಕಾರದ ಅನುಷ್ಠಾನಗಳಿಂದ ಇವರ ಸಾಮಾಜಿಕ ಆರ್ಥಿಕ ಹಾಗೂ ಧಾರ್ಮಿಕ ಜೀವನಕ್ಕೆ ಬಲವಾದ ಹೊಡೆತ ಬಿದ್ದಂತೆ ತೋರುತ್ತದೆ. "ಟಿಪ್ಪು ಅರಸರ ಜನರು ಇದ್ದರೆಂದು ಕೇಳಲಾಗಿ ಸಿದ್ದರಾಮಪ್ಪನಾಯಕರವರ ಮಕ್ಕಳು ಇದ್ದರೆಂದು ಕಿಲ್ಲೆದಾರ ಮೀರಕಾಶಿಂ ಹೇಳಿದುದು. ಈ ವರ್ತಮಾನವನ್ನು ಕೇಳಿದ ಟಿಪ್ಪುಸುಲ್ತಾನನು ನೀನು ಅನಂತಪುರಕ್ಕೆ ಹೋಗುತ್ತಲೇ ಹಿರಿಯವರಾಗಿರುವ ಮಕ್ಕಳನ್ನು, ಅಳಿಯನ ಮಕ್ಕಳನ್ನು ಗಲ್ಲಿಗೆ ತೂಗ್ವಾಕಿ ಮಿಕ್ಕ ಜನರನ್ನು ಹಜೂರು ಇಲಾಖೆ ಶ್ರೀರಂಗಪಟ್ಟಣಕ್ಕೆ ಕಳುಹಿಸೆಂದು ಹುಕುಂ ಆದ್ದರಿಂದ ಈ ಮೀರಕಾಶಿಂ ಅಪ್ಪಣೆ ತೆಗೆದುಕೊಂಡು ಬಂದು ಅನಂತಪುರಕ್ಕೆ ಟಿಪ್ಪುಸುಲ್ತಾನ ಕೊಟ್ಟ ಹುಕುಂ ಮೇರೆಗೆ ಸಿದ್ದರಾಮಪ್ಪನಾಯಕರ ಮಕ್ಕಳು ಹನುಮಪ್ಪ, ಬಸಪ್ಪ ಅಳಿಯನಾದ ಪ್ರಭುವಯ್ಯ ಬುಕ್ಕರಾಯಸಮುದ್ರಕ್ಕೆ ಹೋಗುವ ಮಾರ್ಗಕ್ಕೆ ಪಡುವಲು ಕಾಶಿವಿಶ್ವೇಶ್ವರನ ತೋಪಿನೊಳಗೆ ಪ್ರಥಮ ಗಿಡದಲ್ಲಿ ಗಲ್ಲಿಗೆ ಹಾಕಿದನು. ಇನ್ನೂ ಅವರ ಸಂಬಂಧಿಕರಾದ ಜನಗಳು ಕಾಂತಪ್ಪ ದಳವಾಯಿ, ಹಾಲ್ ಶರಣಪ್ಪ, ಚಿಕ್ಕ ಸುಬ್ಬರಾಯಪ್ಪ ಮೂವರನ್ನು ನೀಲಮ್ಮನ ತೋಪಿನೊಳಗೆ ಒಂದು ಮಾವಿನ ಗಿಡಕ್ಕೆ ಗಲ್ಲಿಗೆ ಹಾಕಿದನು. ಮಕ್ಕಳಾದ ಇಬ್ಬರನ್ನು ಇನ್ನೂ ಅವರ ಸಂಬಂಧವಾದ ಜನರನ್ನು ಅಮ್ಮನವರನ್ನು ಸಹ ಪಹರೆ ಕೊಟ್ಟು ಶ್ರೀರಂಗಪಟ್ಟಣಕ್ಕೆ ಕಳುಹಿಸಿದ್ದರಿಂದ ಇಲ್ಲಿನ ಅರಮನೆ ಹಾಳಾಯಿತು. ಅತ್ತ ಶ್ರೀರಂಗಪಟ್ಟಣದಲ್ಲಿ ಇದ್ದ ಸಿದ್ದರಾಮಪ್ಪನಾಯಕನಿಗೆ ತಿಂಗಳು ಒಂದಕ್ಕೆ

೭೫ ಕಂಠಿರಾಯ ಹೊನ್ನುಗಳ ಗೋತ್ತುಮಾಡಿ ಅರವತ್ತು ಪ್ರಕಾರ ಸಂಬಳ ನಿರ್ಣಯ ಮಾಡಿ ೨ ಸಾವಿರ ಕಾಮಾಟಿ ಜನರಿಂದ ಕೆಲಸ ನಡೆಸೆಂದು ಆಜ್ಞೆ ನೀಡಿದರು. ಕೆಲದಿನಗಳಾದ ಮೇಲೆ ಅಲ್ಲಿಂದ ಬಂದು ಸಿದ್ದರಾಮಪ್ಪ ಪುರದೊಳಗೆ ಮರಣಹೊಂದಿದನು. ಕೊನೆಯವನಾದ ವಸಂತರಾಯನು ಮೃತನಾದನು. ಸಿದ್ದರಾಮಪ್ಪ ನಾಯಕನ ಎರಡನೇ ಹೆಂಡತಿ ಪೊನ್ನಮ್ಮ ಇವರ ಮಗ ಚಿಕ್ಕರಾಮಪ್ಪನಾಯಕ ಈತನ ಹೆಂಡತಿ ಚಿನ್ನಮ್ಮ ಮುತಾಂದವರು ಕ್ರಿ. ಶ. ೧೮೧೧ರಲ್ಲಿ ಹಂಚಿನಹಾಳ ಬಸವನ ಬಾಗೇವಾಡಿ ತಾಲೂಕಿನ ತಮ್ಮ ಮೂಲ ಪ್ರದೇಶಕ್ಕೆ ಹೋದ ವಿವರಗಳು ಕಂಡುಬರುತ್ತವೆ. ಹೀಗೆ ನಾಡಿನ ಚರಿತ್ರೆಯೆಂದರೆ ರಾಜಮನೆತನದ ಹುಟ್ಟು, ವಂಶಾವಳಿ, ಅವರು ನೀಡಿದ ಆಡಳಿತ, ಸಾಂಸ್ಕೃತಿಕ ಬದುಕು, ಯುದ್ಧ ಮತ್ತು ಪರಿಣಾಮಗಳನ್ನು ಕುರಿತು ವಿವರಿಸುವ ಕಥನವೆಂದು ಹೇಳಬೇಕಾಗುತ್ತದೆ.

**ಅಡಿಟಿಪ್ಪಣಿಗಳು**

೧. ಪಾಟೀಲ ಎಸ್. ಸಿ, ಶಾಸನೋಕ್ತ ಲಿಂಗಾಯತ ಹಂಡೆ ಅರಸುಮನೆತನ, ಪು.ಪ್ರಸ್ತಾವನೆ

೨. ಅದೇ ಪುಸ್ತಕ, ಪು.ಪ್ರಸ್ತಾವನೆ

೩. ಅದೇ ಪುಸ್ತಕ, ಪು.ಪ್ರಸ್ತಾವನೆ

೪. ಅದೇ ಪುಸ್ತಕ, ಪು.ಪ್ರಸ್ತಾವನೆ

೫. ಅದೇ ಪುಸ್ತಕ, ಪು.೩೦

೬. ಅದೇ ಪುಸ್ತಕ, ಪು.೩೪

೭. ಕಲಬುರ್ಗಿ ಎಂ.ಎಂ.(ಪ್ರಸಂ) ಮತ್ತು ವಿದ್ಯಾಶಂಕರ ಎಸ್., ಸಮಗ್ರ ವಚನ ಸಂಪುಟ

೮. ಕಲಬುರ್ಗಿ ಎಂ.ಎಂ.(ಪ್ರಸಂ) ಮತ್ತು ವಿದ್ಯಾಶಂಕರ ಎಸ್.,(ಸಂ), ಸಿದ್ದರಾಮೇಶ್ವರ ವಚನ, ಸಂಪುಟ-೪, ಪು.೧೦.

೯. ಅದೇ, ಪು.೩೮

೧೦. ಅದೇ, ಪು.೪೪

೧೧. ಅದೇ, ಪು.೪೮

೧೨. ಅದೇ, ಪು.೫೧

೧೩. ಶಿವರುದ್ರಮಹಾಸ್ವಾಮಿಗಳು, ಬಸವಪಥ ಸಂಪುಟ ೩೬, ಸಂಚಿಕೆ-೧, ಪು.೬೨

೧೪. ಅದೇ, ಪು.೫೭

೧೫. ಅದೇ, ಪು.೬೯

೧೬. ಅದೇ, ಪು.೬೧

೧೭. ಚೌಧರಿ ಎಂ.ಎಸ್., ಶಾಸನಗಳಲ್ಲಿ ಹಂಡೆ ಅರಸರ ಶೋಧ, ಪು.೨೧೦

೧೮. ಪಾಟೀಲ ಎಸ್.ಸಿ., ಹಂಡೆ ಪಾಳೆಯಗಾರರ ಇತಿಹಾಸ ಮತ್ತು ಪರಂಪರೆ, ಪು.೩೦

೧೯. ಅದೇ, ಪು.೩೦

೨೦. ಅದೇ

೨೧. ಅದೇ

೨೨. ಚೌಧರಿ ಎಂ. ಎಸ್., ಶಾಸನಗಳಲ್ಲಿ ಹಂಡೆ ಅರಸರ ಶೋಧ, ಪು.೨೨೦

## ಅಧ್ಯಾಯ : ಐದು

# ಹಂಡೆ ಅರಸುಮನೆತನ : ಸಾಂಸ್ಕೃತಿಕ ಅಧ್ಯಯನ

೫.೧. ಆಡಳಿತ ವ್ಯವಸ್ಥೆ

೫.೨. ಧಾರ್ಮಿಕ ವ್ಯವಸ್ಥೆ

೫.೩. ಸಾಮಾಜಿಕ ವ್ಯವಸ್ಥೆ

೫.೪. ಆರ್ಥಿಕ ವ್ಯವಸ್ಥೆ

## ಅಧ್ಯಾಯ : ಐದು

# ಹಂಡೆ ಅರಸುಮನೆತನ : ಸಾಂಸ್ಕೃತಿಕ ಅಧ್ಯಯನ

ಕನ್ನಡ ನಾಡಿನ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದ ಅಧ್ಯಯನ ಸಂದರ್ಭದಲ್ಲಿ ಸ್ಥಳೀಯ ಅರಸರ, ಪಾಳೇಗಾರರ ಪಾತ್ರವನ್ನು ಕಡೆಗಣಿಸುವಂತಿಲ್ಲ. ಇತ್ತೀಚಿನ ಸಂಶೋಧನೆಯಿಂದ ಬೆಳಕು ಕಾಣದೆ ಉಳಿದಿರುವ ಹಲವಾರು ಸ್ಥಳೀಯ ಅರಸರ ವೈಶಿಷ್ಟ್ಯಪೂರ್ಣ ಇತಿಹಾಸ ಇದೀಗ ಸಂಶೋಧನೆಗಳಿಂದ ಬೆಳಕಿಗೆ ಬರುತ್ತಿವೆ. ಕರ್ನಾಟಕ ಇತಿಹಾಸವನ್ನು ಅಧ್ಯಯನ ಮಾಡಿರುವ ವಿದ್ವಾಂಸರ ಒಟ್ಟು ಪ್ರಯತ್ನವನ್ನು ಗಮನಿಸಿದರೆ ಪ್ರಮುಖವಾಗಿ ಮೂರು ವಿಧಗಳು ಕಂಡುಬರುತ್ತವೆ. ಒಂದು, ಪ್ರಮುಖ ರಾಜಮನೆತನಗಳನ್ನು ಗಮನದಲ್ಲಿಟ್ಟುಕೊಂಡು ರಚಿತವಾದ ಇತಿಹಾಸ. ಎರಡು ಕಾಲಘಟ್ಟವನ್ನು ಆಧಾರವಾಗಿಟ್ಟುಕೊಂಡು ರಚಿತವಾದ ಇತಿಹಾಸ. ಮೂರು ಸಾಂಸ್ಕೃತಿಕ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ರಚಿತವಾದ ಇತಿಹಾಸ. ಆದರೆ ಕೆಲವೊಂದು ಅರಸುಮನೆತನಗಳನ್ನು ಇತಿಹಾಸಕಾರರು ಗಮನಿಸದೆ ನಿರ್ಲಕ್ಷ್ಯ ವಹಿಸಿರುವುದು ಕಂಡು ಬರುತ್ತದೆ. ಅವುಗಳಲ್ಲಿ ಹಂಡೆ ಅರಸರು ಒಬ್ಬರು. ಅಂದಿನ ರಾಜಕೀಯ ಸ್ಥಿತಿಗತಿಯಿಂದಾಗಿಯೂ, ಪ್ರಭುತ್ವದ ಹಿನ್ನೆಲೆಯಿಂದಾಗಿಯೂ ಹಾಗೂ ಜಾತಿ ಅಸಮಾನತೆಗಳಿಂದಾಗಿಯೂ ಈ ಮನೆತನ ಗೌಪ್ಯವಾಗಿರುವುದು ಕಂಡುಬರುತ್ತದೆ. ಹೀಗಾಗಿ ಹಂಡೆ ಅರಸರು ಕರ್ನಾಟಕದ ಸಂದರ್ಭದಲ್ಲಿ ಹೆಸರಿಸಬಹುದಾದ ಒಂದು ಸಣ್ಣಮನೆತನಗಳಲ್ಲಿ ಒಂದಾಗಿದೆ. ಈ ಮನೆತನದ ಅರಸರು ಆಡಳಿತ ನಡೆಸಿದ ವೈಖರಿ ಮತ್ತು ರಾಜ್ಯವಿಸ್ತರಣೆ ಸಂದರ್ಭದಲ್ಲಿ ಕೈಗೊಂಡ ಕ್ರಮಗಳನ್ನು ಒಳಗೊಂಡಂತೆ, ಧಾರ್ಮಿಕ ವ್ಯವಸ್ಥೆಗೆ ನೀಡಿದ ಪ್ರೋತ್ಸಾಹ, ಸಾಮಾಜಿಕ ವ್ಯವಸ್ಥೆಗೆ ಕೊಟ್ಟ ಮನ್ನಣೆ ಹಾಗೂ ಆರ್ಥಿಕ ವ್ಯವಸ್ಥೆಗೆ ಸಹಕಾರಿಯಾದ ಕೃಷಿ ಮತ್ತು ಕೈಗಾರಿಕೆಗಳಿಗೆ ಉತ್ತೇಜನ ನೀಡಿದ್ದು ಈ ಅರಸರ ಪ್ರಾಮುಖ್ಯತೆಯಾಗಿದೆ. ಈ ಎಲ್ಲ ಮೂಲಾಂಶಗಳನ್ನು ಗಮನದಲ್ಲಿ ಇಟ್ಟುಕೊಂಡು ಅಧ್ಯಾಯ ಐದರಲ್ಲಿ ಸಾಂಸ್ಕೃತಿಕ ಅನನ್ಯತೆಯನ್ನು ಕುರಿತು ಚರ್ಚಿಸಲಾಗಿದೆ.

## ೫.೧. ಆಡಳಿತ ವ್ಯವಸ್ಥೆ

ವಿಜಯನಗರ–ವಿಜಯನಗರೋತ್ತರ ಕಾಲದಲ್ಲಿ ಹಂಡೆ ಅರಸರು ಪ್ರಮುಖರಾದವರು. ಅಚ್ಯುತದೇವರಾಯ ಹಾಗೂ ಆಳಿಯ ರಾಮರಾಯನ ಕಾಲದಿಂದ ಪ್ರಾರಂಭವಾಗಿ ಆದಿಲ್‌ಶಾಹಿ, ಟಿಪ್ಪುಸುಲ್ತಾನ, ಕೊನೆಗೆ ಕರ್ನಲ್ ಮನ್ರೋ ಮುಂತಾದ ಆಂಗ್ಲ ಅಧಿಕಾರಿಗಳವರೆಗೆ ಅಧಿಕಾರ ಮುಂದುವರಿಸಿಕೊಂಡು ಹೋದ ಮನೆತನವಿದು. ವಿಜಯನಗರ ಸಾಮ್ರಾಜ್ಯವೆಂಬುದು ಅನೇಕ ಮಾಂಡಲಿಕ ರಾಜ್ಯಗಳ ಒಕ್ಕೂಟವಾಗಿತ್ತು. ದಕ್ಷಿಣ ಭಾರತದ ಬಹುಭಾಗವನ್ನು ಒಳಗೊಂಡಿದ್ದ ಈ ಸಾಮ್ರಾಜ್ಯ ಅನಿವಾರ್ಯವಾಗಿಯೇ ಮಾಂಡಲಿಕ ರಾಜ್ಯಗಳ ಅಸ್ತಿತ್ವಕ್ಕೆ ಅನುಮತಿ ಕೊಟ್ಟಿತ್ತು. ವಿಜಯನಗರದಲ್ಲಿ ಆಳಿದ ಮೊದಲನೆಯ ವಂಶದ ಸಂಗಮ ದೊರೆಗಳು ತಮ್ಮ ಹತ್ತಿರದ ಸಂಬಂಧಿಗಳನ್ನು ಮಾಂಡಳಿಕರನ್ನಾಗಿ ನೇಮಿಸಿಕೊಳ್ಳುತ್ತಿದ್ದರು. ಹಾಗೆಯೇ ಮಾಂಡಳಿಕ ರಾಜ್ಯಗಳ ಸ್ಥಳೀಯ ನಾಡಪ್ರಭುಗಳು ವಿಜಯನಗರ ಒಕ್ಕೂಟವನ್ನು ರಚಿಸಿದವು.

ಬಳ್ಳಾರಿ ಕೈಫಿಯತ್ತು ತಿಳಿಸುವಂತೆ ಹಂಡೆ ಅರಸರು ಮೂಲತಃ ಬಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿ ಪ್ರಾಂತದ ಮುತ್ತಗಿ ಮತ್ತು ವಡವಡಗಿ ಗ್ರಾಮಗಳಲ್ಲಿ ಇದ್ದವರೆಂದು ಉಲ್ಲೇಖಿಸುತ್ತದೆ. ಈ ಮನೆತನದ ಮೂಲಪುರುಷ ಲಕ್ಕಿನಾಯಕ ಇವನಿಗೆ ಹನುಮಪ್ಪನಾಯಕ ಹಾಗೂ ಬಳಗನಾಯಕ ಎಂಬ ಇಬ್ಬರು ಮಕ್ಕಳಿದ್ದರು. ಈ ಬಾಲದ ಹನುಮಪ್ಪ ನಾಯಕ ನಿಜಾಮ ಬಾದಶಾಹನನ್ನು ಸೆರೆಹಿಡಿದು ರಾಮರಾಯನಿಗೆ ಒಪ್ಪಿಸಿ ರಾಮರಾಯನ ಕೃಪೆಯಿಂದ ಮಾಂಡಳಿಕನಾದನು. ಈ ಹನುಮಪ್ಪನಾಯಕನ ಪರಾಕ್ರಮ ಮೆಚ್ಚಿದ ರಾಮರಾಯ ಹನುಮಪ್ಪನಿಗೆ ಕುರುಗೋಡು, ಬಳ್ಳಾರಿ, ಬುಕ್ಕರಾಯ ಸಮುದ್ರ, ನಂದ್ಯಾಳ, ಧರ್ಮಾವರಂ, ಕಣೆಕಲ್ಲು ಗ್ರಾಮಗಳನ್ನು ಉಂಬಳಿಯಾಗಿ ಕೊಟ್ಟನು. ಹನುಮಪ್ಪನಾಯಕನ ಪ್ರಖ್ಯಾತಿ ಬೆಳೆದು ಕಾಲಾಂತರದಲ್ಲಿ ನೆರೆ ಆಂಧ್ರಪ್ರದೇಶದ ಅನಂತಪುರದವರೆಗೂ ಮುಂದುವರಿಯಿತು. ಲಕ್ಕಿನಾಯಕನ ಎರಡನೆಯ ಮಗ ಬಳಗನಾಯಕನ ವಂಶಸ್ಥರು ಮೂಲಸ್ಥಳದಲ್ಲಿಯೇ ಉಳಿದರು. ಆದರೆ ಹಂಡೆ ಅರಸರ ಪ್ರಮುಖ ನಾಯಕನಾದ ಬಾಲದ ಹನುಮಪ್ಪನಾಯಕನು ಅವನ ಪರಾಕ್ರಮದಿಂದ ಭೌಗೋಳಿಕವಾಗಿ ರಾಜ್ಯವನ್ನು ವಿಸ್ತರಿಸಿ ಆಳ್ವಿಕೆ ನಡೆಸಿದನು. ಹಂಡೆ ಅರಸರ ಮೂಲಪುರುಷನಿಂದ ಹಿಡಿದು ಆ ಮನೆತನದಲ್ಲಿ ಆಡಳಿತವನ್ನು ನಿರ್ವಹಿಸಿದ ಪ್ರಮುಖ ಅರಸರ ವಿವರವನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

೧. ಹಂಡೆ ಅರಸರ ಮೂಲಪುರುಷ ಹನುಮಪ್ಪನಾಯಕ ವಿಜಯನಗರ ಅರಸ ಆಜ್ಞೆಯ ಮೇರೆಗೆ ಬಿಜಾಪೂರ ಬಾದಶಾಹನನ್ನು ಸೋಲಿಸಿ ವಿಜಯನಗರಕ್ಕೆ ತನ್ನ ನಿಷ್ಠೆಯನ್ನು ಪ್ರದರ್ಶಿಸಿದವನು ಹನುಮಪ್ಪನಾಯಕ. ಅಪ್ರತಿಮ ಶೌರ್ಯ, ಸಾಹಸ, ತ್ಯಾಗ ಸ್ವಾಮಿಭಕ್ತಿಗಳಿಗೆ

ಪ್ರಸಿದ್ಧನಾಗಿದ್ದವನು ಈ ಹಂಡೆ ಅರಸ. ಕರ್ನಾಟಕ ಇತಿಹಾಸದ ಸಂದಿಗ್ಧ ಸಮಯಗಳಲ್ಲಿ ತನ್ನ ಸಾಹಸವನ್ನು ಸ್ವಾಮಿ–ನಿಷ್ಠೆಯನ್ನು ಪ್ರದರ್ಶಿಸಿ ಮಹತ್ವದ ಸೇವೆಯನ್ನು ಸಲ್ಲಿಸಿ ಕರ್ನಾಟಕ ಇತಿಹಾಸದಲ್ಲಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿದ್ದಾನೆ.

ಹಂಡೆ ಮನೆತನದ ಮೂಲಪುರುಷನಾದ ಈತನು ಮೊದಲಿಗೆ ಬಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲೂಕಿನ ಮುತ್ತಗಿ ಗ್ರಾಮದಲ್ಲಿ ಸುಮಾರು ಕ್ರಿ.ಶ.೧೫೮೦ರಲ್ಲಿ ಜನಿಸಿದ್ದಾನೆ. ಈತನ ತಂದೆ ಲಕ್ಕಿನಾಯಕ(ಲಕ್ಷ್ಮಿನಾಯಕ) ತಾಯಿಯ ಹೆಸರು ದೇವಕ್ಕೆವ್ವ (ದೇವಕಿ), ಹೆಂಡತಿ ನೀಲಮ್ಮ ಈತನಿಗೆ ಆರು ಜನಮಕ್ಕಳಿದ್ದು ಅವರಲ್ಲಿ ರಾಮಮ್ಮ ಎಂಬ ಹೆಣ್ಣುಮಗಳು ಇರುವುದು ಶಾಸನೋಕ್ತವಾಗಿದೆ. ಕ್ರಿ.ಶ.೧೭೭೯ರ ಕಾಂಚನಗಡದ ಶಾಸನವು ಈತನನ್ನು ಪ್ರಾರಂಭದ ವಿವರಣೆಯಲ್ಲಿ ಬಾಲ ಹಂಡೆ ಹನುಮಪ್ಪನಾಯಕನು ಕಾಣಿಸಿದ್ದು ಅದು ಬಾಲಗುಡ್ಡದ ಹನುಮಪ್ಪನಾಯಕ ಎಂಬುವುದು ಸರಿಯಾದ ಪದವಾಗುತ್ತದೆ. ಬಳ್ಳಾರಿಯ ಗುಡ್ಡ, ಆ ಗುಡ್ಡದ ಸಮತಟ್ಟಾದ ವಿಸ್ತಾರದಲ್ಲಿ ಕೋಟೆ–ಅರಮನೆ ಮಂದಿರಗಳನ್ನು ಕಟ್ಟಿಕೊಂಡು ಇದ್ದು ಅಧಿಕಾರ ನಡೆಸಿದವನಾಗಿದ್ದರಿಂದ 'ಬಾಲಗುಡ್ಡದ ಹನುಮಪ್ಪನಾಯಕ' ಎಂಬ ಹೆಸರು ಅನ್ವರ್ಥಕವಾಗಿ ಬಂದಿದ್ದು ಮುಂದೆ ಬಾಲದ ಹನುಮಪ್ಪನಾಯಕ ಎಂದು ಪ್ರಸಿದ್ಧಿ ಪಡೆದವನಾಗಿದ್ದವನು. ಮುಂದೆ ರೂಢಿಯಲ್ಲಿ ಗುಡ್ಡ ಎಂಬ ನಾಮಪದ ಮಾಯವಾಗಿ ಬಾಲ ಹನುಮಪ್ಪನಾಯಕ ಎಂದಾಯಿತು. ವಿಜಯನಗರದ ಸಂಗಮ ವಂಶದ ಸಂಗಮನಿಗೆ ಹರಿಹರ ಬುಕ್ಕಣ್ಣೊಡೆಯ ಎಂಬ ಹೆಸರುಗಳು ಪ್ರಾರಂಭದ ಕೆಲವು ಶಾಸನಗಳಲ್ಲಿ ಕಾಣಬಹುದು. ಅವನ್ನು ಕಿರಿದು ಮಾಡಿ ಹರಿಹರ, ಬುಕ್ಕಯೆಂದು ಬರೆದಿದ್ದಾರೆ. ಶಾಹ ಅರಸನ ಯುದ್ಧದಲ್ಲಿ ಅವನಿಗೆ ಸಹಕಾರಿಯಾಗಿ ಶಾಹ ಅರಸ ಗೆಲ್ಲಲು ಮುಖ್ಯ ಕಾರಣನಾದವ. ಅದ್ದರಿಂದ ಬಾಳ ಹನುಮಪ್ಪನಾಯಕ ಎಂಬ ನಾಮ ಪಡೆದು ಅದು ಮುಂದೆ ಬಾಲ ಹನುಮಪ್ಪನಾಯಕನಾದಂತೆ ಇದೆ. ಆದರೆ ಅದು ಬಾಲಗುಡ್ಡದ ಹನುಮಪ್ಪನಾಯಕ ಎಂಬುವುದು ಸರಿಯಾದದ್ದೆನಿಸುವುದು. ಆದರೆ ಇತಂಹ ಅನ್ವರ್ಥಕ ಪದಗಳ ಕುರಿತು ಇನ್ನೂ ಹೆಚ್ಚು ಸಂಶೋಧನೆಯಾಗಬೇಕಾಗಿದೆ. ಕೈಫಿಯತ್ತಿನಲ್ಲಿ ಉಲ್ಲೇಖಗೊಂಡಂತೆ ಐದುಜನ ಸಹೋದರಿಯರು ಇದ್ದು ಅವರ ಹೆಸರಿನಿಂದ ಬಳ್ಳಾರಿಯ ಹನುಮಪ್ಪನಾಯಕನು ಐದು ಬಾವಿಗಳನ್ನು ಕಟ್ಟಿಸಿದ್ದಾನೆ. ಈಗಾಲೂ ಆ ಬಾವಿಗಳು ಇವೆ. ತರವಾಯ ಬಿಜಾಪುರದ ಆದಿಲ್‌ಶಾಹಿ ಕೈಕೆಳಗೆ ಸರನಾಡ ಗೌಡನಾಗಿದ್ದನು. ಅವನ ಮೆಚ್ಚುಗೆಗೆ ಪಾತ್ರನಾಗಿ ದೊರೆಯ ಅಪ್ಪಣೆಯ ಮೇರೆಗೆ ಕ್ರಿ.ಶ. ೧೫೬೭ರಲ್ಲಿ ಬಂಕಾಪುರಕ್ಕೆ ಬಂದನು. ಈ ಸಮಯದಲ್ಲಿ ಬಂಕಾಪುರ ಪ್ರದೇಶದಲ್ಲಿ ಅರಾಜಕತೆ ಇದ್ದುದ್ದರಿಂದ ಅದನ್ನು ಹಂಡೆ ಹನುಮಪ್ಪನಾಯಕನು ಸೂಕ್ಷ್ಮವಾಗಿ ಬಗೆಹರಿಸಿದನು. ತರುವಾಯ ಬಳ್ಳಾರಿಗೆ ತನ್ನ ಠಾಣಾವನ್ನು ಬದಲಾಯಿಸಿಕೊಂಡನು. ಹನುಮಪ್ಪ

ನಾಯಕನನ್ನು ಶಾಸನದಲ್ಲಿ ಹನುಮಪ್ಪ ನಾಯಕ, ಹನುಮಿನಾಯಕ ಎಂದು ಉಲ್ಲೇಖಿಸಲಾಗಿದೆ.[೧] ಹನುಮಪ್ಪನಾಯಕ ಒಳ್ಳೆಯ ಆಡಳಿತಗಾರ, ವಿದ್ಯಾಪ್ರೇಮಿ, ಪ್ರಜಾಹಿತ ಚಿಂತಕ, ಧರ್ಮಾಭಿಮಾನಿಯೂ ಆಗಿದ್ದನು. ಈತನು ಹಂಡೆ ಮನೆತನದಲ್ಲಿಯೇ ಪ್ರಸಿದ್ಧ ಅರಸನಾಗಿದ್ದನು. ಈತನು ಬಳ್ಳಾರಿಯ ಸುತ್ತಮುತ್ತ ದೇವಾಲಯಗಳು, ಕೋಟೆ–ಕೊತ್ತಲುಗಳು ಮತ್ತು ನಾಲ್ಕು ಕಡೆ ಮಹಾದ್ವಾರಗಳನ್ನು ನಿರ್ಮಿಸಿದನು. ಬಳ್ಳಾರಿಯನ್ನು ವ್ಯಾಪಾರ ಕೇಂದ್ರವನ್ನಾಗಿಸಲು ಪ್ರಯತ್ನಿಸಿದನು. ಈತನ ಆಡಳಿತ ಅವಧಿಯಲ್ಲಿ ಮಂತ್ರಿಗಳನ್ನು ಮುಖ್ಯಾಧಿಕಾರಿಗಳನ್ನಾಗಿ ನೇಮಿಸಿದ್ದನು. ಹೀಗೆ ಬಡ್ತಿ ನೀಡುವ ಮೂಲಕ ಆಡಳಿತವನ್ನು ಸುಗಮವಾಗಿ ಮುಂದುವರಿಸಿ ಕೊಂಡು ಹೋದನು. ಈತನು ಧರ್ಮಕೃಪೆಯುಳ್ಳವನಾಗಿದ್ದರಿಂದ ದೇವಾಲಯದ ಅಗ್ರಹಾರ ಮಠಗಳನ್ನು ಕಟ್ಟಿಸಿ ಪೂಜಾಧಿಕಾರಿಗಳಿಗೆ ವ್ಯವಸ್ಥೆ ಮಾಡಿದನು. ಈತನು ಶಿವಭಕ್ತನಾಗಿದ್ದರಿಂದ ಅಪಾರವಾದ ಶೈವಜ್ಞಾನವನ್ನು ಹೊಂದಿದ್ದನು. ತನ್ನ ತಂದೆ–ತಾಯಿಯವರಿಗೆ ಶಿವ ಸಾನ್ನಿಧ್ಯದಲ್ಲಿ ಶಾಂತಿ ಲಭಿಸಲೆಂದು ದಾನ–ದತ್ತಿಯನ್ನು ದೇವರ ಹೆಸರಿನಲ್ಲಿ ನೀಡುತ್ತಿದ್ದನು. ಹೀಗಿರುವಾಗ ವೆಂಕಟಪತಿರಾಯನು ಪೆನುಗೊಂಡೆಯಿಂದ ಆಳುತ್ತಿದ್ದಾಗ ಅವನ ಸಾಮಂತನಾದ ಹಂಡೆ ಹನುಮಪ್ಪನಾಯಕನ ಮಗ ಅಂಕುಶರಾಯನು, ರಾಜನಿಂದ(ಮಾಗಣಿ) ಉಂಬಳಿಯಾಗಿ ಪಡೆದಿದ್ದ ಬಳ್ಳಾರಿಯ ಸೀಮೆಯ ಮಣ್ಣೂರ ಗ್ರಾಮವನ್ನು ತನ್ನ ಮಗನಾದ ರಾಮಪ್ಪನಿಗೆ ಪುಣ್ಯವಾಗಬೇಕೆಂದು ಕರಿಯ ವೀರಣ್ಣೊಡೆಯನ ಶಿಷ್ಯನಾದ ಕೇಧಾರ ದೇವನಿಗೆ ದಾನವಾಗಿ ನೀಡಿದ್ದಾನೆ. ಶಾ. ಶ. ೧೪೫೪ರಲ್ಲಿ ನಾಲ್ಕುಸಲ, ಶಾ.ಶ.೧೪೪೧ ಎರಡು ಸಲ, ಶಾ.ಶ.೧೪೪೨ ಒಂದು ಸಲ, ಶಾ.ಶ ೧೪೪೩ರಲ್ಲಿ ೧೪ ಮಠಗಳಿಗೆ ದಾನವನ್ನು ಕೊಟ್ಟೂರು ಮಠಕ್ಕೆ ನೀಡಿದ್ದಾನೆ.

ಹನುಮಪ್ಪನಾಯಕನು ಹಲವಾರು ದೇವಾಲಯಗಳನ್ನು ಮಠಗಳನ್ನು ನಿರ್ಮಿಸುವುದರ ಜೊತೆಗೆ ಅವುಗಳ ಜೀರ್ಣೋದ್ಧಾರ ಕಾರ್ಯಗಳನ್ನು ಕೈಗೊಂಡನು. ಜಗದ್ಗುರು ಶ್ರೀ ನಿಡುಮಾಮಿಡಿ ಮಠದ ಶ್ರೀ ಕರಿಬಸವಸ್ವಾಮಿಗಳಲ್ಲಿ ಅಪಾರವಾದ ಭಕ್ತಿಯುಳ್ಳವನಾಗಿದ್ದನು. ಹನುಮಪ್ಪನಾಯಕ ತನ್ನ ಸಾಮ್ರಾಜ್ಯ ವಿಸ್ತರಿಸುತ್ತಾ ನೆರೆಯ ಆಂಧ್ರಪ್ರದೇಶದ ಅನಂತಪುರವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿದನು. ಬಳ್ಳಾರಿ ರಾಜ ಹನುಮಪ್ಪನಾಯಕ ಮಠದಲ್ಲಿ ಧಾರ್ಮಿಕ ಕಾರ್ಯಗಳನ್ನು ನಡೆಸಲು ಹಲಕುಂದೆ, ಹಂದ್ರಾಳು, ಗೋನಾಳು, ಮಿಂಚೇರಿ, ಬೆಳಗಲ್ಲು, ಭೂಗುಂಟೆ, ಇಬ್ರಾಪೂರ, ಕಪ್ಪುಗಲ್ಲು ಇಂತಹ ಗ್ರಾಮಗಳನ್ನು ಉಂಬಳಿಯಾಗಿ ನೀಡಿ ದತ್ತಿಪತ್ರಗಳನ್ನು ಬರೆಯಿಸಿಕೊಟ್ಟಿರುತ್ತಾನೆ. ಸಿದ್ಧೇಶ್ವರರ ಪ್ರಭಾವದಿಂದ ಮಠವು ಹೆಚ್ಚು ಶ್ರೀಮಂತವಾಗಿ ಬೆಳೆದು ವೀರಶೈವ ಧರ್ಮವನ್ನು ಬೆಳೆಸಿತು.

ಈ ಮಾತನ್ನು ಪರಿಶೀಲಿಸಿ ನೋಡಿದಾಗ ಹಂಡೆ ಅರಸರು ನೂರಾರು ಮಠಗಳಿಗೆ ಮತ್ತು ದೇವಾಲಯಗಳಿಗೆ ದಾನದತ್ತಿಗಳನ್ನು ನೀಡಿದ್ದನ್ನು ಕಾಣಬಹುದು. ಇವರು ವೀರಶೈವ ಧರ್ಮಕ್ಕೆ ಹೆಚ್ಚಿನ ರಾಜಾಶ್ರಯ ನೀಡಿದ್ದು ಕಂಡುಬರುತ್ತದೆ. ಈ ಹನುಮಪ್ಪನಾಯಕನಿಗೆ ಐದು ಜನ ಗಂಡುಮಕ್ಕಳು, ಅಂಕುಶರಾಯ, ದೇವಪ್ಪನಾಯಕ, ನಿಚ್ಚಮದುವಣಿಗ ರಾಮಪ್ಪನಾಯಕ, ಹಿರೇ ಮಲ್ಲಪ್ಪನಾಯಕ, ಚಿಕ್ಕ ಮಲ್ಲಪ್ಪನಾಯಕ. ಹನುಮಪ್ಪನಾಯಕನು ಒಂದು ಸಲ ಬಿಜಾಪುರದ ಸುಲ್ತಾನನ ಭೇಟಿಗೆ ತನ್ನ ಐದು ಜನ ಮಕ್ಕಳನ್ನು ಕರೆದುಕೊಂಡು ಬಂದನು. ಈ ಐದು ಜನ ಗಂಡುಮಕ್ಕಳ ಸುಂದರ ರೂಪ, ಶೌರ್ಯ, ನಡತೆ ಮೇಚ್ಚಿಕೊಂಡ ಬಾದಶಹನು ಹನುಮಪ್ಪ ನಾಯಕನಿಗೆ ನಿನ್ನ ಒಬ್ಬ ಮಗನನ್ನು ನನಗೆ ಕೊಡಬೇಕೆಂದು ಕೇಳಿಕೊಂಡನು. ಹನುಮಪ್ಪನಾಯಕನಿಗೆ ಸಿಟ್ಟು ಬಂದು ನಿನಗೆ ನನ್ನ ಮಕ್ಕಳಂತವರು ಬೇಕಾಗಿದ್ದರೆ, ನಿನ್ನ ಜನಾದಲ್ಲಿ ಒಬ್ಬಳು ಬೀಬಿಯನ್ನು ಕೊಟ್ಟರೆ ಇಂತಹ ಒಂದು ಮಗುವನ್ನು ಹುಟ್ಟಿಸಿ ಕೊಡುತ್ತೇನೆಂದು ಹೇಳಿದನು. ಆಗ ಬಾದಶಾಹನು ಹನುಮಪ್ಪನಾಯಕನೊಡನೆ ವಾದ ಮಾಡಿ ಅವರೆಲ್ಲರನ್ನು ಕೊಲ್ಲಲು ಆಜ್ಞೆ ಮಾಡಿದನು.

ಹನುಮಪ್ಪನಾಯಕನು ಸುಲ್ತಾನನ ಸೈನ್ಯದೊಂದಿಗೆ ಹೋರಾಟ ಮಾಡಿ ಕೃಷ್ಣಾ ನದಿ ಮುಖಾಂತರವಾಗಿ ವಿಜಯನಗರದ ಅರಸರನ್ನು ಸೇರಿಕೊಂಡನು. ನಂತರ ಇವನು ರಾಮರಾಯನ ಮೆಚ್ಚುಗೆಗೆ ಪಾತ್ರನಾಗಿ ಅವನಿಂದ ಕೆಲವು ಗ್ರಾಮಗಳನ್ನು ಉಂಬಳಿಯಾಗಿ ಪಡೆದು ಬಳ್ಳಾರಿಯಲ್ಲಿ ರಾಜ್ಯ ಸ್ಥಾಪನೆ ಮಾಡಿದನು. ಬಳ್ಳಾರಿಯಲ್ಲಿ ಕೋಟೆ ಕಟ್ಟಿಸಿ ಉತ್ತಮ ರೀತಿಯಿಂದ ರಾಜ್ಯಭಾರವನ್ನು ಮುಂದುವರಿಸಿಕೊಂಡು ಬಂದನು. ಒಬ್ಬ ರಾಜನಿಗೆ ಇರಬೇಕಾದ ಎಲ್ಲ ಅರ್ಹತೆಗಳು ಇವನಲ್ಲಿ ಕಂಡುಬರುತ್ತವೆ. ಧೈರ್ಯ, ಸ್ವಾಭಿಮಾನ, ಛಲಗಾರ, ಸರ್ವಧರ್ಮಗಳನ್ನು ಗೌರವದಿಂದ ಕಾಣುವ ಗುಣಕ್ಕೆ ಹೆಸರಾಗಿದ್ದನು. ಇವನ ಆಡಳಿತದ ಅವಧಿಯಲ್ಲಿ ಬಳ್ಳಾರಿ, ಕುರುಗೋಡು, ತೆಕ್ಕಲಕೋಟೆಗಳು ಸುಭದ್ರವಾಗಿದ್ದವು. ಬಂಕಾಪುರದಲ್ಲಿ ಅರಾಜಕತೆಯನ್ನು ಹೋಗಲಾಡಿಸಿದ ಕೀರ್ತಿಯು ಹಂಡೆ ಹನುಮಪ್ಪನಾಯಕನಿಗೆ ಸಲ್ಲುತ್ತದೆ. ಆಂಧ್ರಪ್ರದೇಶದ ಕಣಿಕಲ್ಲು, ಕುಂದರ್ಪಿ, ಧರ್ಮಾವರ, ಅನಂತಪುರ, ನಂದ್ಯಾಳ ಮುಂತಾದ ಗ್ರಾಮಗಳನ್ನು ಆಡಳಿತಕ್ಕೆ ವಶಪಡಿಸಿಕೊಂಡು ಅವುಗಳ ಉಸ್ತುವಾರಿಯನ್ನು ನೋಡಿಕೊಳ್ಳಲು ತನ್ನ ಮಕ್ಕಳನ್ನು ನೇಮಿಸಿ ಸುಮಾರು ೯೭ ವರ್ಷಗಳ ಕಾಲ ಆಡಳಿತ ನಡೆಸಿ ಸ್ವರ್ಗಸ್ಥನಾದನು. ಕ್ರಿ.ಶ.೧೫೮೫ರಲ್ಲಿ ಅನಂತಪುರದಲ್ಲಿ ಮರಣವನ್ನು ಅಪ್ಪಿದ್ದು ಅವನ ಕೋರಿಕೆಯಂತೆ ನಿಡುಮಾಮಿಡಿ ಮಠದಲ್ಲಿ ಗುರುಗಳೊಂದಿಗೆ ಸಮಾಧಿಯನ್ನು ಮಾಡಲಾಗಿದೆ.

೨. ಅಂಕುಶರಾಯ ಹನುಮಪ್ಪನಾಯಕನ ಹಿರಿಯ ಮಗ. ಈತನು ಬಹಳ ಧರ್ಮಿಷ್ಠನಾಗಿದ್ದನು ಎಂದು ಕುರುಗೋಡು ಕೈಫಿಯತ್ತಿನಲ್ಲಿ ಕಂಡುಬರುತ್ತದೆ. ಈತನು ತಂದೆ ತೀರಿದ ತರುವಾಯ ಬಂಕಾಪುರದ ಸೀಮೆಗೆ ಒಡೆಯನಾದನು ಎಂದು ಉಲ್ಲೇಖಿಸಲಾಗಿದೆ.[೨] ಜೊತೆಗೆ ಬಂಕಾಪುರ, ನಂದ್ಯಾಳ, ಸಿರಿವಾಳ ಈ ಮೂರು ಸೀಮೆಗಳಿಗೆ ಈತನು ಒಡೆಯನಾಗಿದ್ದನೆಂದು ತಿಳಿದುಬರುತ್ತದೆ. ಆದರೆ ಇವನ ಆಳ್ವಿಕೆ ನಡೆಸಿದ ವರ್ಷವನ್ನು ಎರಡೂ ಕೈಫಿಯತ್ತಿನಲ್ಲಿ ದಾಖಲಿಸಿಲ್ಲ. ಅಂಕುಶರಾಯನು ವಿದ್ವಾಂಸನೂ, ಧರ್ಮಪರನೂ ಆಗಿದ್ದು, ಎಲ್ಲರನ್ನು ನೀತಿವಂತರಾಗಿ ಬಾಳಬೇಕೆಂದು ಹಂಬಲಿಸುತ್ತಿದ್ದನು. ಅಂಕುಶರಾಯನು ರಾಜಕೀಯದಲ್ಲಿ ಏನನ್ನು ಸಾಧಿಸದಿದ್ದರೂ ಧರ್ಮ, ಸಾಹಿತ್ಯ-ಸಂಸ್ಕೃತಿಗಳಿಗೆ ಅನನ್ಯವಾದ ಕೊಡುಗೆಯನ್ನು ಸಲ್ಲಿಸಿದ್ದಾನೆ. ವೀರಶೈವ ಧರ್ಮ ಪರಿಪಾಲಕನಾಗಿದ್ದ ಇವನು ಪರಲೋಕ ಸಾಧನೆಗೋಸ್ಕರ ಜಂಗಮರಿಗೆ ದೇಶ ಸಂಚಾರಕ್ಕೆ ಉದಾರ ನೆರವು ನೀಡಿದನು. ಜಂಗಮರಿಗೂ ಹಾಗೂ ಬ್ರಾಹ್ಮಣರಿಗೂ ಉದಾರವಾಗಿ ಆಶ್ರಯ ನೀಡಿದ್ದನು. ಇವನು ಜನಗಳಿಗೆ ಯಾವ ತೊಂದರೆಯೂ ಇಲ್ಲದಂತೆ ನೀತಿಯುತವಾಗಿ ರಾಜ್ಯಭಾರವನ್ನು ಮಾಡಿದನು.

ವೆಂಕಟಪತಿದೇವರಾಯನು ಪೆನುಗೊಂಡೆಯಿಂದ ಆಳುತ್ತಿದ್ದಾಗ ಅವನ ಸಾಮಂತನಾದ ಅಂಕುಶರಾಯನು ರಾಜನಿಂದ ಅಮರ ಮಾಗಣಿಯಾಗಿ ಪಡೆದಿದ್ದ ಬಳ್ಳಾರಿ ಸೀಮೆಯ ಮಣ್ಣೂರನ್ನು ತನ್ನ ಮಗನಾದ ರಾಮಪ್ಪನಿಗೆ ಪುಣ್ಯವಾಗಬೇಕೆಂದು ಕರಿಯ ವೀರಣ್ಣೊಡೆಯನ ಶಿಷ್ಯನಾದ ಮಲ್ಲಿಕಾರ್ಜುನ ದೇವನ ಶಿಷ್ಯನಾದ ಕೇದಾರ ದೇವನಿಗೆ ದಾನವಾಗಿ ನೀಡಿರುವನು. ಅಂಕುಶರಾಯನು ಮೇಲಿನ ಪ್ರದೇಶಗಳನ್ನು ಕೆಲವು ದಿವಸ ರಾಜ್ಯವಾಳಿದನು. ಈತನ ತರುವಾಯ ವಂಶಸ್ಥರಾದ ಸಿದ್ಧಪ್ಪ ನಾಯಕ ಮತ್ತು ಪ್ರಸನ್ನಪ್ಪ ನಾಯಕ ಎಂಬುವವರು ರಾಜ್ಯವಾಳಿದ್ದರೆಂದು ಬಳ್ಳಾರಿ ಮತ್ತು ಕುರುಗೋಡು ಕೈಫಿಯತ್ತಿನಲ್ಲಿ ಉಲ್ಲೇಖಿಸಲಾಗಿದೆ.

೩. ದ್ಯಾಮಪ್ಪ ನಾಯಕ/ದೇವಪ್ಪ ನಾಯಕ ಈತನು ಬಾಲದ ಹನುಮಪ್ಪನಾಯಕನ ಎರಡನೆಯ ಮಗ. ಇವನು ಬಹು ಪರಾಕ್ರಮಿ ಪರಬಲದೋಳ್ ಭೀಮನೆಂದು ಕುರುಗೋಡು ಕೈಫಿಯತ್ತಿನಲ್ಲಿ ಈತನನ್ನು ಉಲ್ಲೇಖಿಸಲಾಗಿದೆ.[೩] ತಂದೆಯ ತರುವಾಯ ಇವನು ಬಳ್ಳಾರಿ, ಕುರುಗೋಡು, ತೆಕ್ಕಲಕೋಟೆ, ಸಿಂಧನೂರು, ಸಿರುಗುಪ್ಪ, ಕಣಿಕಲ್ಲು, ರೂಪನಗುಡಿ. ವಡ್ಡು, ದರೋಜಿ ಮುಂತಾದ ತಾಲೂಕುಗಳನ್ನು ಈತನು ಆಳಿದ ಮಾಹಿತಿ ದೊರಕುತ್ತದೆ. ಒಮ್ಮೆ ಬಿಜಾಪುರ ಆದಿಲ್‌ಶಾಹಿ ದಂಡು ಬಂದು ಬಂಕಾಪುರದ ಸೀಮೆಯನ್ನು ವಶಪಡಿಸಿಕೊಂಡಿತ್ತು. ಆಗ ದ್ಯಾಮಪ್ಪ ನಾಯಕ ಅವರೊಂದಿಗೆ ಒಪ್ಪಂದ ಮಾಡಿಕೊಂಡು ಕಪ್ಪವನ್ನು ಕೊಡುವುದಾಗಿ ಕರಾರು ಮಾಡಿಕೊಂಡು ರಾಜ್ಯಭಾರ ಮಾಡಿದನು. ದೇವಪ್ಪನಾಯಕನು ಉತ್ತಮ ಆಡಳಿತಗಾರನಾಗಿದ್ದನು.

ಈ ದೇವಪ್ಪನಾಯಕನು ಸರ್ವಧರ್ಮ ಸಮಾನ ದೃಷ್ಟಿ ಉಳ್ಳವನಾಗಿದ್ದನು. ಸಾಮಾಜಿಕ, ಧಾರ್ಮಿಕ, ಆರ್ಥಿಕ ದೃಷ್ಟಿಯಿಂದ ಇವನ ಆಡಳಿತವು ಉತ್ತಮ ರೀತಿಯಿಂದ ಇತ್ತೆಂದು ಗುರುತಿಸಲಾಗಿದೆ. ನಂತರ ಕೆಲವು ದಿವಸ ರಾಜ್ಯವಾಳಿ ಕ್ರಿ.ಶ.೧೫೯೯ರಲ್ಲಿ ಈತನು ಕೊನೆಯುಸಿರೆಳೆದನು. ಈತನ ಮಗ ಪವಾಡದ ರಾಮಪ್ಪನಾಯಕ. ಈತನ ಕಾಲದಲ್ಲಿ ಹಂಡೆ ಅರಸರ ಸಾಮ್ರಾಜ್ಯ ಶಕ್ತಿ, ಪ್ರತಿಷ್ಠೆ ಹೆಚ್ಚಿತು. ಈತನು ಸಮರ್ಥ ರಾಜಕಾರಣಿಯಾಗಿದ್ದು, ಚತುರ ಹಾಗೂ ಪರಾಕ್ರಮಿಯಾದ ಯೋಧನಾಗಿದ್ದನು. ಕೋಟೆಗಳನ್ನು ಕಟ್ಟಿಸಿ ಸಾಮ್ರಾಜ್ಯವನ್ನು ಮತ್ತಷ್ಟು ಭದ್ರಗೊಳಿಸಿದನು. ನೀರಾವರಿ ಸೌಕರ್ಯವನ್ನು ವ್ಯಾಪಕಗೊಳಿಸಿ ವ್ಯವಸಾಯಕ್ಕೆ ಅನುಕೂಲವಾಗುವಂತೆ ಮಾಡಿದನು. ಸಾಂಸ್ಕೃತಿಕ ಚಟುವಟಿಕೆಗಳನ್ನು ವರ್ಧಿಸಿ ಜನಜೀವನ ಸುಖಮಯವಾಗುವಂತೆ ಆಸಕ್ತಿಯನ್ನು ವಹಿಸಿದನು.

ದ್ಯಾಮಪ್ಪನಾಯಕನು ಕುರುಗೋಡಿಗೆ ಠಾಣ್ಯಹಾಕಿ ಕುರುಗೋಡು ಕೋಟೆ ದೊಡ್ಡದು ನಿಭಾಯಿಸಲಾಗದು ಎಂದು ತಿಳಿದು ಆ ದುರ್ಗದ ಪೂರ್ವಭಾಗಕ್ಕೆ ಯರ್ರದುರ್ಗದ ಗುಡ್ಡಕ್ಕೆ ಕಿಲ್ಲೆ ಕಟ್ಟಲು ಪ್ರಾರಂಭಿಸಿದನು. ದೇಸಾಯಿ ವೆಂಕಟಪ್ಪನೆಂಬುವನು ಯರ್ರದುರ್ಗದ ಮೇಲೆ ಹಂಡೆ ದ್ಯಾಮಪ್ಪ ಕಟ್ಟಿಸುತ್ತಿದ್ದ ದುರ್ಗದ ಮೇಲೆ ಎರಡು ಬುರುಜು ಕಟ್ಟಿಸಿದ್ದನು. ದೇವಪ್ಪನ ಅಧಿಕಾರದಲ್ಲಿ ಯರ್ರದುರ್ಗದ ಕೋಟೆ ಪೂರ್ಣ ಕಟ್ಟಿಸಿ ಪೂರ್ವಭಾಗದಲ್ಲಿ ಕಿಲ್ಲೆಯ ಒಳಗೆ ಬಾವಿ ಅರಮನೆ ಕಟ್ಟಿಸಿ ದೇಸಾಯಿ ನಾಡಗೀರು, ಕಾರಕೂನರು, ಬಾರಾಬಳೂತಿ ಮುಂತಾದವರ ವಸತಿಗೆ ಮನೆಪಾಯ ಹಾಕಿಕೊಟ್ಟಿದ್ದನು. ದ್ಯಾಮಪ್ಪನಾಯಕನು ಪ್ರಬಲನಾದ ಕಾರಣ ಕುರುಗೋಡು, ತೆಕ್ಕಲಕೋಟೆಗಳನ್ನು ವಶಪಡಿಸಿಕೊಂಡು ಕ್ರಿ.ಶ. ೧೬೯೩ ರಿಂದ ಕ್ರಿ.ಶ. ೧೭೦೮ ರ ವರೆಗೆ ೧೬ ವರ್ಷ ಆಳ್ವಿಕೆ ನಡೆಸಿದನೆಂದು ಕೈಫಿಯತ್ತಿನಿಂದ ತಿಳಿದುಬರುತ್ತದೆ.

೪. ನಿಚ್ಚಮದುವಣಿಗ ರಾಮಪ್ಪನಾಯಕ ಹಂಡೆ ಬಾಲದ ಹನುಮಪ್ಪನಾಯಕನ ಮೂರನೆಯ ಮಗನಾದ ಈತನು ಬಹುಭೋಗಿ ಮತ್ತು ಅರ್ಜುನನಂತೆ ಪರಾಕ್ರಮಿ ಎಂದು ಕುರುಗೋಡು ಕೈಫಿಯತ್ತಿನಲ್ಲಿ ವರ್ಣಿಸಲಾಗಿದೆ.[೪] ಈತನು ತಂದೆಯ ತರುವಾಯ ಕುಂದರ್ಷಿ, ಕಣಿಕಲ್ಲು ಸೀಮೆಯನ್ನು ತನ್ನ ಆಡಳಿತಕ್ಕೆ ಒಳಪಡಿಸಿಕೊಂಡನು. ಈತನು ಸಮರ್ಥನೂ ಮಹತ್ವಾಕಾಂಕ್ಷೆಯೂ ಆಗಿದ್ದನು. ಸಮಾಜದಲ್ಲಿ ನೆಮ್ಮದಿ ಹಾಗೂ ಸುಖ-ಸಮೃದ್ಧಿಗಳನ್ನುಂಟು ಮಾಡಿ ಶಾಂತಿ ಪಡೆದನು. ಈ ನಾಯಕನು ತನ್ನ ರಾಜ್ಯ ವಿಸ್ತರಣೆಯ ಕಾರ್ಯವನ್ನು ಮಾಡಲಿಲ್ಲ. ಈತನು ಛಲಗಾರ, ಆಂಜನೇಯ ದೇವರ ಪರಮಭಕ್ತನಾಗಿದ್ದನು.

ವಿಜಯನಗರ ಸಾಮ್ರಾಟರಿಗೆ ವಿರೋಧವಾಗಿ ನಡೆದುಕೊಳ್ಳಲಿಲ್ಲ. ವಿಜಯನಗರ ಸಾಮ್ರಾಜ್ಯದ ವೈಭವ ಪರಂಪರೆಗಳು ಬಹಳ ಕಾಲ ಸ್ಥಗಿತಗೊಂಡಿದ್ದು ಪುನಃ ಹಂಡೆ ಅರಸರಿಂದ ಪುನರುಜ್ಜೀವನ

ಗೊಂಡವು. ಹೊಸ ದೇವಸ್ಥಾನ ನಿರ್ಮಾಣ ಕಾರ್ಯದೊಂದಿಗೆ ಶಿಥಿಲಗೊಂಡಿದ್ದ ದೇವಸ್ಥಾನಗಳ ಪುನರುಜ್ಜೀವನ ಕಾರ್ಯವು ಆರಂಭಗೊಂಡಿತು. ಧಾರ್ಮಿಕ ವಿಧಿಗಳು ಯಥಾವತ್ತಾಗಿ ನಡೆಯಲಾರಂಭಿಸಿದವು. ಹೀಗೆ ಧಾರ್ಮಿಕ ಪರಂಪರೆಗಳು ಸಾಂಸ್ಕೃತಿಕ ಚಟುವಟಿಕೆಗಳು ಸರಾಗವಾಗಿ ಮುನ್ನಡೆಯುವಂತೆ ಪ್ರೋತ್ಸಾಹಿಸಿದನು. ಆಂತರಿಕ ಸ್ಥಿತಿಗತಿಗಳನ್ನು ಸುಧಾರಿಸಲು ಕೃಷಿಕರಿಗೆ ಪ್ರಾಧಾನ್ಯತೆ ಕೊಟ್ಟು, ಅವರ ಸೌಕರ್ಯಗಳನ್ನು ಹೆಚ್ಚಿಸಿದನು. ಸೈನ್ಯವನ್ನು ಸಂಘಟಿಸಿ ಅದರ ಶಕ್ತಿಯನ್ನು ವರ್ಧಿಸಿ ಸಮರ್ಥ ಮೇಲ್ವಿಚಾರಣೆಗಾಗಿ ಯೋಗ್ಯ ದಳವಾಯಿಯನ್ನು ನೇಮಿಸಿದರು. ಅಧಿಕಾರ ವರ್ಗದಿಂದ ಪ್ರಜೆಗಳಿಗೆ ತೊಂದರೆಯಾಗದಂತೆ ಎಚ್ಚರಿಕೆ ಕ್ರಮಗಳನ್ನು ಕೈಕೊಂಡನು. ಆಡಳಿತ ಕ್ರಮದಲ್ಲಿ ಸುಧಾರಣೆ ಮಾಡಿ ಬಿಗುವನ್ನು ಹೆಚ್ಚಿಸಿದನು. ಹೀಗೆ ಕುಂದರ್ಪಿ ಗ್ರಾಮದ ಮೇಲೆ ಮುತ್ತಿಗೆ ಹಾಕಿದಾಗ ಯುದ್ಧದಲ್ಲಿ ಗುಂಡು ತಗುಲಿ ಮರಣ ಹೊಂದಿದನು ಎನ್ನಲಾಗಿದೆ.

೫. ಹಿರೇಮಲ್ಲಕಪ್ಪ ನಾಯಕ ಬಾಲದ ಹನುಮಪ್ಪನಾಯಕನ ನಾಲ್ಕನೆಯ ಮಗ. ಈತ ಅನಂತಪುರ, ಧರ್ಮಾವರಂ, ಬಳ್ಳಾರಿ, ಕುರುಗೋಡು, ತೆಕ್ಕಲುಕೋಟೆ, ಶಿನ್ನೂರು, ಶಿರುಗುಪ್ಪೆ ಮುಂತಾದ ಪ್ರದೇಶಗಳನ್ನು ಆಳಿದನು. ಈತನು ಆಳ್ವಿಕೆ ನಡೆಸಿದ ವರ್ಷ ಮತ್ತು ವೈಯಕ್ತಿಕ ವಿಷಯಗಳ ಬಗ್ಗೆ ಯಾವುದೇ ವಿಷಯ ಕೈಫಿಯತ್ತುಗಳಲ್ಲಿ ಬರುವುದಿಲ್ಲ. ಕುರುಗೋಡು ಕೈಫಿಯತ್ತಿನಿಂದ ಇವನಿಗೆ ಮಕ್ಕಳಿಲ್ಲದ ವಿಷಯ ತಿಳಿದುಬರುತ್ತದೆ. ಆದರೆ ಬಳ್ಳಾರಿ ಕೈಫಿಯತ್ತಿನಲ್ಲಿ ಇವನಿಗೆ ಸಿದ್ಧಪ್ಪನಾಯಕ ಎಂಬ ಮಗನಿದ್ದನು ಎಂದು ಉಲ್ಲೇಖವಿದ್ದರೂ ಅವನ ಬಗ್ಗೆ ಹೆಚ್ಚಿನ ವಿವರಗಳು ತಿಳಿದುಬರುವುದಿಲ್ಲ. ಹಂಡೆ ಹಿರೇ ರಾಮಪ್ಪನಾಯಕನು ಎಮ್ಮಿಗನೂರು ವಿರಕ್ತಮಠ, ಸಂಗನಕಲ್ಲು ಜಹಗೀರ ಗ್ರಾಮ ಹಾಗೂ ಬಳ್ಳಾರಿಯ ಅಮ್ಮವ್ವನ ಮಠಕ್ಕೆ ಭೂದಾನ ಮತ್ತು ಅನ್ನದಾಸೋಹದ ಕಾರ್ಯಕ್ಕೆ ಹೆಚ್ಚಿನ ಆದ್ಯತೆ ನೀಡಿದ್ದು, ಈಗಿನ ಕೊಟ್ಟೂರುಸ್ವಾಮಿ ಮಠದಲ್ಲಿ ಅಮ್ಮವ್ವ ಎಂಬ ಹೆಸರಿನಲ್ಲಿ ಇಂದಿಗೂ ಈ ದಾಸೋಹದ ಕಾರ್ಯ ನಡೆಯುವುದು ಕಂಡುಬರುತ್ತದೆ.

ಹಿರೇಮಲ್ಲಕಪ್ಪ ನಾಯಕ ಪ್ರಸಿದ್ಧ ರಾಜರಲ್ಲಿ ಒಬ್ಬನು. ಬಹುಮುಖ ಪ್ರತಿಭೆಯನ್ನುಳ್ಳ ಇವನು ರಾಜ್ಯವನ್ನು ರಕ್ಷಿಸುವುದಲ್ಲದೆ ಅದರ ಅಭಿವೃದ್ಧಿಯನ್ನು ಸಾಧಿಸಿದನು. ಆಡಳಿತ ಕ್ರಮವು ರಾಜಕೀಯ ಗೊಂದಲಮಯ ಪರಿಸ್ಥಿತಿಯನ್ನು ಚೆನ್ನಾಗಿ ಅರಿತುಕೊಂಡಿದ್ದ ಇವನು ಅವಕಾಶ ದೊರೆಯತಾಗಲೆಲ್ಲ ರಾಜ್ಯವನ್ನು ವಿಸ್ತರಿಸುತ್ತಿದ್ದನು. ಇವನ ಆಳ್ವಿಕೆಯಲ್ಲಿ ರಾಜ್ಯ ವಿಸ್ತಾರವಾಗಿತ್ತು. ಇವನ ಕಾಲದಲ್ಲಿ ರಾಜಕೀಯ ಕ್ಷೇತ್ರವು ಅತ್ಯಂತ ಚಟುವಟಿಕೆಯಿಂದ ಕೂಡಿತ್ತು. ದಕ್ಷಿಣ ಭಾರತದ ಚಿಕ್ಕ ಪುಟ್ಟ ಸಂಸ್ಥಾನಗಳು ಅವಕಾಶಗಳನ್ನು ಕಾಯುತ್ತಲೇ ಇದ್ದರು. ಆಡಳಿತ ಸೂತ್ರವನ್ನು ಸರಿಯಾಗಿ ನಿಭಾಯಿಸಲು ಐದು ಸಮರ್ಥ ವ್ಯಕ್ತಿಯುಳ್ಳ ಮಂತ್ರಿಮಂಡಲವನ್ನು ರಚಿಸಿದರು. ರಾಜ್ಯದಲ್ಲೆಲ್ಲ ಅಂಚೆ ಸೌಕರ್ಯವನ್ನುಂಟು ಮಾಡಿ, ಪ್ರಜೆಗಳಲ್ಲಿ ರಾಜಕೀಯ

ಹಾಗೂ ಸಾಮಾಜಿಕ ಪ್ರಜ್ಞೆ ಉಂಟಾಗುವಂತೆ ಸಮಾನಾವಕಾಶ ಕಲ್ಪಿಸಿಕೊಟ್ಟರು. ರಾಜ್ಯ ರಕ್ಷಣೆಗೆ ಸೈನ್ಯವನ್ನು ಸಜ್ಜುಗೊಳಿಸಿದರು. ರಾಜ್ಯದಲ್ಲಿ ಆರ್ಥಿಕ ಸಮಾನತೆ ಉಂಟಾಗುವಂತೆ ಪೌರಾಡಳಿತ ನೀತಿಯನ್ನು ಯೋಜಿಸಿದರು. ರಾಜ್ಯವನ್ನು ಆಡಳಿತದ ಅನುಕೂಲ ಮಾಡಿಕೊಟ್ಟರು.

೬. ಚಿಕ್ಕಮಲ್ಲಕಪ್ಪ ನಾಯಕ ಬಾಲದ ಹನುಮಪ್ಪ ನಾಯಕನ ಐದನೆಯ ಮಗ. ಬಳ್ಳಾರಿ ಕೈಫಿಯತ್ತಿನಲ್ಲಿ ಇವನನ್ನು ಹಿರಿಯ ರಾಮಪ್ಪ ನಾಯಕನ ಮಗನೆಂದು ತಪ್ಪಾಗಿ ಹೇಳಿದ್ದು ಕಂಡುಬರುತ್ತದೆ. ಬಳ್ಳಾರಿ ಮತ್ತು ಕುರುಗೋಡು ಕೈಫಿಯತ್ತು ಪ್ರಾರಂಭದಲ್ಲಿ ಬಾಲದ ಹನುಮಪ್ಪನಾಯಕನ ಐವರು ಮಕ್ಕಳ ಬಗ್ಗೆ ವಿವರಣೆ ಬಂದಿರುವುದರಿಂದ ಈತನು ನಿಸ್ಸಂಶಯವಾಗಿ ಬಾಲದ ಹನುಮಪ್ಪನಾಯಕನ ಮಗನೆಂಬುದು ಸ್ಪಷ್ಟವಾಗುತ್ತದೆ. ಇವನು ತಂದೆಯ ತರುವಾಯ ಬಳ್ಳಾರಿ, ಅನಂತಪುರ, ಧರ್ಮಾವರ ಸೀಮೆಗಳಿಗೆ ಒಡೆಯನಾಗಿದ್ದನು. ಈತನ ಮಗ ಚಿಕ್ಕನಾಯಕ ಸಾಹೇಬ ಹಂಡೆ ಅರಸರ ಇತಿಹಾಸದಲ್ಲಿ ವಿಶೇಷವಾದ ಸ್ಥಾನಮಾನವನ್ನು ಪಡೆದಿದ್ದನು. ಏಕೆಂದರೆ ಈತನು ವಿದ್ಯಾವಂತನು, ಧರ್ಮಪರನು ಆಗಿದ್ದು, ಎಲ್ಲರೂ ನೀತಿವಂತರಾಗಿ ಬಾಳಬೇಕೆಂದು ಹಂಬಲಿಸುತ್ತಿದ್ದನು. ಈತನ ಧರ್ಮ ಸಾಹಿತ್ಯ ಸಂಸ್ಕೃತಿಗಳಿಗೆ ಅನನ್ಯವಾದ ಕೊಡುಗೆಯನ್ನು ಸಲ್ಲಿಸಿದ್ದಾನೆ. ಅನೇಕ ಉಂಬಳಿ ಗ್ರಾಮಗಳನ್ನು ನೀಡಿದನು. ಇವನು ಪರಲೋಕ ಸಾಧನೆಗೋಸ್ಕರ ಮಹಾಜ್ಞಾನಿಗಳನ್ನು ತನ್ನ ರಾಜಧಾನಿಗೆ ಕರೆಯಿಸಿಕೊಂಡು ಅವರಿಂದ ತತ್ವ ಉಪದೇಶ ಪಡೆದುಕೊಂಡನು. ಈತನು ಜಂಗಮರ ದೇಶ ಸಂಚಾರಕ್ಕೆ ಉದಾರ ನೆರವು ನೀಡಿದನು. ಧರ್ಮ ಛತ್ರಗಳನ್ನು ನಿರ್ಮಿಸಿದನು. ಅನೇಕ ಸಂಗೀತಗಾರರಿಗೆ ಆಶ್ರಯ ನೀಡಿದ್ದನು. ಜಂಗಮರಿಗೂ ಬ್ರಾಹ್ಮಣರಿಗೂ ಬಹು ಉದಾರವಾಗಿ ಆಶ್ರಯ ನೀಡಿದ್ದನು. ಹೀಗೆ ಜನಗಳಿಗೆ ಯಾವ ತೊಂದರೆಯೂ ಇಲ್ಲದಂತೆ ನಿರಾತಂಕವಾಗಿ ರಾಜ್ಯಭಾರ ಮಾಡಿದನು. ಕ್ರಿ.ಶ. ೧೬೬೭ರಲ್ಲಿ ಚಿಕ್ಕ ಮಲ್ಲಕಪ್ಪನಾಯಕನು ಶಿವಬಸಪ್ಪ ಎಂಬವನಿಗೆ ಹಂದರಾಳು ಎಂಬ ಗ್ರಾಮವನ್ನು ದಾನ ನೀಡಿರುವನು ಎಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ.

೭. ಸಿದ್ಧಪ್ಪನಾಯಕ: ಅಂಕುಶರಾಯನ ಮಕ್ಕಳಾದ ಸಿದ್ಧಪ್ಪ ಹಾಗೂ ಪ್ರಸನ್ನಪ್ಪನಾಯಕ ಇವರ ತಂದೆ ಆಳಿದ ಪ್ರದೇಶಗಳಾದ ನಂದ್ಯಾಳ, ಶಿರಿವಾಳ, ಸೀಮೆಗೆ ಒಡೆಯರಾಗಿ ದೊರೆತನ ಮಾಡುತ್ತಿದ್ದರು. ಬಿಜಾಪುರ ಆದಿಲ್‌ಶಾಹಿ ದಾಳಿಯಿಂದ ತಮ್ಮ ಪ್ರದೇಶಗಳನ್ನು ಕಳೆದುಕೊಂಡು ಬಳ್ಳಾರಿಯಿಂದ ಒಂದು ಹರದಾರಿ ದೂರದಲ್ಲಿರುವ ಹಂದರಹಾಳು ಎಂಬ ಗ್ರಾಮದಲ್ಲಿ ವ್ಯವಸಾಯ ಮಾಡಿಕೊಂಡು ಇದ್ದರು. ಸಿದ್ಧಪ್ಪನಾಯಕನಿಗೆ ದೊಡ್ಡ ತಲೆಯ ರಾಮಪ್ಪನಾಯಕ ಮತ್ತು ಹನುಮಪ್ಪ ನಾಯಕ ಎಂಬ ಇಬ್ಬರು ಮಕ್ಕಳಿದ್ದರು.

೮. ದೊಡ್ಡತಲೆ ರಾಮಪ್ಪ ನಾಯಕನು ಈತನು ಸಿದ್ಧಪ್ಪನಾಯಕನ ಹಿರಿಯ ಮಗ. ತಂದೆ ರಾಜ್ಯ ಕಳೆದುಕೊಂಡಾಗ ಈತನು ಚಿಕ್ಕವನಿರುವನು. ಬಾಲದ ಹನುಮಪ್ಪ ನಾಯಕನ ಐದನೆಯ ಮಗ ಚಿಕ್ಕಮಲ್ಲಪ್ಪನಾಯಕ. ಈ ಸಂತತಿಯ ದ್ಯಾವಪ್ಪನಾಯಕನ ಹಿರಿಯ ಹೆಂಡತಿ ಮಕ್ಕಳಾದ ಹನುಮಪ್ಪನಾಯಕ ಹಿರಿಯ ರಾಮಪ್ಪನಾಯಕ ಚಿಕ್ಕರಾಮಪ್ಪ ಎಂಬುವವರು ಬಳ್ಳಾರಿ ಪರಗಣಗಳನ್ನು ಆಳ್ವಿಕೆ ಮಾಡಿ ಸ್ವರ್ಗಸ್ಥರಾದರು. ಈ ಮೂವರಿಗೂ ಸಂತಾನವಿರಲಿಲ್ಲ. ಆ ಕಾರಣ ಚಿಕ್ಕ ರಾಮಪ್ಪನಾಯಕನ ಚಿಕ್ಕ ತಾಯಿ ನೀಲಮ್ಮ ಹಂದರಾಳಿಗೆ ಬಂದು ಸಿದ್ಧಪ್ಪನಾಯಕನ ಮಕ್ಕಳಾದ ದೊಡ್ಡತಲೆ ರಾಮಪ್ಪನಾಯಕ ಮತ್ತು ಹನುಮಪ್ಪನಾಯಕರನ್ನು ಬಳ್ಳಾರಿಗೆ ಕರೆದುಕೊಂಡು ಹೋಗಿ ದೊಡ್ಡತಲೆ ರಾಮಪ್ಪನಾಯಕನಿಗೆ ಪಟ್ಟ ಕಟ್ಟಿದಳು. ಈತ ಬಳ್ಳಾರಿ, ಶೃಂಗೇರಿ, ಎಮ್ಮಿಗನೂರು ಇವು ಮುಂತಾದ ಪರಗಣಗಳನ್ನು ಶಾಲಿವಾಹನ ಶಕೆ ೧೬೫೭ರಿಂದ ಕ್ರಿ.ಶ. ೧೬೫೬ರವರೆಗೆ ಸುಮಾರು ೩೦ ವರ್ಷಗಳ ಕಾಲ ರಾಜ್ಯವಾಳಿದರು. ಈತನ ಹೆಂಡತಿ ಸಿದ್ಧಮ್ಮ ಎಂಬುದು ತಿಳಿದುಬರುತ್ತದೆ.

೯. ಹನುಮಪ್ಪನಾಯಕನು ಸಿದ್ಧಪ್ಪನಾಯಕನ ಕಿರಿಯ ಮಗ. ಇವನ ಅಣ್ಣನಾದ ದೊಡ್ಡ ತಲೆ ರಾಮಪ್ಪನಾಯಕನಿಗೆ ನೀಲಮ್ಮಳು ಪಟ್ಟ ಕಟ್ಟಿದಾಗ ಇವರಿಬ್ಬರಲ್ಲಿ ಮನಸ್ತಾಪ ಉಂಟಾಯಿತು. ಇದೇ ಸಂದರ್ಭದಲ್ಲಿ ಮೊಗಲರು ಬಂದು ರಾಮಪ್ಪ ನಾಯಕನ ಮೇಲೆ ದಾಳಿ ಮಾಡಿದರು. ತನ್ನ ತಮ್ಮನಾದ ಈ ಹನುಮಪ್ಪನಾಯಕನನ್ನು ಹಿಡಿದುಕೊಟ್ಟನು. ಮೊಗಲರು ಇವನನ್ನು ಹಬ್ಬೇಹಳ್ಳಿ ಪಹರಾದಲ್ಲಿಟ್ಟಿದ್ದರು. ಆಗ ಅಣ್ಣ ದೊಡ್ಡ ತಲೆ ರಾಮಪ್ಪನಾಯಕನು ಇವನನ್ನು ಬಿಡಿಸಲಿಲ್ಲ. ಈತನು ಬಂಧನದಲ್ಲಿರುವಾಗ ದೇವರ ಅನುಗ್ರಹವೆನ್ನುವಂತೆ ತುಂಗಭದ್ರಾ ನದಿಗೆ ರಾತ್ರಿ ವೇಳೆಯಲ್ಲಿ ಪ್ರವಾಹ ಬಂದು ಕಿಲ್ಲೆಯನ್ನು ಪ್ರವೇಶಿಸಿತ್ತು. ಆಗ ಇವನನ್ನು ಕಾಯುತ್ತಿದ್ದ ಬಲೆಗಾರರು ತಮ್ಮ ಹೆಂಡಿರು ಮಕ್ಕಳನ್ನು ಪ್ರವಾಹದಿಂದ ಪಾರುಮಾಡಲು ಮನೆಗೆ ಹೋದಾಗ ಅವನು ಪಾರಾಗಿ ಕೆಂಚನ ಗುಡ್ಡಕ್ಕೆ ಬಂದನು.

ಆಗ ಅಲ್ಲಿಯ ಪಂಪಾಪತಿಗೌಡನು ಇವನಿಗೆ ಆಶ್ರಯ ಕೊಟ್ಟನು. ಮುಂದೆ ದೊಡ್ಡ ತಲೆ ರಾಮಪ್ಪನಾಯಕನು ದೈವಾಧೀನನಾದ ಮೇಲೆ ಬಳ್ಳಾರಿಯಿಂದ ಕಾರಕೂನರು ಹೋಗಿ ಈ ಹನುಮಪ್ಪನನ್ನು ಕರೆತಂದು ಪಟ್ಟ ಕಟ್ಟಿದರು. ಅಣ್ಣ ಆಳಿದ ಬಳ್ಳಾರಿ ಕುರುಗೋಡು, ತೆಕ್ಕಲಕೋಟೆ ಪ್ರದೇಶಗಳನ್ನು ಶ.ಕ.೧೬೮೭ನೆಯ ಸಂವತ್ಸರ ಶಕ. ೧೬೯೧ನೆಯ ವಿರೋಧಿ ಸಂವತ್ಸರ ಸುಮಾರು ಐದು ವರ್ಷಗಳ ಕಾಲ ಆಳಿದನು. ಈತನು ಸ್ವರ್ಗಸ್ಥನಾದ ಮೇಲೆ ಇವನ ಸಾಕುಮಗನಾದ ದೊಡ್ಡಪ್ಪ ನಾಯಕನಿಗೆ ಪಟ್ಟ ಕಟ್ಟಿದರು.

೧೧೦. ದೊಡ್ಡಪ್ಪನಾಯಕ ಹನುಮಪ್ಪ ನಾಯಕನು ಕೆಂಚನಗುಡ್ಡದಲ್ಲಿರುವಾಗ ಸಿದ್ಧರಾಮವ್ವ ಎಂಬ ಬ್ರಾಹ್ಮಣ ಯುವತಿಯನ್ನು ಪ್ರೀತಿಸಿ, ಅವಳ ಸೇವೆಗಾಗಿ ಚಿಪ್ಪಿಗರ ಭೂದಿ ಎಂಬುವನನ್ನು ನೇಮಿಸಿದ್ದನು. ಈತನು ಒಂದು ಅನಾಥ ಗಂಡುಮಗವನ್ನು ಇವಳಿಗೆ ತಂದುಕೊಟ್ಟಿದ್ದನು. ಸಿದ್ಧರಾಮವ್ವ ಆ ಮಗುವನ್ನು ಪ್ರೀತಿಯಿಂದ ಬೆಳೆಸಿದಳು. ಆ ಮಗುವೆ ದೊಡ್ಡಪ್ಪ ನಾಯಕ. ಮುಂದೆ ಹನುಮಪ್ಪನಾಯಕ ಸ್ವರ್ಗಸ್ಥನಾದ ಮೇಲೆ ಈತನ ಹೆಂಡತಿ ಪದ್ಮಮ್ಮನಿಗೆ ಮಕ್ಕಳಿಲ್ಲದ್ದರಿಂದ, ತನ್ನ ಅಣ್ಣ ಚನ್ನಪ್ಪನ ಒಂದು ವರ್ಷದ ಮಗುವಿಗೆ ದೇವಪ್ಪನಾಯಕನೆಂದು ಹೆಸರಿಟ್ಟು ಪಟ್ಟ ಕಟ್ಟಿದಳು. ಕಾರಣ ಹನುಮಪ್ಪ ನಾಯಕನ ಸಾಕುಮಗನಾದ ದೊಡ್ಡಪ್ಪ ನಾಯಕನಿಗೆ ಪಟ್ಟ ಕಟ್ಟಬಾರದು ಎಂಬ ಉದ್ದೇಶ ಇವಳದ್ದಾಗಿತ್ತು. ಅಲ್ಲದೆ ಆ ಸಮಯದಲ್ಲಿ ದೊಡ್ಡಪ್ಪ ನಾಯಕನನ್ನು ಕೊಲ್ಲುವ ಮಸಲತ್ತು ಮಾಡಿದ್ದಳು. ಆದರೆ ದೊಡ್ಡತಲೆ ರಾಮಪ್ಪನಾಯಕ ಹೆಂಡತಿ ಸಿದ್ಧಮ್ಮ ಆ ಅನಾಹುತವನ್ನು ತಪ್ಪಿಸಿ, ದೊಡ್ಡಪ್ಪ ನಾಯಕನನ್ನು ರಾಜನಾಗುವಂತೆ ಮಾಡುತ್ತಾಳೆ. ಮುಂದೆ ದೊಡ್ಡಪ್ಪ ನಾಯಕನು ಬಳ್ಳಾರಿ, ಕುರುಗೋಡು ಪ್ರದೇಶಗಳನ್ನು ಆಳುತ್ತಿರುವ ಸಂದರ್ಭದಲ್ಲಿ ಶ್ರೀರಂಗಪಟ್ಟಣದ ನವಾಬನ ದಂಡು ಬಂದು ಮುತ್ತಿಗೆ ಹಾಕಿತ್ತು. ಆಗ ಈತನು ಕುರುಗೋಡಿಗೆ ವಲಸೆ ಹೋದನು. ಇತ್ತ ಬಳ್ಳಾರಿಯಲ್ಲಿ ದೊಡ್ಡಪ್ಪನಾಯಕನ ಆಳ್ವಿಕೆಯನ್ನು ನೋಡಿದರೆ ಇವನೊಬ್ಬ ದುರ್ಬಲ ರಾಜನಾಗಿದ್ದನೆಂದು ತಿಳಿದುಬರುತ್ತದೆ.

ಈತನು ಶಾಲಿವಾಹನ ಶಕೆ, ೧೬೯೨ ವಿಕೃತ ಸಂವತ್ಸರದಿಂದ ೧೬೯೭ರ ಮನ್ಮಥ ಸಂವತ್ಸರವರೆಗೆ ಒಟ್ಟು ಆರು ವರ್ಷಗಳ ಕಾಲ ರಾಜ್ಯವಾಳಿದನು. ಈತನು ಉತ್ತಮ ಆಡಳಿತಗಾರನಾಗಿದ್ದನು. ಇವನು ರಾಜ್ಯವನ್ನು ಪ್ರಾಂತಗಳನ್ನಾಗಿ ವಿಭಾಗಿಸಿ, ಆಯಾ ಪ್ರಾಂತಗಳಿಗೆ ಪ್ರಾಂತಾಧಿಕಾರಿಗಳನ್ನು ನೇಮಿಸಿದ್ದನು. ಇದರಿಂದ ರಾಜ್ಯವಾಳಲು ಅನುಕೂಲಕರವಾಗಿತ್ತೆಂದು ತಿಳಿದುಬರುತ್ತದೆ. ಹಂಡೆ ಅರಸು ಮನೆತನದಲ್ಲೇ ಶ್ರೇಷ್ಠನಾಗಿದ್ದು ಪ್ರಜೆಗಳ ಪ್ರೀತಿಗೆ ಪಾತ್ರನಾದನು.

೧೧೧. ಚಿಕ್ಕನಾಯಕ ಸಾಹೇಬನು ಈತನು ಚಿಕ್ಕಮಲ್ಲಪ್ಪನಾಯಕನ ಮಗ. ತಂದೆಯ ತರುವಾಯ ಕಣ್ಣೆಕಲ್ಲು, ರೂಪನಗುಡಿ, ವಡ್ಡು, ದರೋಜಿ, ಸಿಂಧನೂರು, ಸಿರುಗುಪ್ಪ ಇವು ಮುಂತಾದ ಸ್ಥಳಗಳನ್ನು ಆಳಿದನು ಎಂದು ತಿಳಿದುಬರುತ್ತದೆ. ಆದರೆ ಬಳ್ಳಾರಿ ಕೈಫಿಯತ್ತಿನಲ್ಲಿ ಮೊಗಲಾಯಿಯವರು ರಾಜ್ಯವನ್ನು ಕಟ್ಟಿಕೊಂಡ ಕಾರಣ ಇವರು ರಾಜ್ಯವಾಳಲಿಲ್ಲವೆಂದು ಹೇಳಲಾಗಿದೆ. ಈ ಮೇಲಿನ ಪ್ರದೇಶಗಳನ್ನಾಳುವಾಗ ಒಂದರಲ್ಲಿ ಬಿಜಾಪುರದ ಆದಿಲ್‌ಶಾಹನು ಮುತ್ತಿಗೆ ಹಾಕಿ ಆ ಪ್ರದೇಶಗಳನ್ನು ವಶಪಡಿಸಿಕೊಂಡನು. ನಂತರದಲ್ಲಿ ಬಳ್ಳಾರಿ ಮತ್ತು ಕುರುಗೋಡು ಎರಡು ಪರಗಣಗಳು(ಸರಹದ್ದು) ಇವನಿಗೆ ಉಳಿದವೆಂದು ಹೇಳಲಾಗಿದೆ. ಇವನಿಗೆ ದೇವಪ್ಪ ನಾಯಕ ಎಂಬ ಮಗನಿದ್ದನು.

೧೨. ಅಂಕುಶರಾಯನ ಎರಡನೆಯ ಮಗನಾದ ಪ್ರಸನ್ನಪ್ಪ ನಾಯಕನು ರಾಜ್ಯವಾಳಿದ ಬಗ್ಗೆ ಅಷ್ಟೇನೂ ವಿವರಗಳಿಲ್ಲ. ಕಾರಣ ಚಿಕ್ಕಮಲ್ಲಪ್ಪನ ಸಂತತಿಯ ದ್ಯಾವಪ್ಪನಾಯಕನ ಹೆಂಡತಿಯಾದ ನೀಲಮ್ಮಳಿಗೆ ಸಂತಾನವಿಲ್ಲದಿದ್ದಾಗ ಹಂದರಾಳನಲ್ಲಿ ಪ್ರಸನ್ನಪ್ಪನಾಯಕನ ಅಣ್ಣ ಸಿದ್ಧಪ್ಪನ ಮಗನಾದ ದೊಡ್ಡ ತಲೆ ರಾಮಪ್ಪನಾಯಕನನ್ನು ಬಳ್ಳಾರಿಗೆ ಕರೆದುಕೊಂಡು ಬಂದು ಪಟ್ಟ ಕಟ್ಟಿದ್ದಳು. ಪ್ರಸನ್ನಪ್ಪನಾಯಕ ೧೬೭೦ರಲ್ಲಿ ಪಟ್ಟಕ್ಕೆ ಬಂದ. ಇದೇ ವೇಳೆ ಸಾಧಿಸಿ ವಸಂತಮ್ಮ ಮತ್ತು ಲಕ್ಷ್ಮಮ್ಮ ಎಂಬ ವೇಶ್ಯಾಂಗನೆಯರು ತಾಡಿಮರಿಯಿಂದ ಅನಂತಪುರಕ್ಕೆ ಬಂದರು. ಪ್ರಸನ್ನಪ್ಪ ವಸಂತಮ್ಮನಿಗೆ ಮೋಹಗೊಂಡು ಅವಳಿಗೊಂದು ಅರಮನೆ ಕಟ್ಟಿಸಿಕೊಟ್ಟು ಸುಖದಿಂದಿರಿಸಿದ. ಆದರೆ ದುರ್ಬುದ್ಧಿಯ ಲಕ್ಷ್ಮಮ್ಮನ ಮಾತಿಗೆ ಕಟ್ಟುಬಿದ್ದ ವಸಂತಮ್ಮ ತನ್ನಲ್ಲಿ ತುಂಬಾ ವಿಶ್ವಾಸವಿರಿಸಿಕೊಂಡಿದ್ದ ಪ್ರಸನ್ನಪ್ಪನನ್ನು ಮೋಸ ಮಾಡಿ ಓಡಿಹೋಗಲು ಪ್ರಯತ್ನಿಸಿದಳು. ತನ್ನ ಅಕ್ಕನಿಗೆ ಸ್ವಲ್ಪ ಸೈನ್ಯ ಸಹಾಯಕ್ಕೆ ತೆಗೆದುಕೊಂಡು "ಅನಂತಪುರದ ಕೆರೆಯ ಬದಿಯ ದೇವರಕೊಂಡಕ್ಕೆ ಬಾ" ಎಂದು ಪ್ರಸನ್ನಪ್ಪನಿಗೆ ತಿಳಿಸಿ 'ನನ್ನ ಅಕ್ಕ ವೆಂಕಟೇಶ್ವರನ ದರ್ಶನಕ್ಕೆ ದೇವರಕೊಂಡಕ್ಕೆ ಬಂದಿದ್ದು ಅವಳನ್ನು ನೋಡಿಕೊಂಡು ಬರುವೆ' ಎಂದು ತಿಳಿಸಲು ಪ್ರಸನ್ನಪ್ಪ ಅವಳೊಡನೆ ಹೊರಡಲು ಒಡಂಬಟ್ಟ. ಅವಳು ತುಸುದೂರ ಹೋಗವುದರೊಳಗೆ ಮನದಲ್ಲಿ ಏನೋ ಅನುಮಾನ ಹುಟ್ಟಿ ಅವಳನ್ನು ಹಿಂದಕ್ಕೆ ಕರೆಯಿಸಿ ಬೆಳಿಗ್ಗೆ ಹೋಗಲು ತಿಳಿಸಿದ. ಆದರೆ ಮರಳಿ ಬಂದ ವಸಂತಮ್ಮ ದೊರೆ ಮಲಗಿದ್ದನ್ನು ಕಂಡು ತನ್ನ ಕುತಂತ್ರ ಒಳಸಂಚು ರಾಜನಿಗೆ ತಿಳಿದಿದೆ ಎಂದು ಬಗೆದು ಮುಂದೆ ಎರಗಬಹುದಾದ ಗಂಡಾಂತರಕ್ಕೆ ಹೆದರಿ ಅರ್ಧರಾತ್ರಿಯಲ್ಲಿ ಪ್ರಸನ್ನಪ್ಪ ಸಂಪೂರ್ಣ ನಿದ್ರಾವಸ್ಥೆಯಲ್ಲಿರುವಾಗಲೇ ಅವನನ್ನು ಇರಿದುಕೊಂದಳು. ಈ ಸುದ್ದಿ ಬುಕ್ಕಪಟ್ಟಣದಲ್ಲಿದ್ದ ಪ್ರಸನ್ನಪ್ಪನ ತಮ್ಮ ಪವಾಡಪ್ಪನಿಗೆ ತಲುಪಲು ಆತ ಅತ್ಯಂತ ದುಃಖಪೂರಿತನಾಗಿ ಅನಂತಪುರಕ್ಕೆ ಆಗಮಿಸಿದ. ಅಷ್ಟೇ ಅಲ್ಲ ಸಹೋದರನ ಪರವಾಗಿ ರಾಜ್ಯದ ಆಡಳಿತದ ಜವಾಬ್ದಾರಿ ಹೊತ್ತನು.

ಈತನು ಪ್ರಸನ್ನಪ್ಪನಾಯಕನ ಮಗನು ಎಂಬುದಕ್ಕೆ ಸ್ಪಷ್ಟ ಮಾಹಿತಿಯಿಲ್ಲ. ಕುರುಗೋಡು ಕೈಫಿಯತ್ತಿನಲ್ಲಿ ಬಂದ ವಿಷಯವೇನೆಂದರೆ ದೊಡ್ಡಹನುಮಪ್ಪ ನಾಯಕನು ಬಳ್ಳಾರಿಯಲ್ಲಿ ದೊರೆತನ ಮಾಡುವಾಗ ಕುರುಗೋಡು ಸಿಂಹಾಸನ ಖಾಲಿಯಾಗಿತ್ತು. ಆಗ ಹಂಡೆ ಸಿದ್ಧಮ್ಮ ಮತ್ತು ಪದ್ಮಮ್ಮ ಇಬ್ಬರೂ ಸೇರಿ "ಅನಂತಪುರದಿಂದ ಪೂರ್ವದಲ್ಲಿ ಹಂದರಹಳ್ಳಿ ಹಂಡೆ ವಂಶಸ್ಥ ಪ್ರಸನ್ನನಾಯಕನ ವಂಶಸ್ಥರು ಅನಂತಪುರದಲ್ಲಿ ಇರಲಾಗಿ ಅವರ ಪೈಕಿ ಒಬ್ಬ ಹುಡುಗನನ್ನು ತೆಗೆದುಕೊಂಡು ಬಂದು ಕುರುಗೋಡಿನಲ್ಲಿ ಪಟ್ಟಕಟ್ಟಿ ಆತನಿಗೆ ಪ್ರಸನ್ನರಾಮಪ್ಪನಾಯಕ ಎಂದು ಹೆಸರಿಟ್ಟು ಕುರುಗೋಡಿನ ದೊರೆತನಕ್ಕೆ ಇಟ್ಟುಕೊಂಡರು. ಕುರುಗೋಡು ಪರಗಣದಲ್ಲಿ

ಕೆಲವು ಗ್ರಾಮಗಳು ಕಸುಬೆ ಸಹಿತ ದೊರೆತನ ಮಾಡುತ್ತಾ ಇದ್ದರು ಎಂದು ಕುರಗೋಡು ಕೈಫಿಯತ್ತಿನಲ್ಲಿ ಉಲ್ಲೇಖಿಸಲಾಗಿದೆ. ಹೀಗಾಗಿ ಪ್ರಸನ್ನಪ್ಪನಾಯಕನ ಮಗನು ಎಂಬುದಕ್ಕೆ ಸ್ಪಷ್ಟ ಉಲ್ಲೇಖವಿಲ್ಲ. ಬಳ್ಳಾರಿ ಕೈಫಿಯತ್ತಿನಲ್ಲೂ ಈತನನ್ನು ಪ್ರಸನ್ನಪ್ಪನ ಮೊಮ್ಮಗ ಎಂದು ಹೇಳಲಾಗಿದೆ. ಈ ಹಿನ್ನೆಲೆಯಲ್ಲಿ ಈತನು ಕುರುಗೋಡಿನ ಕೆಲವೊಂದು ಭಾಗಗಳಲ್ಲಿ ಆಳ್ವಿಕೆ ನಡೆಸಿದ ಮಾಹಿತಿಯು ದೊರೆಯುತ್ತದೆ.

೧೩. ಹನುಮಪ್ಪ ನಾಯಕ ದ್ಯಾಮಪ್ಪನಾಯಕನ ಹಿರಿಯ ಮಗನಾದ ಈತನು ಕುರುಗೋಡು ಸೀಮೆಯನ್ನು ಆಳಿದನು. ಈತ ಶಾಲಿವಾಹನ ಶಕೆ ೧೬೩೧ನೇ ವಿರೋಧಿ ಸಂವತ್ಸರ ೧೬೪೧ನೆಯ ವಿಳಂಬಿ ಸಂವತ್ಸರವರೆಗೆ ಶಾಲಿವಾಹನ ಶಕೆ ೧೬೩೧ನೇ ವಿರೋಧಿ ಸಂವತ್ಸರ ಹತ್ತು ವರ್ಷಗಳ ಕಾಲ ರಾಜ್ಯವಾಳಿದನು. ಈತನಿಗೆ ಸಂತಾನವಿರಲಿಲ್ಲ ಇವನು ಉತ್ತಮ ಆಡಳಿತಗಾರನಾಗಿದ್ದನು. ತನ್ನ ಆಳ್ವಿಕೆಯಲ್ಲಿ ಹಲವಾರು ಜನೋಪಯೋಗ ಕಾರ್ಯಗಳನ್ನು ಕೈಗೊಂಡನು ಹಾಗೂ ಹಲವಾರು ಮಠಗಳನ್ನು ಕಟ್ಟಿಸಿ, ಸಾಮಾಜಿಕ ಕ್ರಾಂತಿಯನ್ನು ಮಾಡಿದನೆಂದು ತಿಳಿದುಬರುತ್ತದೆ.

೧೪. ಹಿರೇರಾಮಪ್ಪನಾಯಕ: ದ್ಯಾವಪ್ಪನಾಯಕನ ಎರಡನೆಯ ಮಗನಾದ ಇವನು ಹನುಮಪ್ಪನಾಯಕನ ತರುವಾಯ ಬಳ್ಳಾರಿ, ಕುರುಗೋಡು, ತೆಕ್ಕಲಕೋಟೆ, ಪರಗಣಗಳನ್ನು ಶ.ಕ. ೧೬೪೧ನೇ ವಿಕಾರಿ ಸಂವತ್ಸರದಿಂದ ೧೬೪೯ನೆಯ ವಿಶ್ವಾಸ ಸಂವತ್ಸರ ಸುಮಾರು ೯ ವರ್ಷಗಳವರೆಗೆ ಆಳ್ವಿಕೆ ಮಾಡಿದನು. ಇವನಿಗೆ ಸಂತಾನವಿರಲಿಲ್ಲ. ರಾಮಪ್ಪನಾಯಕನು ಉತ್ತಮ ಆಡಳಿತಗಾರನಾಗಿದ್ದನು. ಇವನು ತನ್ನ ಆಳ್ವಿಕೆಯ ಸಮಯದಲ್ಲಿ ಹಲವಾರು ಜನೋಪಕಾರಿ ಕೆಲಸಗಳನ್ನು ಕೈಗೊಂಡನು. ಹಲವಾರು ದೇವಾಲಯಗಳನ್ನು ಕೋಟೆ, ಕೊತ್ತಲಗಳನ್ನು ಕೆರೆಗಳನ್ನು ತೋಡಿಸಿದನು. ರೈತರಿಗೆ ಅನುಕೂಲ ದೃಷ್ಟಿಯಿಂದ ನೀರಾವರಿ ಮಾಡಿಸಿದನು. ರಾಮಪ್ಪ ನಾಯಕನು ವೀರಶೈವ ಧರ್ಮಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದ್ದನು. ಅವನು ಅನೇಕ ಧಾರ್ಮಿಕ ಕ್ಷೇತ್ರದಲ್ಲಿ ಸೇವೆಯನ್ನು ಸಲ್ಲಿಸಿದನು. ದಾನಬಿಟ್ಟ ಉಲ್ಲೇಖವಿದೆ. ಕ್ರಿ.ಶ. ೧೭೬೮ರಲ್ಲಿ ಹಂಡೆ ಹಿರಿಯ ರಾಮಪ್ಪನಾಯಕರು ನಿಡುಮಾಮಿಡಿ, ಸಂಗನಕಲ್ಲು ಮತ್ತು ಭಾಗನೂರು ಗ್ರಾಮಗಳನ್ನು ತನ್ನ ಹಿರಿಯರಿಗೆ ಸುಕೃತವಾಗಬೇಕೆಂದು ಕೊಟ್ಟೂರುಸ್ವಾಮಿ ಮಠಕ್ಕೆ ದಾನ ನೀಡುತ್ತಾನೆ. ರಾಜನು ಈ ಊರಿನ ಭೂಮಿಗಳ ಉತ್ಪತ್ತಿಯನ್ನು ನಿಗದಿ ಮಾಡಿ ಆ ಉತ್ಪತ್ತಿಯನ್ನು ಬಳ್ಳಾರಿ, ಕೊಟ್ಟೂರು ಮಠದಲ್ಲಿ ದಾಸೋಹ ನೀಡಬೇಕೆಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ.

ರಾಮಪ್ಪನಾಯಕನು ವೀರಶೈವ ಮಠಗಳಿಗಲ್ಲದೆ ವೈದಿಕ ಮಠಗಳಿಗೂ ಉದಾರ ದಾನ ಬಿಟ್ಟ ಉಲ್ಲೇಖಗಳಿವೆ. ರಾಮಪ್ಪನಾಯಕರ ಶಾಸನದಲ್ಲಿ ಭೂದಾನ ಪ್ರತಿಕ್ರಮ ಏನೆಂದರೆ ಸೋಮವಾರ ಪುಣ್ಯ ಕಾಲದಲ್ಲಿ ಶೃಂಗೇರಿ ಸ್ವಾಮಿಗಳ ಮಠಕ್ಕೆ ಶ್ರೀ ದೇವರ ದೀಪಾರಾಧನೆ

ನೈವೇದ್ಯ ನಡೆಯುವುದಕ್ಕೆ ಹೊಸಕೇರಿ ಗುಂಟಿನೆ ಹಳ್ಳಿ ಎಂಬ ಗ್ರಾಮವನ್ನು ದಾನ ಬಿಟ್ಟಿದ್ದು ತಿಳಿದುಬರುತ್ತದೆ. ಈ ರಾಮಪ್ಪ ನಾಯಕರ ಇನ್ನೊಂದು ಶಾಸನ ತಿಳಿಸುವಂತೆ ಜರಗುಂಟಿ ಎಂಬ ಗ್ರಾಮವನ್ನು ಶೃಂಗೇರಿ ಮಠದ ದೀಪಾರಾಧನೆ ನೈವೇದ್ಯ ನಡೆಯುವ ನಿಮಿತ್ತ ಸೋಮ ವಾರದಂದು ದಾನ ರೂಪದಲ್ಲಿ ಕೊಡಲಾಗಿದೆ. ರಾಮಪ್ಪ ಎಲ್ಲ ಧರ್ಮಗಳಿಗೆ ಸಮಾನ ರೀತಿಯಿಂದ ನೋಡಿಕೊಂಡು ಇವನ ಆಳ್ವಿಕೆಯಲ್ಲಿ ಒಳ್ಳೆಯ ಆಡಳಿತಗಾರನಾಗಿದ್ದಾನೆಂದು ಕಂಡುಬರುತ್ತದೆ. ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಕ್ಷೇತ್ರದಲ್ಲಿ ಒಂದು ಸಮಗ್ರ ನಿಷ್ಠಾವಂತ ರಾಜನೆಂದು ಬಿರುದಿಗೆ ಪಾತ್ರನಾಗಿದ್ದನು. ಇದರಿಂದ ಅರಸರ ರಾಜಕೀಯ ಚರಿತ್ರೆಯಲ್ಲಿ ಒಂದು ಮಹತ್ವದ ಸ್ಥಾನವನ್ನು ಪಡೆದುಕೊಂಡಿದ್ದಾನೆ. ಆಯಾ ಕ್ಷೇತ್ರದಲ್ಲಿ ತಮ್ಮ ಆಡಳಿತವನ್ನು ನಡೆಸಿಕೊಂಡು ಹೋಗುತ್ತಿದ್ದರೆಂದು ಅವನ ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಚಿಕ್ಕರಾಮಪ್ಪನಾಯಕ ದ್ಯಾಮಪ್ಪನಾಯಕನ ಕಿರಿಯ ಮಗ. ಈತನು ತೆಕ್ಕಲಕೋಟೆ ಎಂಬ ಪರಗಣವನ್ನು ಕ್ರಿ.ಶ.೧೯೨೦ನೇ ಪರಭಾವ ಸಂವತ್ಸರದಿಂದ ಕ್ರಿ.ಶ. ೧೯೫೨ನೇ ಸಾಧಾರಣ ಸಂವತ್ಸರದವರೆಗೆ ಸುಮಾರು ಐದು ವರ್ಷಗಳ ಕಾಲ ರಾಜ್ಯವಾಳಿದನು. ಈತನಿಗೂ ಸಂತನಾವಿರಲಿಲ್ಲ.

೧೫. ರಾಣಿ ನೀಲಮ್ಮ ರಾಮಪ್ಪ ನಾಯಕನ ಈ ಮೂರು ಮಕ್ಕಳಿಗೆ ಸಂತಾನವಿಲ್ಲದ್ದರಿಂದ ರಾಮಪ್ಪನಾಯಕನ ಎರಡನೆಯ ಹೆಂಡತಿ ನೀಲಮ್ಮ ಕೆಲವು ದಿವಸ ರಾಜ್ಯವಾಳಿದಳು. ಮುಂದೆ ಅಂಕುಶರಾಯನ ವಂಶಸ್ಥ ಸಿದ್ಧಪ್ಪನಾಯಕನ ದೊಡ್ಡ ತಲೆರಾಮಪ್ಪನಿಗೆ ಪಟ್ಟ ಕಟ್ಟಿದ್ದಳು. ಈತ ಅಪ್ರಾಪ್ತ ವಯಸ್ಸಿನವರಾಗಿದ್ದರಿಂದ ಅವನನ್ನು ಮುಂದಿಟ್ಟುಕೊಂಡು ಶ.ಕ. ೧೬೫೩ನೆಯ ವಿರೋಧಿಕೃತ ಸಂವತ್ಸರ ೧೬೫೬ನೆಯ ಆನಂದ ಸಂವತ್ಸರ ಸುಮಾರು ನಾಲ್ಕು ವರ್ಷಗಳ ಕಾಲ ರಾಜ್ಯವಾಳಿದಳು. ನಂತರದಲ್ಲಿ ದೊಡ್ಡ ತಲೆರಾಮಪ್ಪನಾಯಕನು ದೊಡ್ಡವನಾದ ಮೇಲೆ ಇವನಿಗೂ ಮತ್ತು ನೀಲಮ್ಮಳಿಗೂ ಭಿನ್ನಾಭಿಪ್ರಾಯ ಬಂದಿದ್ದರಿಂದ ಇವಳನ್ನು ಕೊಲ್ಲಿಸಿ ತಾನೇ ರಾಜನಾದ.

ನೀಲಮ್ಮ ರಾಣಿಯು ತನ್ನ ಅಧಿಕಾರದ ಸಮಯದಲ್ಲಿ ಧಾರ್ಮಿಕವಾಗಿ ದೇವಾಲಯಕ್ಕೆ ಕೊಟ್ಟ ದಾನದ ಬಗ್ಗೆ ಉಲ್ಲೇಖಿಸಲಾಗಿದೆ. ಇದರಿಂದ ಅವಳು ಮಠಗಳಿಗೆ ಹಾಗೂ ಸಾರ್ವಜನಿಕ ಕ್ಷೇತ್ರದಲ್ಲಿ ಒಂದು ಉತ್ತಮ ರೀತಿಯಿಂದ ಆಳ್ವಿಕೆ ಮಾಡಿದಳೆಂದು ಶಾಸನದಿಂದ ತಿಳಿದುಬರುತ್ತದೆ. ಕ್ರಿ.ಶ. ೧೭೩೩ರಂದು ಹಂಡೆ ನೀಲಮ್ಮ ರಾಮಪ್ಪನಾಯಕ ಕಲೆಯು ಬಳ್ಳಾರಿಗೆ ಮಹಾಂತ ಸ್ವಾಮಿಗೆ ವುಳೆನೂರ ಗ್ರಾಮವನ್ನು ತನ್ನ ಹಿರಿಯರಿಗೆ ಸುಕೃತವಾಗಬೇಕೆಂದು ಆ ಮಠದಲ್ಲಿ ದಾಸೋಹ ನಡೆಸಲು ದತ್ತಿ ಬಿಡಿಸಲಾಗಿದೆ.

ಹಂಡೆ ಮನೆತನದ ಹೀರೆರಾಮಪ್ಪ, ಚಿಕ್ಕರಾಮಪ್ಪರ ನಾಯಕರ ತರುವಾಯ ಬಂದ ನೀಲಮ್ಮ ಎಂಬ ಈ ವೀರಮಹಿಳೆ ಬಳ್ಳಾರಿಯ ಕಪ್ಪಿನ ಚನ್ನಬಸವಸ್ವಾಮಿಗಳವರಲ್ಲಿ ಅಚಲ ವಿಶ್ವಾಸವಿರಿಸಿ ಮೇಲೆ ಬಂದೆರಗಿದ ಅನೇಕ ದಾಯಾದ ಮತ್ಸರಗಳನ್ನು ಎದುರಿಸಿ, ಅಪ್ರಾಪ್ತ ವಯಸ್ಸಿನ ಕುಮಾರನನ್ನು ಸಾಕಿ ಸಲಹಿ ಅವರಿಗೆ ಉತ್ತಮ ಸಂಸ್ಕಾರ ನೀಡಿ ನಿರ್ಭಯಳಾಗಿ ವ್ಯವಹರಿಸಿರುವಳು. ಕುರುಗೋಡಿನಲ್ಲಿ ಗುರುಗಳ ಆಪ್ತ ಕೊಟ್ರಪ್ಪನಿಗೆ ಸರಕಾರ ಕೊಟ್ಟ ಕಿರುಕುಳ, ತನ್ಮೂಲಕ ಆದ ಅರ್ಥ ಪ್ರಾಣಹಾನಿಯ ವಿಷಯಕ್ಕೆ ವಿಷಾದಿಸಿ ನೆಮ್ಮದಿ ಕಳೆದುಕೊಂಡು ನೀಲಮ್ಮ ತನಗೆ ಐಕ್ಯಪದವಿಗೆ ಅಪ್ಪಣೆಯಾಗಬೇಕು ಎಂದು ಬಿನ್ನವಿಸಿಕೊಂಡುದು, ಮುಂದಿನ ದಾನದತ್ತಿಗಳೆಲ್ಲ ತನ್ನ ಅಲ್ಪವಯಿ ದತ್ತಕಪುತ್ರನ ಹೆಸರಿನಲ್ಲಿ ನಡೆಯುವದು ಎಂದು ನೀಲಮ್ಮ ೧೭೩೩ರಲ್ಲಿ ಮರಿಮಹಾಂತಸ್ವಾಮಿಗಳಿಗೆ "ಎಮ್ಮ ಹಿರಿಯರಿಗೆ ವಿಶೇಷ ಸುಕೃತವಾಗಲೆಂದು" ಸಂಕಲ್ಪಿಸಿ ಬಳ್ಳಾರಿಯ ವಿರಕ್ತಮಠದ ದಾಸೋಹಕ್ಕೆ ಧಾರೆ ಎರೆದಿರುವಳು. ಕ್ರಿ.ಶ. ೧೭೪೭ರಲ್ಲಿ ಕೊಟ್ಟ ದಾನಪತ್ರದಲ್ಲಿ ಶ್ರೀ ಮಠಕ್ಕೆ ಹಿಂದಿನ ರಾಜಮಹಾರಾಜರು ನೀಡಿದ ಮಾನ್ಯಗಳಿಗೆಲ್ಲ ಒಪ್ಪಿತ ನೀಡಿ ಅವುಗಳನ್ನು ಆಯಾ ಶಾಖಾಮಠಗಳ ಅನುಭವಿಕ ದೇವರು ವ್ಯವಸ್ಥಿತವಾಗಿ ನಡೆದುಕೊಂಡು ಬರುವಂತೆ ನಿರೂಪ ಬರೆಸಿದ್ದು ರಾಣಿಯ ಮುತ್ಸದ್ದಿತನವನ್ನು ತೋರಿಸುವಂತಿದೆ.

೧೬. ಪಾವಡೆಪ್ಪನಾಯಕ ಪಾವಡೆಪ್ಪನಾಯಕನು ಅನಂತಪುರನ್ನು ತನ್ನ ರಾಜ್ಯವನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿದನು. ಒಳ್ಳೆಯ ಆಡಳಿತಗಾರನಾಗಿದ್ದನು. ತನ್ನ ಆಳ್ವಿಕೆಯಲ್ಲಿ ರಾಜ್ಯ ವಿಸ್ತರಣೆ ಮಾಡಿದನು. ಹಲವಾರು ದೇವಾಲಯಗಳನ್ನು ಕಟ್ಟಿಸಿ ದಾನ ಬಿಟ್ಟಿದ್ದಾನೆ. ಕ್ರಿ.ಶ. ೧೫೫೦ರಲ್ಲಿ ಮೋದುರಾಪುರಂ ಚನ್ನಕೇಶವ ದೇವಾಲಯಕ್ಕೆ ಭೂಮಿಯನ್ನು ಮತ್ತು ಹಣವನ್ನು ದತ್ತಿಯಾಗಿ ಬಿಟ್ಟನೆಂದು ತಿಳಿದುಬರುತ್ತದೆ. ಅನಂತಪುರದಲ್ಲಿ ಕೆರೆಯನ್ನು ತೋಡಿಸಿದನು. ಮಠಗಳನ್ನು ಕಟ್ಟಿಸಿದನು. ರೈತರಿಗೆ ಅನುಕೂಲವಾಗಲೆಂದು ನೀರಾವರಿ ಮಾಡಿಸಿದನು. ಅವನು ವೀರಭದ್ರೇಶ್ವರ ದೇವಾಲಯ, ಬಸವೇಶ್ವರ ದೇವಾಲಯ, ಸಿದ್ಧರಾಮೇಶ್ವರ ದೇವಾಲಯ, ನಿಡುಮಾಮೀಡಿ ಮಠ ಕಟ್ಟಿಸಿದನು. ಪಾವಡೆಪ್ಪನಾಯಕನು ರೈತರಿಗೆ ಕಂದಾಯ ಮಾಪಿ ಮಾಡಿದನು. ಮುಧುಲಾಪೂರ ಎಂಬ ಗ್ರಾಮವನ್ನು ಕಟ್ಟಿಸಿದನು. ಈ ರಾಜನಿಗೆ ದೇವಮ್ಮ, ಗಿರಿಜಮ್ಮ ಎಂಬ ಇಬ್ಬರು ಹೆಂಡತಿಯರಿದ್ದರು. ಪಾವಡೆಪ್ಪ ನಾಯಕರು ಬರೆದುಕೊಟ್ಟ ಭೂದಾನ ಧರ್ಮ ಶಾಸನ ಕ್ರಮವೇನೆಂದರೆ "ಗ್ರಹಣ ಪುಣ್ಯಕಾಲದಲ್ಲಿ ಶ್ರೀ ವಿದ್ಯಾಶಂಕರ ದೇವರ ದೀಪಾರಾಧನೆಗೆ ನಡೆಯುವ ಕೋಟೆ, ಕೆರೆ, ಮಜರೆ, ಅಲ್ಲಾಪುರ ಎಂಬ ಗ್ರಾಮವನ್ನ ಸಕಲ ಸುವರ್ಣಾದಾಯ ಕಾಡಾರಂಬ ನೀರಾರಂಬ ಸಹಿತವಾಗಿ ಶ್ರೀ ದೇವರ ಪ್ರತಿಯಿಂದ ಸಹಿರಣ್ಯ ಉದ್ಧಾರ ಪ್ರತಿ ವರ್ಷ ಸರ್ವಕಾಲದಲ್ಲಿ ನಿಮ್ಮ ಶಿಷ್ಯ ಪುರಂದಾರ ಸರ್ವಮಾನ್ಯವಾಗಿ ದೇವರ

ದೀಪಾರಾಧನೆ ನೈವೇದ್ಯ ಸಾಂಘಿಕವಾಗಿ ನಡೆಸಿಕೊಳ್ಳಬಹುದು" ಎಂಬ ಕೊಟ್ಟ ಭೂದಾನಶಾಸನ. ಈ ಶಾಸನಗಳಿಂದ ಪಾವಡೆಪ್ಪ ನಾಯಕನ ಆಡಳಿತ ಧಾರ್ಮಿಕ, ಸಾಮಾಜಿಕ, ಆರ್ಥಿಕ ಮೊದಲಾದ ವಿವರಣೆಯು ತಿಳಿದುಬರುತ್ತದೆ.

ಪಾವಡೆಪ್ಪನಾಯಕನು ಈತನು ಒಮ್ಮೆ ಕುಷ್ಠರೋಗದಿಂದ ಬಳಲುತ್ತಿದ್ದಾಗ ಯಾವ ಔಷಧಿಗಳಿಂದಲೂ ವಾಸಿಯಾಗಿರಲಿಲ್ಲ. ಆತನ ಧರ್ಮಗುರುಗಳಾದ ಶ್ರೀ ಕರಿಬಸವಸ್ವಾಮಿಗಳನ್ನು ಭಕ್ತಿಯಿಂದ ಅರಮನೆಗೆ ಬರಮಾಡಿಕೊಂಡನು. ಅರಸನ ಅರಮನೆಯ ಪಕ್ಕದಲ್ಲಿ ಹಿರಿಯರು ಕಟ್ಟಿಸಿದ ಶಾಖಾಮಠದಲ್ಲಿ ಸ್ವಾಮಿಗಳು ಬಿಡಾರ ಮಾಡಿದ್ದರು. ಪ್ರತಿ ದಿವಸ ಗುರುಗಳು ಕೊಟ್ಟ ಬಸ್ಮವನ್ನು ಶರೀರಕ್ಕೆ ಲೇಪನ ಮಾಡಿಕೊಂಡು ಅವರ ಸೇವೆಯಲ್ಲಿ ತೊಡಗಿದನು.

"ವಿಮಲಾತ್ಮ ಡಿಚ್ಚಿನ ವಿಭೂತಿ ಧರಿಯಿಂಚೆ
ನಿತ್ಯಂಬು ಗುರುವುಲ ನೇಮಮುಗನು
ಕೊಲ್ಚು ಚುಂಡಗಾ ಕುಷ್ಠರೋಗಮು ಬಾಸಿ
ವಜ್ರಕಾಯಂ ಬೈನವಾಸಿ ಚೂಚಿ"[೫]

ಇದರಿಂದ ಆತನ ಕಷ್ಠರೋಗವು ವಾಸಿಯಾಗಿ ಪಾವಡೆಪ್ಪನಾಯಕನು ವಜ್ರಕಾಯನಾದನು. ರಾಜನು ವಿಶೇಷ ಶ್ರದ್ಧಾಭಕ್ತಿಗಳಿಂದ ಗುರುವಿಗೆ ನವ್ಯ ವಸ್ತ್ರ ಭೂಷಣಗಳನ್ನು ಹಾಗೂ ಕೆಲವೊಂದು ಗ್ರಾಮಗಳನ್ನು ಕೊಟ್ಟು ಗೌರವಿಸಿದನು. ಗುರುಕೃಪೆಯಿಂದ ಕುಷ್ಠರೋಗವು ಮುಕ್ತವಾಗಿ ಧರ್ಮವರ ಪ್ರಾಂತವು ರಾಯದುರ್ಗದ ಪಾಳೇಗಾರರ ಅಧೀನದಲ್ಲಿತ್ತು. ಅವರೊಡನೆ ಯುದ್ಧ ಮಾಡಿ ಧರ್ಮವರ ಪ್ರಾಂತವನ್ನು ಮರಳಿ ಪಡೆದುಕೊಂಡನು. ಹೀಗೆ ಪಾವಡೆಪ್ಪನಾಯಕನ ಸಾಧನೆಯು ಹಂಡೆ ಅರಸರ ಸಾಮ್ರಾಜ್ಯ ಶಕ್ತಿ ಪ್ರತಿಷ್ಠೆಯನ್ನು ಹೆಚ್ಚಿಸಿತು. ಈತ ಸಮರ್ಥ ರಾಜಕಾರಣಿಯಾಗಿದ್ದನು. ಚತುರ ಹಾಗೂ ಪರಾಕ್ರಮಿಯಾದ ಯೋಧನು ಆಗಿದ್ದನು. ಕೋಟೆಗಳನ್ನು ಕಟ್ಟಿಸಿ ಸಾಮ್ರಾಜ್ಯ ಭದ್ರಗೊಳಿಸಿದನು. ನೀರಾವರಿಯ ಸೌಕರ್ಯವನ್ನು ವ್ಯಾಪಕಗೊಳಿಸಿ ವ್ಯವಸಾಯಕ್ಕೆ ಅನುಕೂಲ ವಾಗಲೆಂದು ಮಾಡಿದನು. ಸಾಂಸ್ಕೃತಿಕ ಚಟುವಟಿಕೆಗಳನ್ನು ವರ್ಧಿಸಿ ಜನಜೀವನ ಸುಖಮಯವಾಗು ವಂತೆ ಆಸಕ್ತಿಯನ್ನು ವಹಿಸಿದನು. ಹಂಡೆ ಅರಸರ ವಿಜಯನಗರ ಸಾಮ್ರಾಜ್ಯದಲ್ಲಿ ನನಸಾಗಿದ್ದ ವೈಭವವನ್ನು ಧಾರ್ಮಿಕ ಹಾಗೂ ಸಾಂಸ್ಕೃತಿಕ ಉದಾತ್ತ ಸಂಪ್ರದಾಯಗಳನ್ನು ಈ ಹಂಡೆ ಅರಸರು ಪುನರುಜ್ಜೀವನಗೊಳಿಸಿದರು. ಕನ್ನಡ ಸಾಹಿತ್ಯ ಹಾಗೂ ಶಿಲ್ಪಕಲೆಗೆ ಪ್ರೋತ್ಸಾಹ ನೀಡಿದ ಈ ಅರಸರು ಸಾಂಸ್ಕೃತಿಕ ಸಮ್ಮಿಲನಕ್ಕೆ ಅವಕಾಶ ಮಾಡಿಕೊಟ್ಟರು. ಪ್ರಜೆಗಳ ಹಿತವನ್ನು ಸಾಧಿಸುವ ಉದ್ದೇಶದಿಂದ ಶ್ರಮಿಸಿ ಸಫಲರಾಗಿದ್ದರೆಂದು ತಿಳಿದುಬರುತ್ತದೆ.

ಕ್ರಿ.ಶ.೧೭೨೦ರ ವೇಳೆಗೆ ಅನಂತಪುರವನ್ನು ಕಡಪ ನವಾಬರು ತಮ್ಮ ಆಡಳಿತಕ್ಕೆ ತೆಗೆದುಕೊಂಡರು. ಪಾವಡೆಪ್ಪನ ಆಸ್ಥಾನದಲ್ಲಿ ರಾಮಾಜಿ ಎಂಬ ಅಧಿಕಾರಿ ನವಾಬನ ಪ್ರಭಾವಕ್ಕೆ ಒಳಗಾಗಿ ರಾಜ್ಯವನ್ನು ನವಾಬರಿಗೆ ವಹಿಸಿಕೊಡಲು ಯೊಚಿಸಿದ. ರಾಮಾಜೀ ಪ್ರೇರಣೆಯಂತೆ ನವಾಬ ಸಣ್ಣ ಸೈನ್ಯ ಕಳಿಸಿದ. ಸೇನಾನಿಗಳು ಪಾವಾಡೆಪ್ಪನ್ನು ಬಂಧಿಸಿದರು. ಮುಂದೆ ನವಾಬನ ಸೈನ್ಯಕ್ಕೂ ಪಾವಡೆಪ್ಪನ ಸೈನ್ಯಕ್ಕೂ ಹೋರಾಟವಾಗಿ ನವಾಬನ ಬಹುಸಂಖ್ಯೆಯ ಸೈನಿಕರು ಹತರಾದರು ಪಾವಡೆಪ್ಪ ರಾಮಾಜಿಯ ಕುಕೃತ್ಯಕ್ಕೆ ಸಿಟ್ಟಿಗೆದ್ದು ರಾಮಾಜಿಯನ್ನು ಸ್ವಾಮಿದ್ರೋಹಿ ಎಂದು ಘೋಷಿಸಿದ. ಕೊನೆಗೆ ಆತನ ನಾಲಿಗೆಯನ್ನು ಕತ್ತರಿಸಬೇಕು ಎಂಬ ತೀರ್ಮಾನದಂತೆ ಕಾರ್ಯ ಜರುಗಿಸಿದ. ಇತ್ತ ಈ ಅಂಗಹೀನತೆಯಿಂದ ಜೀವನವೇ ವ್ಯರ್ಥವೆಂದು ಅರಿತ ರಾಮಾಜಿ ತನ್ನ ನಾಲಿಗೆಯನ್ನು ಬುಡಸಹಿತ ಕತ್ತರಿಸಿಕೊಂಡು ಅಸುನೀಗಿದ.

ಈ ಕ್ರೂರವರ್ತನೆಯಿಂದ ಮನ ನೊಂದ ಪಾವಡೆಪ್ಪ ಊಟ ನಿದ್ರೆಯನ್ನೇ ತೊರೆದು ಪಾಪ ಪರಿಹಾರಾರ್ಥವಾಗಿ ಗೋಕರ್ಣ ಸಂದರ್ಶನ ಮಾಡಲು ಹೊರಟ. ಅನಂತಪುರದಿಂದ ತುಸು ದೂರದಲ್ಲಿ ಪೆದ್ದಂಪಳೆಯೆಂಬಲ್ಲಿ ತನ್ನ ಕುತ್ತಿಗೆಯನ್ನು ತಾನೇ ಹಿಸಿಕಿಕೊಂಡು ಪ್ರಾಣತ್ಯಾಗ ಮಾಡಿದ. ಕ್ರಿ.ಶ. ೧೭೩೦ರಲ್ಲಿ ಮರಣ ಹೊಂದಿದ. ಈತನಿಗೆ ಅನಂತಸಾಗರದ ಹೊಸ ಟ್ಯಾಂಕಿನ ಪಶ್ಚಿಮಕ್ಕಿರುವ ನಿಡುಮಾಮಿಡಿ ಸ್ವಾಮಿಯ ಮಠದ ಕೊತ್ತಚೆರುವು ಎಂಬಲ್ಲಿ ಅಂತ್ಯಕ್ರಿಯೆ ಜರುಗಿಸಿ ಸಮಾಧಿ ಮಾಡಲಾಯಿತು.

೧೭. ಚಿಕ್ಕಮಲ್ಕಪ್ಪನಾಯಕ: ಹೀರೆರಾಮಪ್ಪನಾಯಕನ ಮಗನಾದ ಚಿಕ್ಕಮಲ್ಕಪ್ಪನಾಯಕನು ಆಳ್ವಿಕೆಯ ಸಂದರ್ಭವು ಕ್ರಿ.ಶ. ೧೬೯೩ರಿಂದ ಕ್ರಿ.ಶ. ೧೬೯೩ರವರೆಗೆ ಸುಮಾರು ೬೦ ವರ್ಷಗಳ ಕಾಲ ಮೊಗಲಾಯಿ ಆಳ್ವಿಕೆಗೆ ಒಳಗಾಗುತ್ತದೆ. ಇದರಿಂದ ಚಿಕ್ಕಮಲ್ಕಪ್ಪನಾಯಕನಿಗೆ ಆಡಳಿತದಲ್ಲಿ ಏರುಪೇರು ಕಂಡಿದ್ದು ಕಾಣಬಹುದು. ಕ್ರಿ.ಶ. ೧೬೬೭ರ ಹಂದರಹಾಳು ಶಾಸನವು ಹಂಡೆ ಚಿಕ್ಕಮಲ್ಲಪ್ಪ ನಾಯಕನನ್ನು ಉಲ್ಲೇಖಿಸಿದ್ದು ಈತನು ಹಂದರಹಾಳು ಗ್ರಾಮವನ್ನು ಶಿವಬಸಪ್ಪ ಎಂಬುವನಿಗೆ ದಾನ ನೀಡಿದ ವಿವರ ತಿಳಿದುಬರುತ್ತದೆ. ಈ ಶಾಸನದ ಆಧಾರದ ಮೇಲೆ ಕ್ರಿ.ಶ. ೧೬೬೭ರಲ್ಲಿ ಚಿಕ್ಕಮಲ್ಲಪ್ಪನಾಯಕ ಆಳ್ವಿಕೆ ನಡೆಸುತ್ತಿದ್ದ ಎಂದು ಭಾವಿಸಬಹುದಾಗಿದೆ.

* ಕುರುಗೋಡು ಕೈಫಿಯತ್ತಿನಲ್ಲಿ ಬಂದಿರುವ ಚಿಕ್ಕಮಲಕಪ್ಪ ನಾಯಕನ ಮುಂದಿನ ವಂಶಾವಳಿ ಬಳ್ಳಾರಿ ಕೈಫಿಯತ್ತಿನಲ್ಲಿ ಹಿರಿಯಮಲುಕಪ್ಪ ನಾಯಕನ ವಂಶಾವಳಿಗೆ ಬಂದಿದೆ.

* ಕುರುಗೋಡು ಕೈಫಿಯತ್ತಿನ ಕೊನೆಯಲ್ಲಿ ಬರುವ ವಂಶಾವಳಿ ಪಟ್ಟಿಯಲ್ಲಿ ಸಿದ್ಧಮ್ಮ, ಪದ್ಮಮ್ಮ, ನೀಲಮ್ಮ ಮುಂತಾದವರ ಹೆಸರುಗಳಿಲ್ಲ, ಕೈಫಿಯತ್ತುಗಳ ಆಧಾರದಿಂದ ಅವರ ಹೆಸರುಗಳನ್ನು ಇಲ್ಲಿ ಸೇರಿಸಲಾಗಿದೆ.

* ಕುರುಗೋಡು ಕೈಫಿಯತ್ತಿನಲ್ಲಿ ಹಿರಿಯ ಮಲಕಪ್ಪನಾಯಕನ ಮಕ್ಕಳ ಬಗ್ಗೆ ತಿಳಿದುಬರುವುದಿಲ್ಲ. ಆದರೆ ಬಳ್ಳಾರಿ ಕೈಫಿಯತ್ತನ್ನು ಗಮನಿಸಿದಾಗ ಹಿರಿಯ ಮಲಕಪ್ಪನಾಯಕನ ಸಂತತಿ ಮೇಲಿನಂತೆ ಇರುವುದು ತಿಳಿದುಬರುತ್ತದೆ. ಇಲ್ಲಿ ಚಿಕ್ಕ ಮಲಕಪ್ಪನಾಯಕನ ಸಂತತಿಯೇ ಹಿರೆಮಲಕಪ್ಪನಾಯಕನ ಸಂತತಿ ಎಂದು ಹೇಳಿರುವುದನ್ನು ಗಮನಿಸಬಹುದು.
* ಬಳ್ಳಾರಿ ಕೈಫಿಯತ್ತಿನಲ್ಲಿ ಬರುವ ಹಿರಿಯಮಲಕಪ್ಪನಾಯಕ, ಅವನ ಮಗ ಸಿದ್ಧಪ್ಪ ನಾಯಕ, ಅವನ ಮಗ ಹಿರೇರಾಮಪ್ಪ ನಾಯಕ, ಇಲ್ಲಿಯವರೆಗಿನ ವಂಶಾವಳಿ ಕುರುಗೋಡು ಕೈಫಿಯತ್ತಿನಲ್ಲಿ ಬಂದಿರುವುದಿಲ್ಲ.

ಒಟ್ಟಾರೆಯಾಗಿ ಹಂಡೆ ಅರಸರು ಸಮರ್ಥರಾಗಿ ಕರ್ನಾಟಕ ಹಾಗೂ ಆಂಧ್ರದ ಗಡಿಭಾಗಗಳಲ್ಲಿ ಆಳ್ವಿಕೆ ನಡೆಸಿ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದವರು. ಬಿಜಾಪುರದ ಆದಿಲ್ ಶಾಹಿಯಿಂದ ಹಿಡಿದು ವಿಜಯನಗರ ಕಾಲದವರೆಗೂ ಅನೇಕ ಪ್ರದೇಶಗಳಲ್ಲಿ ತಮ್ಮ ಅಸ್ತಿತ್ವವನ್ನು ಕಂಡುಕೊಂಡವರು. ಈ ಅರಸರು ಪ್ರಮುಖವಾಗಿ ದಾನ-ದಾಸೋಹ, ಧಾರ್ಮಿಕ ಕಾರ್ಯಗಳು, ಹೆಚ್ಚಾಗಿ ಸಾಮಾಜಿಕ ಕಾರ್ಯಗಳನ್ನು ಕೈಗೊಂಡು ಜನಕಲ್ಯಾಣಕ್ಕಾಗಿ ತಮ್ಮ ಸೇವೆಯು ಆದ್ಯಕರ್ತವ್ಯವೆಂದು ತಿಳಿದುಕೊಂಡಿದ್ದವರು. ಹಾಗೆಯೇ ಸಾಂಸ್ಕೃತಿಕ ಜೀವನದಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಹಂಡೆ ಅರಸರು ಸಾಹಸಿಗರು, ಶೂರರು, ರಣಕಲಿಗಳು ಆಗಿದ್ದು, ತಮ್ಮ ಶೌರ್ಯ ಸಾಹಸಗಳಿಂದ ಕರ್ನಾಟಕದ ರಾಜಕೀಯದಲ್ಲಿ ಯಶಸ್ವಿಯಾಗಿ ಆಡಳಿತವನ್ನು ನಿರ್ವಹಿಸಿದವರು ಹಂಡೆ ಅರಸರು. ವಿಜಯಯನಗರ ಪತನದ ನಂತರ ಪ್ರಮುಖ ಅರಸರು ಸಂಸ್ಕೃತಿ ಮತ್ತು ಪರಂಪರೆಯನ್ನು ರಕ್ಷಿಸಿ ಕಾಪಾಡಿಕೊಂಡು ಬಂದಿದ್ದಾರೆ. ಈ ಹಿನ್ನೆಲೆಯಲ್ಲಿ ಆಡಳಿತ ವ್ಯವಸ್ಥೆಯು ವಿಜಯನಗರೋತ್ತರ ಕಾಲದಲ್ಲಿ ಸ್ವತಂತ್ರವಾಗಿ ಆಡಳಿತವನ್ನು ನಿರ್ವಹಿಸಿದ ಕೀರ್ತಿ ಹಂಡೆ ಅರಸುಮನೆತನಕ್ಕೆ ಸಲ್ಲುತ್ತದೆ.

### ೫.೨. ಧಾರ್ಮಿಕ ವ್ಯವಸ್ಥೆ

ಪ್ರಾಚೀನ ಕಾಲದಲ್ಲಿ ಕರ್ನಾಟಕವು ವೈದಿಕ ಸಂಸ್ಕೃತಿಗೆ ಒಳಗಾಗಿತ್ತು. ಇದರಿಂದ ಜಾತಿಗಳು ಹುಟ್ಟಿಕೊಂಡು ಶೋಷಣೆಗೆ ಒಳಗಾಗಲು ಬೌದ್ಧ, ಜೈನ, ಧರ್ಮಗಳು ಉದಯಿಸಿದವು. ಹನ್ನೆರಡನೆಯ ಶತಮಾನದ ಮಧ್ಯಭಾಗದ ಹೊತ್ತಿಗೆ ರಾಜಾಶ್ರಯವನ್ನು ಕಳೆದುಕೊಂಡಿದ್ದ ಜೈನಧರ್ಮವು ಸ್ವಲ್ಪಮಟ್ಟಿಗೆ ಕ್ಷೀಣಿಸಿದ್ದು ಕಂಡುಬರುತ್ತದೆ. ಜೈನರಲ್ಲಿ ಕೆಲವರು ಪರಮತವನ್ನು ಸ್ವೀಕರಿಸಿದರು. ಈ ಮತವೇ ವೀರಶೈವ ಮತ.[೬] ಈ ಕಾಲಘಟ್ಟದಲ್ಲಿ ಕರ್ನಾಟಕದಲ್ಲಿ ಶೈವ ಇತಿಹಾಸದಲ್ಲಿ ಕಾಪಾಲಿಕರ ಸಂಖ್ಯೆ ಕಡಿಮೆಯಿದ್ದು, ಕಾಳಾಮುಖ, ಪಾಶುಪತರ ಸಂಖ್ಯೆ

ಸಾಕಷ್ಟಿದ್ದು, ವೀರಶೈವರ ಪ್ರಭಾವ ಹೆಚ್ಚಾಗಿತ್ತು. ಕಾಳಾಮುಖ ಮತ್ತು ಪಾಶುಪತರು ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡರು. ಬಳ್ಳಾರಿ, ಕುರುಗೋಡು, ಸಿಂದಗೆರೆ, ಗುಡೆಕೋಟೆ ಮುತಾಂದ ಕಡೆ ಕಾಳಾಮುಖ ದೇವಸ್ಥಾನಗಳು ನಿರ್ಮಿಸಿದ್ದರು. ಈ ದೇವಸ್ಥಾನಗಳಿಗೆ ನೈವೇದ್ಯ, ನಂದಾದೀಪ, ದೇವರ ಅಂಗಭೋಗ-ರಂಗಭೋಗ, ಜೀರ್ಣೋದ್ಧಾರ ಮತ್ತು ಅಗ್ರಹಾರಗಳಿಗೆ ಅನೇಕ ಪಾಳೇಗಾರರು ಮತ್ತು ಅರಸರು ದಾನದತ್ತಿಗಳನ್ನು ನೀಡಿರುವ ವಿವರಗಳು ಶಾಸನಗಳಲ್ಲಿ ಕಂಡುಬರುತ್ತದೆ.

ಬಳ್ಳಾರಿ ಹಂಡೆ ಅರಸರು ವೀರಶೈವ ಮತವನ್ನು ಹೆಚ್ಚಾಗಿ ಅನುಸರಿಸುತ್ತಿದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ. ಆದರೆ ಅವರು ಮೊದಲಿನಿಂದಲೂ ವೀರಶೈವರೋ ಅಥವಾ ಮಧ್ಯದಲ್ಲಿ ವೀರಶೈವ ಮತವನ್ನು ಸ್ವೀಕರಿಸಿದರೋ ಸರಿಯಾಗಿ ತಿಳಿದಿಲ್ಲ. ಅವರ ರಾಜಗುರುಗಳ ಅಥವಾ ಧರ್ಮಗುರುಗಳ ಹೆಸರುಗಳನ್ನು ಯಾವ ಕೈಫಿಯತ್ತುಗಳಲ್ಲೂ ಉಲ್ಲೇಖಿಸಿಲ್ಲ. ಆದರೆ ಶಾಸನಗಳನ್ನು ನೋಡಿದಾಗ ಅವರು ಶರಣರ ಪ್ರಭಾವ ಮತ್ತು ಮಠ-ಮಾನ್ಯಗಳ ಸಂಪರ್ಕದಿಂದಾಗಿ ಮುಂದೆ ಈ ಪರಂಪರೆಯನ್ನು ಅನುಸರಿಸಬೇಕೆನಿಸುತ್ತದೆ. ವಚನ ಸಾಹಿತ್ಯ ಕ್ರಾಂತಿಯ ನಂತರ ಅನೇಕ ಪಲ್ಲಟಗಳಾಗಿರುವುದು ಕಾಣಬಹುದು. ೧೫-೧೬ನೇ ಶತಮಾನದ ವೇಳೆಗೆ ಅನೇಕ ಅರಸರು ಮತ್ತು ಪಾಳೇಗಾರರು ಬೆಳಕಿಗೆ ಬರುತ್ತಾರೆ. ಹಂಡೆ ಅರಸರು ಶರಣರ ಕಲ್ಪನೆಯ ಪಲ್ಲಟವಾಗಿ ದಾನದ ಪರಿಕಲ್ಪನೆಯು ಹೆಚ್ಚಾಗಿ ಕಾಣುತ್ತದೆ. ದಾನ-ದತ್ತಿಯು ದೇವಾಲಯಗಳ ನಿರ್ಮಾಣ ಅವುಗಳ ಜೀರ್ಣೋದ್ಧಾರ ಕಾರ್ಯಗಳ ಮೂಲಕ ಧಾರ್ಮಿಕ ಕ್ಷೇತ್ರಕ್ಕೆ ಅಮೋಘವಾದ ಕೊಡುಗೆಗಳನ್ನು ಕೊಟ್ಟವರು. ಹೀಗೆ ಹಂಡೆ ಅರಸರ ಪ್ರಮುಖ ನಾಯಕಿಯಾದ ಹಂಡೆ ನೀಲಮ್ಮ ರಾಮಪ್ಪನಾಯಕಿಯು ವುಳೇನೂರು ವಿರಕ್ತಮಠದಲ್ಲಿ ಬಳ್ಳಾರಿಯ ಮರಿ ಮಹಾಂತಸ್ವಾಮಿಗಳಿಗೆ ದಾಸೋಹ ನಡೆಸಲು ವುಳೇನೂರು ಗ್ರಾಮವನ್ನು ದಾನವಾಗಿ ಕೊಡುತ್ತಾಳೆ. ಇಂತಹ ಹಲವು ಉದಾಹರಣೆಗಳಿಂದ ಹಂಡೆ ಅರಸರ ಧಾರ್ಮಿಕ ಕಾರ್ಯಗಳ ಮಹೋನ್ನತಿ ಪಡೆದಿರುವುದನ್ನು ಕಾಣಬಹುದು. ಹಂಡೆ ಅರಸರು ಧಾರ್ಮಿಕ ಸಹಿಷ್ಣುತೆಯಿಂದ ಎಲ್ಲ ವರ್ಗದ ಜನರನ್ನು ಪ್ರೀತಿಯಿಂದ ಕಂಡವರು. ಇವರ ಮಠ ಮಾನ್ಯಗಳ ಸೇವೆಯು ಅನುಪಮ ವಾದದ್ದು. ಹಂಡೆ ಅರಸರು ಸರ್ವಧರ್ಮಗಳನ್ನು ಸಮನಾಗಿ ಕಂಡು ಪ್ರೋತ್ಸಾಹ ಕೊಡುತ್ತಿದ್ದರು. ಧರ್ಮಗಳ ಬಗ್ಗೆ ಅವರಲ್ಲಿ ಯಾವ ಪಕ್ಷಪಾತವೂ ಇರಲಿಲ್ಲ. ಆದ್ದರಿಂದ ಅವರ ಆಡಳಿತದಲ್ಲಿ ಜನರು ಬೇರೆ ಬೇರೆ ಧರ್ಮಗಳನ್ನು ನಿರ್ಭೀತಿಯಿಂದ ಅನುಸರಿಸುತ್ತಿದ್ದರು. ಅದರಂತೆ ಒಂದೊಂದು ಕಾಲದಲ್ಲಿ ಒಂದೊಂದು ಧರ್ಮವು ಏಳಿಗೆಗೆ ಬಂದಿರುವುದನ್ನು ಗಮನಿಸಬಹುದು. ಒಟ್ಟಾರೆಯಾಗಿ ಹಂಡೆ ಅರಸರ ಧಾರ್ಮಿಕ ಪರಂಪರೆಯನ್ನು ಕಾಪಾಡಿಕೊಂಡು ಬಂದವರು. ೧೫ನೇ

ಶತಮಾನದಿಂದ ೧೮ನೇ ಶತಮಾನದ ಕಾಲದವರೆಗೆ ಜನಸಾಮಾನ್ಯರಿಗೆ ಪುಣ್ಯದ ಕೆಲಸವೆಂದು ಅನೇಕ ದೇವಸ್ಥಾನಗಳನ್ನು, ಮಠಗಳನ್ನು, ಕೆರೆಕಟ್ಟೆಗಳನ್ನು ಕಟ್ಟಿಸಿ ಅವುಗಳ ಚಾಲನೆಗಾಗಿ ದಾನ-ದತ್ತಿಗಳನ್ನು ಬಿಟ್ಟಿದ್ದಾರೆ. ಇವೆಲ್ಲ ಹಂಡೆ ಅರಸರ ಸಾಂಸ್ಕೃತಿಕ ಅನನ್ಯತೆಯ ಪ್ರತೀಕವಾಗಿವೆ.

**ದಾನ-ದತ್ತಿ ಪತ್ರಗಳು**

ವ್ಯಕ್ತಿಯ ಜೀವನಮೌಲ್ಯಗಳಲ್ಲಿ ದಾನವು ಪ್ರಮುಖವಾದುದು. ದಾನ ಎಂದರೆ ಒಬ್ಬ ವ್ಯಕ್ತಿಯು ಇನ್ನೊಬ್ಬ ವ್ಯಕ್ತಿಗೆ ಅಥವಾ ಒಂದು ಸಮೂಹ, ಪುರ, ಒಂದು ಆಡಳಿತಕ್ಕೆ ನೀಡಿದ ಕೊಡುಗೆಯಾಗುತ್ತದೆ. ಇಲ್ಲಿ ಕೊಡುವವನಿಗೂ ಹಾಗೂ ಅದನ್ನು ಪಡೆದುಕೊಂಡವನಿಗೂ ತೃಪ್ತಿ ಭಾವ ಉಂಟಾಗುತ್ತದೆ. ಆದರೆ ಧರ್ಮಕಾರ್ಯವು ಇದೆಲ್ಲಕ್ಕಿಂತ ಮಿಗಿಲಾದದ್ದು. ಕೇವಲ ಒಬ್ಬ ವ್ಯಕ್ತಿ, ಒಂದು ಸಮುದಾಯ, ಒಂದು ಆಡಳಿತಾತ್ಮಕ ವಿಭಾಗಕ್ಕೆ ಮಾತ್ರ ಸೀಮಿತಗೊಳ್ಳದೇ ಕಾಲಕಾಲಕ್ಕೂ ನೀಡಿದ ದಾನವು ಉಪಯೋಗವಾಗಬೇಕೆಂಬುದು ಅಂದಾಗ ಮಾತ್ರ ಅದು ಧರ್ಮಕಾರ್ಯವಾಗುತ್ತದೆ. ಇವುಗಳಿಗೆ ಪುಷ್ಟಿ ನೀಡುವಂತೆ ದಾನಶಾಸನಗಳು ನಮ್ಮ ನಾಡಿನ ಸಂಸ್ಕೃತಿಯ ಪ್ರಧಾನವಾದ ಅಂಶವನ್ನು ಎತ್ತಿ ತೋರಿಸುತ್ತವಲ್ಲದೆ ನಾಡಿನ ಜನರು ದಾನಕ್ಕೆ ಪ್ರಥಮ ಸ್ಥಾನವನ್ನಿತ್ತ ಧಾರ್ಮಿಕ ಸಂಸ್ಕೃತಿಯ ಸ್ವರೂಪವನ್ನು ಕೂಡ ಪ್ರತಿಬಿಂಬಿಸುತ್ತವೆ. ಇದಕ್ಕೆ ಕಾರಣ ಎಂಬಂತೆ ಶಾಸನಗಳಲ್ಲಿ ನಮಗೆ ಅತಿ ಹೆಚ್ಚು ಸಂಖ್ಯೆಯಲ್ಲಿ ದಾನಶಾಸನಗಳು ಕಾಣಿಸುತ್ತವೆ. ದೇವಾಲಯಗಳನ್ನು ಕಟ್ಟಿಸುವುದಲ್ಲದೆ, ದಾನ-ದಾಸೋಹದಂತಹ ಧರ್ಮಕಾರ್ಯ ಗಳಿಗಾಗಿ ದಾನದತ್ತಿಗಳನ್ನು ಕೊಡುವುದು ರಾಜಾಧಿರಾಜರ ಕಾಲದಿಂದಲೂ ಬಂದಿದೆ. ಹತ್ತನೆಯ ಶತಮಾನದಿಂದ ಈಚೆಗೆ ದಾನಶಾಸನದ ಪ್ರಾರಂಭದ ಬೆಳವಣಿಗೆ ಮತ್ತು ಮುಕ್ತಾಯಗಳಲ್ಲಿ ಒಂದು ವ್ಯವಸ್ಥಿತ ಕ್ರಮ ಗೋಚರವಾಗುತ್ತದೆ. ದಾನವನ್ನು ನೀಡುವವನು ಚಕ್ರವರ್ತಿಯಾಗಿರದೆ ಬೇರೆಯವರಾಗಿದ್ದರೆ ಆ ವ್ಯಕ್ತಿಯ ಮತ್ತು ಅವನ ವಂಶದ ವರ್ಣನೆ ಬರುತ್ತದೆ. ನಂತರ ಶಾಸನದ ಕಾಲವನ್ನು ಶಕೆ, ವರುಷ, ತಿಂಗಳು, ದಿನಗಳು ಹೇಳುವಂತೆ ನಿಖರವಾದ ರೀತಿಯಲ್ಲಿ ಕೊಡಲಾಗಿರುತ್ತದೆ. ನಂತರದಲ್ಲಿ ದಾನವನ್ನು ನಿರ್ದೇಶಿಸುವ ಭಾಗ ಬರುತ್ತದೆ. ಹೀಗೆ ದಾನ ಶಾಸನಗಳಲ್ಲಿ ದಾನದ ಹಲವಾರು ಬಗೆಗಳನ್ನು ಕಾಣಬಹುದು. ದಾನವನ್ನು ಕೊಡುವುದು ಯಾರಿಗೆ? ದೇವಾಲಯಕ್ಕೋ, ಮಠಕ್ಕೋ ಅಥವಾ ವ್ಯಕ್ತಿಗೋ ಹಾಗೂ ದಾನವನ್ನು ಯಾವ ಕಾರಣಕ್ಕಾಗಿ ಕೊಡಲಾಗಿದೆ? ಪೂಜಾದಿ ಕಾರ್ಯಗಳಿಗೋ, ಅನ್ನಸಂತರ್ಪಣೆಗೋ ಅಥವಾ ವಿದ್ಯಾದಾನಕ್ಕೋ ಎಂಬ ಅಂಶಗಳ ವಿವರಣೆ ಬರುತ್ತದೆ. ಕೊಡುವ ದಾನ ಯಾವುದೇ ಆಗಿರಲಿ, ಯಾವುದಕ್ಕೇ ಆಗಿರಲಿ ಅಷ್ಟಭೋಗ ತೇಜಸ್ವಾಮ್ಯದಿಂದ ಅನುಭವಿಸಬೇಕೆಂಬ ಹೇಳಿಕೆಯೂ ಇದೆ. ಕೊಡುವ ದಾನವನ್ನು ಕಾಲಂಕರ್ಚಿ ವಿನಯದಿಂದ ಗೌರವಪೂರ್ವಕವಾಗಿ ಕೊಡುತ್ತಿದ್ದರು

ಎಂಬ ವಿಷಯವೂ ಕೂಡ ಶಾಸನಗಳಿಂದಲೇ ತಿಳಿದುಬರುತ್ತದೆ. ಶಾಸನಗಳಲ್ಲಿ ಕಂಡುಬರುವ ಪ್ರಮುಖವಾದ ಅಂಶವೇನೆಂದರೆ ಒಬ್ಬ ವ್ಯಕ್ತಿಯು ತನ್ನ ವಿಶ್ವಾಸಕ್ಕಾಗಿಯೋ, ಗೌರವಕ್ಕಾಗಿಯೋ, ಭೂಮಿಯ ರೂಪದಲ್ಲಿಯೇ ಆಗಲಿ ದಾನ ಮಾಡಲು ಬಯಸುತ್ತಾನೆ. ಅಂದರೆ ಬಲಗೈಲಿ ಕೊಟ್ಟದ್ದು ಎಡಗೈಗೆ ತಿಳಿಯಬಾರದೆಂಬುದು ಅತಿ ಉದಾತ್ತವಾದ ದೃಷ್ಟಿಯಾದರೂ ಕೊಟ್ಟ ದಾನವು ಸೂರ್ಯ-ಚಂದ್ರರಿರುವರೆಗೂ ಉಳಿಯಬೇಕೆಂಬ ಆಸೆಯ ದೃಷ್ಟಿಯಿಂದ ಶಾಸನವನ್ನು ಹಾಕಿಸುತ್ತಾರೆ.

ಹಂಡೆ ಅರಸುಮನೆತನದ ಧಾರ್ಮಿಕ ಕಾರ್ಯಗಳಲ್ಲಿ ದಾನ-ದಾಸೋಹ ಪರಿಕಲ್ಪನೆ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ತಮ್ಮ ಹಿರಿಯರಿಗೆ ಸುಕೃತವಾಗಲೆಂದು ದಾನವನ್ನು ನೀಡುವ ಪರಿಯನ್ನು ಈ ಮನೆತನದವರು ಮಾಡುತ್ತಿದ್ದರು. ಮೊದಲಿಗೆ ವೈದಿಕ ಪರಂಪರೆಯಲ್ಲಿ ಅಗ್ರಹಾರಗಳು ಕಂಡುಬರುತ್ತಿದ್ದವು. ಮುಂದೆ ಹನ್ನೆರಡನೇ ಶತಮಾನದ ವಚನ ಚಳುವಳಿ ಸಂದರ್ಭದಲ್ಲಿ ದಾಸೋಹ ಪರಿಕಲ್ಪನೆಯನ್ನು ಬಸವಣ್ಣನ ಕಾಯಕದ ಮೂಲಕ ಅನುಷ್ಠಾನ ಗೊಳಿಸಿದರು. ಮುಂದೆ ೧೪-೧೫ನೇ ಶತಮಾನದಲ್ಲಿ ಕರ್ನಾಟಕವನ್ನಾಳಿದ ರಾಜಮನೆತನಗಳೆಲ್ಲವು ತಮ್ಮ ನಾಡಿನ ಏಳ್ಗೆಗಾಗಿ, ತಮ್ಮ ನಾಡಿನ ಜನರ ಅಭ್ಯುದಯಕ್ಕಾಗಿ ಹಾಗೂ ತಮ್ಮ ವೈಯಕಿಕ್ತ ಪರಿಚಯಕ್ಕಾಗಿ, ಹಲವಾರು ದೇವಾಲಯಗಳ ಜೀರ್ಣೋದ್ಧಾರಕ್ಕಾಗಿ, ನೀಡಿದ ದಾನದ ನೆನಪಿಗೋಸ್ಕರ ಈ ನಾಡಿನಾದ್ಯಂತ ದಾನ ಶಾಸನಗಳನ್ನು ಹಾಕಿಸಿದ್ದಾರೆ. ಈ ಪರಂಪರೆಯನ್ನು ಮಠ-ಮಾನ್ಯಗಳ ಮೂಲಕ ಪ್ರಚುರಪಡಿಸಲಾಯಿತು. ಹಂಡೆ ಅರಸುಮನೆತನದವರು ದಾಸೋಹದ ಮೂಲಕ ಜನಸಾಮಾನ್ಯರಿಗೆ, ಗುರುಗಳ ಅನುಗ್ರಹದಿಂದ ಅವರ ಆಶೀರ್ವಾದದ ಹಿನ್ನೆಲೆಯಲ್ಲಿ ದಾನ ಕೊಡುವ ಪದ್ಧತಿಯನ್ನು ಕಂಡುಕೊಂಡಿದ್ದರು. ಈ ಹಿನ್ನೆಲೆಯಲ್ಲಿ ಹಂಡೆ ಅರಸರ ದಾನದತ್ತಿ ನೀಡಿದ ವಿವರವನ್ನು ಈ ಕೆಳಕಂಡಂತೆ ನೋಡಬಹುದು.

ಪ್ರಾಚೀನ ಕಾಲದಲ್ಲಿ ಬಸದಿ, ಮಠ, ದೇವಾಲಯಗಳಿಗೆ ಧರ್ಮದ ಹಿನ್ನೆಲೆ ದಾನ ಕೊಡುವ ಪದ್ಧತಿಯು ರೂಢಿಯಲ್ಲಿತ್ತು. ಹೀಗಾಗಿ ಕಾಯಕದಲ್ಲಿ ನಿರತರಾಗಿದ್ದ ಹಂಡೆ ಅರಸರು ದಾನದ ಗುಣಗಳಿಗೆ ಹೆಸರುವಾಸಿಯಾದವರು. ಶಾ.ಶ. ೧೬೪೭ರಲ್ಲಿ ಎಮ್ಮಿಗನೂರು ವಿರಕ್ತಮಠಕ್ಕೆ, ಅವಿರಳ ಪರಂಜ್ಯೋತಿ ಸ್ವರೂಪಿಗಳಾದ ರಾಜ್ಯಮಾನ್ಯರಾಜೆ ಶ್ರೀ ಕೊಟ್ಟೂರು ಸ್ವಾಮಿಗಳಿಗೆ ದೇವರ ವರಪ್ರಸನ್ನರಾದ ಹಂಡೆ ಹಿರೇ ರಾಮಪ್ಪ ನಾಯಕನು ಭೂದಾನ ನೀಡಿದ ವಿವರಗಳು ಕಂಡುಬರುತ್ತದೆ.[೭] ಅರಸನು ತಮ್ಮ ಹಿರಿಯರಿಗೆ ಪುಣ್ಯವಾಗಲೆಂದು ಧಾರೆಯರೆದು ಕೊಟ್ಟಿದ್ದಾರೆ.

ಶಾಲಿವಾಹನ ಶಕ ೧೬೪೮ರಲ್ಲಿ ಬಳ್ಳಾರಿಯ ಅಮ್ಮವ್ವನ(ಈಗಿನ ಕೊಟ್ಟೂರು ಸ್ವಾಮಿ ಮಠ)ಮಠದಲ್ಲಿ ಅನ್ನ ದಾಸೋಹ ನಡೆಯಬೇಕೆಂದು ಬಳ್ಳಾರಿಯ ಸುತ್ತ ಮುತ್ತಲಿನ ಕೆಲವೊಂದು

ಗ್ರಾಮಗಳಲ್ಲಿನ ಭೂಮಿಯನ್ನು ದಾನದತ್ತಿಯಾಗಿ ನೀಡಿದ್ದಾನೆ. ಈತನು ಪರಾಭವನಾಮ ಸಂವತ್ಸರದ ಮಾಘ ಶುಕ್ಲ ೧೦ರಲ್ಲಿ ಶ್ರೀಮತ್ಸಚ್ಚಿದಾನಂದ ನಿತ್ಯ ಪರಿಪೂರ್ಣ ಅವಿರಳ ಪರಂ ಜ್ಯೋತಿ ಸ್ವರೂಪಿಗಳಾದ ರಾಜಮಾನ್ಯ ರಾಜಶ್ರೀ ಕೊಟ್ಟೂರುಸ್ವಾಮಿಗಳ ಕೃಪೆ ಆಶೀರ್ವಾದದೊಂದಿಗೆ ಧರ್ಮದಾನ ಪತ್ರವನ್ನು ನೀಡಿದರು.[೮] ತಮ್ಮ ಹಿರಿಯರಿಗೆ ಸುಕೃತವಾಗಲೆಂದು ಈ ದಾನ ನೀಡಿದ ವಿವರಗಳು ಕಂಡುಬರುತ್ತವೆ. ಈ ಹಿನ್ನೆಲೆಯಲ್ಲಿ ಪೂಜಾದಿ ಕಾರ್ಯಗಳಿಗೂ ಗುರುಗಳ ಸಾನ್ನಿಧ್ಯವನ್ನು ಬಯಸಿ ಈ ಅರಸರು ದಾನದತ್ತಿ ನೀಡುವ ಪರಂಪರೆಯನ್ನು ಮೈಗೂಡಿಸಿಕೊಂಡರು. ವ್ಯಕ್ತಿಯ ಜೀವನ ಸಾರ್ಥಕತೆಯಲ್ಲಿ ದಾನವು ಪರಮಾನಂದವೆಂದು ಬಗೆದವರು.

ಶಾಲಿವಾಹನ ಶಕ ೧೬೪೪ನೆಯ ಪರಾಭವ ಸಂವತ್ಸರದ ಮಾಘ ಶಕ್ಲ ೧೦ರಲ್ಲಿ ಶ್ರೀ ಮತ್ಸಚ್ಚಿದಶಾನಂದ ನಿತ್ಯ ಪರಿಪೂರ್ಣರಾದ ಅವಿರಳ ಪರಂಜ್ಯೋತಿ ಸ್ವರೂಪಿಗಳಾದ ಶ್ರೀ ಮರಿಕೊಟ್ಟೂರು ಸ್ವಾಮಿಗಳವರಿಗೆ ಶ್ರೀ ಸಿದ್ಧರಾಮೇಶ್ವರ ದೇವರ ವರಪ್ರಸನ್ನರಾದ ರಾಜಶ್ರೀ ಹಂಡೆ ಹಿರೇ ರಾಮಪ್ಪನಾಯಕನು ಬಳ್ಳಾರಿ ವಿರಕ್ತಮಠದಲ್ಲಿ ದಾಸೋಹ ಮತ್ತು ಧರ್ಮ ಕಾರ್ಯಕ್ಕೆ ಶ್ರೀಶೈಲ ಪರ್ವತ ಪಾತಾಳಗಂಗೆಯಲ್ಲಿ ಸಂಕಲ್ಪ ಮಾಡಿ ಇದರ ಪ್ರಕಾರ ೭೫೦ ಬಳ್ಳಾರಿ ಮಾಗಾಣಿ ಪೈಕಿ ಸಂಗನಕಲ್ಲು ತೊಲಮಾಮಿಡಿ, ೨ ಚಾಗನೂರ ಮುಂತಾದ ದಾನ ಮತ್ತು ವರಹಗಳನ್ನು ವಿರಕ್ತಮಠಕ್ಕೆ, ಹೊಲಗಳು ಮತ್ತು ತೋಟ ಹಾಗೂ ನಾಣ್ಯಗಳನ್ನು ನೀಡಿದ ವಿವರಗಳು ಕಂಡುಬರುತ್ತವೆ.[೯] ದಾಸೋಹ ಧರ್ಮಕ್ಕೆ ಶಿವಾರ್ಪಣವಾಗಿ ಧಾರೆಯೇರೆದು ಕೊಟ್ಟದ್ದು, ಬಳ್ಳಾರಿ, ಕುರುಗೋಡು, ತೆಕ್ಕಲಕೋಟೆ, ಜಕಾತಿಯಲ್ಲಿ ಬಂದ ದಾನವನ್ನು ಮಠಕ್ಕೆ ನಿರಂತರವಾಗಿ ದಾಸೋಹ ಧರ್ಮದ ಕಾರ್ಯಗಳಿಗೆ ನಡೆಸಿಕೊಂಡು ಬಂದಿರುವುದು ಕಾಣುತ್ತದೆ. ಹೀಗಾಗಿ ಧರ್ಮಕಾರ್ಯಗಳಿಗಾಗಿ ದಾನದತ್ತಿಗಳನ್ನು ಕೊಡುವುದು ಮತ್ತು ಭೂಮಿಯನ್ನು ದಾನವಾಗಿ ನೀಡಿದ ವಿಷಯವು ಈ ಶಾಸನದ ಮೂಲಕ ತಿಳಿಯುತ್ತದೆ.

ಶಾಲಿವಾಹನ ಶಕ ೧೬೫೦ರಲ್ಲಿ ಹಂಡೆ ವಂಶದ ಪ್ರಸಿದ್ಧ ರಾಣಿಯಾದ ನೀಲಮ್ಮನವರು ತೋಂಟದ ಶಿದ್ಧ ಲಿಂಗಾಚಾರ್ಯ ಕೃಪಾ ಪ್ರಸನ್ನರಾದ ಸದ್ಗುರು ಬಳ್ಳಾರಿ ಶಿವಾನುಭವ ಚರಮೂರ್ತಿಗಳಾದಂಥ ಕಪ್ಪಿನ ಚನ್ನಬಸವ ಸ್ವಾಮಿಗಳವರ ಪಾದಪದ್ಮಂಗಳಿಗೆ ಸಮರ್ಪಿಸುತ್ತ ತ್ರಿಕಾಲದಲ್ಲಿ ಮಾಡುವ ದೀರ್ಘ ನಮಸ್ಕಾರಗಳು ಎಂದು ದಾನಪತ್ರದಲ್ಲಿ ಉಲ್ಲೇಖಗೊಂಡಿದೆ.[೧೦] ದಾನಪತ್ರದಲ್ಲಿ ಕೆಂಭಾವಿ, ಮುದ್ದನೂರು, ಭಕ್ತ-ಭಕ್ತಿಯೊಳಗೆ ಸುಕ್ಷೇತ್ರದಲ್ಲಿ ತಮ್ಮ ಸೇವೆಯೊಳಗೆ ಮಗ್ನನಾಗಿದ್ದಾನೆ. ದೇವರ ಕೃಪೆಯಿಂದ ಆದ ಮಠಗಳು ಶಿಂದಿಗೇರಿ, ಕುರುಗೋಡು, ಹಂಡೆ ಕೆಂಚನಗುಡ್ಡ, ಮುದ್ದಲಾಪುರ, ಕುಡಿತಿನಿ, ದರೋಜಿ ಹಾಗೂ ಹಾವಿನಮಡು ಮುಂತಾದ ಗ್ರಾಮಗಳನ್ನು ಮಠ-ಮಾನ್ಯಗಳ ಸೇವೆಗೆ ಅನುಕೂಲ ಮಾಡಲಾಗಿದೆ. ಮುಂದೆ ಕೆಂಭಾವಿ,

ಮುದ್ದಾನೂರು, ಚಿಕ್ಕಮುದ್ದಾನೂರು, ತಾಳಿಕೋಟೆ ಮುಂತಾದ ಗ್ರಾಮಗಳಲ್ಲಿ ಭಕ್ತರುಗಳು ಮಾಡಿಕೊಟ್ಟಿರುವಂತಹ ಮಠಗಳನ್ನು ಸ್ವೀಕರಿಸಕೊಳ್ಳಬೇಕಾಗಿ ವಿನಂತಿ. ಈ ಎಲ್ಲ ಮಠಗಳನ್ನು ನೀಲಮ್ಮಳು ಜನಕಲ್ಯಾಣಕ್ಕಾಗಿ ದಾನದತ್ತಿ ರೂಪದಲ್ಲಿ ತಮ್ಮ ಇಷ್ಟಾರ್ಥ ಪ್ರಾಪ್ತಿಗೋಸ್ಕರ ದಾನವಾಗಿ ನೀಡುತ್ತಿದ್ದರು. ಈ ದಾನಪತ್ರವು ವಿಜ್ಞಾಪನೆ ಅಥವಾ ಬಿನ್ನಹ ಪತ್ರದಂತೆ ಕಂಡರೂ ಸಾಂಸ್ಕೃತಿಕವಾದ ಕಾರ್ಯಗಳನ್ನು ದಾನ ಮಾಡುವುದರ ಮೂಲಕ ಕಂಡುಕೊಳ್ಳುತ್ತಿದ್ದರು. ಹೀಗಾಗಿ ಹಂಡೆ ಅರಸರು ಮಠ ಮತ್ತು ಗುರುಪರಂಪರೆ ಬಗ್ಗೆ ಇದ್ದ ಕಾಳಜಿಯು ತಲೆದೊರುತ್ತದೆ.

ಶಾಲಿವಾಹನ ಶಕ ವರುಷಂಗಳು ೧೬೫೫ ಪ್ರಮಾದೀಚ ಸಂವತ್ಸರ ಜೇಷ್ಠ ಶುಕ್ಲ ೨ರ ಶ್ರೀ ಮತ್ಸಚ್ಚಿದಾನಂದ ನಿತ್ಯ ಪರಿಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪಿಗಳಾದ ರಾಜ್ಯಮಾನ್ಯ ಶ್ರೀ ಮಹಾಂತ ಸ್ವಾಮಿಗಳವರಿಗೆ ಶ್ರೀ ಮನ್ಮಹಾರಾಜಾಧಿರಾಜ ಹಂಡೆಯ ಸವಂತ ಪರದಳ ವಿಭಾಡ ಅರಿರಾಯ ಮಾನಮರ್ದನ ಸದಾ ಶ್ರೀ ದೇವರ ವರಪ್ರಸನ್ನರಾದ ಹಂಡೆ ನೀಲಮ್ಮ ರಾಮಪ್ಪನಾಯಕರು ಬರಸಿಕೊಟ್ಟ ತೆಕ್ಕಲಕೋಟೆ ಮತ್ತು ವುಳೇನೂರು ವಿರಕ್ತಮಠದ ಭೂದಾನವನ್ನು ಶ್ರೀ ಮಠಗಳಿಗೆ ನಮ್ಮ ಹಿರಿಯರಿಗೆ ವಿಶೇಷ ಸುಕೃತವಾಗಲೆಂದು ವಿರಕ್ತಮಠಕ್ಕೆ ಸ್ವಾಸ್ತಿಯನ್ನು ರುಸುಮು ಸಹ ದಾಸೋಹ ಧರ್ಮಕ್ಕೆ ಶಿವಾರ್ಪಿತವಾಗಿ ಧಾರೆಯೆನೆರೆದು ಕೊಡಲಾಗಿದೆ. ನಿಮ್ಮ ಶಿಷ್ಯ ಪ್ರಶಿಷ್ಯ ಪಾರಂಪರ್ಯವಾಗಿ ಸೂರ್ಯ-ಚಂದ್ರ ಇರುವರೆಗೂ ನಿರಂತರವಾಗಿ ನಡೆಸಿಕೊಂಡು ಹೋಗಬೇಕೆಂದು ಬರೆಸಿಕೊಟ್ಟ ದಾನಪತ್ರವಾಗಿದೆ.[೧೧]

ದಾನಪತ್ರದಲ್ಲಿ ಪಾರ್ಷಿ ಶಬ್ದಗಳು ಅಥವಾ ಉರ್ದು ಶಬ್ದಗಳು ಬಳಕೆಯಾಗಿವೆ. ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಆಡಳಿತ ಭಾಷೆಯಾದ ಉರ್ದುವಿನ ಪ್ರಭಾವದಿಂದ ಬಳ್ಳಾರಿ ನಾಡಿನ ಶಾಸನ ಕಾಗದಪತ್ರದಲ್ಲಿ ಅನೇಕ ಉರ್ದು ಶಬ್ದಗಳು ಬಳಕೆಯಲ್ಲಿ ಬಂದಿವೆ. ಇದರಿಂದ ಕನ್ನಡಕ್ಕೆ ವ್ಯಾಪಕತೆಯನ್ನು ಹೆಚ್ಚಿಸಿರಬಹುದು. ರುಸುಮು, ಜಕಾತಿ, ಪರಗಣೆ, ಮಾಚೆ, ದೌಲತ್ತು, ಮುಕ್ತಾರ, ಇನಾಮುಗಳೆಂಬ ನೂರಾರು ಅರಬ್ಬಿ-ಪಾರ್ಸಿ ಪದಗಳು ಬಳಕೆಯಲ್ಲಿರುವುದು ಕಂಡುಬರುತ್ತದೆ. ಹೀಗಾಗಿ ಸುಲ್ತಾನ ಪ್ರಭಾವವು ಈ ಹಂಡೆ ಅರಸರ ಮೇಲೆ ಆಗಿರಬಹುದು.

ಶಾಲಿವಾಹನ ಶಕ ವರುಷಂಗಳು ೧೬೬೯ ಪ್ರಭವನಾಮ ಸಂವತ್ಸರಾದ ವೈಶಾಖ ಶುದ್ಧ ೧೦ರಲ್ಲಿ ಬಳ್ಳಾರಿ ಚರದಿ ಮರಿ ಮಹಾಂತಸ್ವಾಮಿಗಳವರ ಆಯಾಯ ಸಂಸ್ಥಾನದಲ್ಲಿರುವ ಮಠಮಾನ್ಯ ಜಾಗೀರ ಗ್ರಾಮಗಳನ್ನು ಸಿದ್ಧಲಿಂಗದೇವರ ಅನುಭವಿಕರು ಎಂದು ಹಂಡೆ ಹಿರೇ ರಾಮಪ್ಪನಾಯಕನು ಕೊಟ್ಟ ವಿವರಗಳು.[೧೨]

ಕುರುಗೋಡು ಗ್ರಾಮಕ್ಕೆ ಜಹಗೀರು ಗ್ರಾಮದ ವದ್ದಟ್ಟ ಸೋಮಸಮುದ್ರ ಮಧ್ಯದಲ್ಲಿರೊ ಮಲ್ಲಾಪುರ ಎಂಬ ಗ್ರಾಮವನ್ನು ದಾನವಾಗಿ ಕೊಟ್ಟದ್ದು, ಬಳ್ಳಾರಿ ದಾಸೋಹ ಮಠಕ್ಕೆ ಸಂಗನಕಲ್ಲು, ಚಾಗನೂರು ಎಂಬ ೨ ಜಹಗೀರ ಗ್ರಾಮಗಳನ್ನು ಹಂಡೆ ಹಿರೇ ದ್ಯಾಮಪ್ಪ ನಾಯಕ ಕೊಟ್ಟದ್ದು, ಅದಕ್ಕೆ ಅನುಭವಿಕರು ಕೊಟ್ಟೂರ ದೇವರು. ತೆಕ್ಕಲಕೋಟೆಯನ್ನು ಗೂಳೂರ ದೇವರ ಮಠಕ್ಕೆ ಉಮ್ಮಳಿ ಭೈರಾಪುರವೆಂಬ ಗ್ರಾಮವನ್ನು ಹಂಡೆ ಹಿರೇ ರಾಮಪ್ಪನಾಯಕರು ಕೊಟ್ಟದ್ದು ಇದರ ಅನುಭವಿಕರು ಚನ್ನಬಸವ ದೇವರು. ಹೀಗೆ ಗುರು ಭಕ್ತಿಯಿಂದ ಹಲವು ಊರುಗಳನ್ನು ಭೂಮಿಯಿಂದ ಬಂದ ಉತ್ಪತ್ತಿಯನ್ನು ನಿಗದಿ ಮಾಡಿ, ಆ ಉತ್ಪತ್ತಿಯನ್ನು ಮಠಗಳಿಗೆ ದಾಸೋಹ ನಡೆಸುತ್ತಿದ್ದುದು ಗೌರವಪೂರ್ವಕವಾಗಿ ಕಂಡುಬರುತ್ತದೆ.

ಸ್ವಸ್ತಿ ಜಯಾಭ್ಯುದಯ ಶಾಲಿವಾಹನ ಶಕವಷಂಗಳು ೧೬೭೦ನೆಯ ವಿಭವ ನಾಮ ಸಂವತ್ಸರದ ಕಾರ್ತಿಕ ಶುಕ್ಲ ೨ರ ಶ್ರೀ ಚನ್ನಬಸವದೇವರಿಗೆ ಶ್ರೀ ಮನ್ಮಹಾರಾಜಾಧಿರಾಜ ಖಂಡೆಯ ಸಾವಂತ ಪರದಳ ವಿಭಾಡ ಅರಿರಾಯ ಮಾನರ್ದನ ಸದಾಶ್ರೀ ದೇವರ ವರಪ್ರಸನ್ನರಾದ ರಾಜಶ್ರೀ ಹಂಡೆ ರಾಮಪ್ಪನಾಯಕ ಅವರು ಬರೆಸಿಕೊಟ್ಟ ಭೂದಾನ ಪತ್ರ, ಹಿರಿಯರಿಗೆ ವಿಶೇಷ ಪುಣ್ಯಫಲ ಪ್ರಾಪ್ತಿಯಾಗಬೇಕೆಂದು ಕುರುಗೋಡು ವಿಲಾಯತಿ ಹತ್ತಿರದಲ್ಲಿರುವ ಸೋಮಸಮುದ್ರದ ರೇಗಡಿ ಜಮೀನಿನ ಹೊಲವನ್ನು ಧಾರಾಪೂರ್ವಕವಾಗಿ ಧಾರೆಯರೆದು ಕೊಟ್ಟಿದ್ದಾರೆ. ಇದಕ್ಕೆ ನಿಮ್ಮ ಶಿಷ್ಯ ಪ್ರಶಿಷ್ಯ ಪಾರಂಪರ್ಯ ಅನುಭವಿಸಿಕೊಂಡು ಹೋಗುವರು. ಹಿರೇಹಾಳ ಚನ್ನವೀರನ ಪೇಟೆಯೊಳಗೆ ಇರುವ ವಿರಕ್ತಮಠಕ್ಕೆ ಕಸಬ ಚನ್ನವೀರ ತೋಟದಲ್ಲಿ ನಡೆದ ಪಸಕಿ ಪಳ್ಗಿಯನ್ನು ನಿಮ್ಮ ಮಠಕ್ಕೆ ಅಪ್ಪಣೆ ನೀಡಿದ್ದೇವೆ. ಅದನ್ನು ನಿರಂತರವಾಗಿ ನಡೆಸಿಕೊಂಡು ಹೋಗುವುದಕ್ಕೆ ಬರಸಿಕೊಟ್ಟ ದಾನಪತ್ರ.[೧೩]

ಹಂಡೆ ಅರಸುಮನೆತನದವರು ಕೂಡ್ಲಿ ಶೃಂಗೇರಿ ಮಠಕ್ಕೆ ದಾನ ನೀಡಿದ ವಿವರಗಳು ಕಂಡುಬರುತ್ತವೆ. ಕ್ರಿ.ಶ. ೧೬೬೨ರಲ್ಲಿ ಹಂಡೆ ಪವಾಡಪ್ಪನಾಯಕನು ಈ ಮಠಕ್ಕೆ ಶ್ರೀ ಶಂಕರಭಾರತಿ ಸ್ವಾಮಿಗಳಿಗೆ ಭೂದಾನ ನೀಡಿರುತ್ತಾನೆ.[೧೪] ಶಾಸನಗಳಲ್ಲಿ ಶ್ರೀ ವಿದ್ಯಾಶಂಕರ ದೇವರ ದೀಪಾರಾಧನೆಗೆ ಅಲ್ಲಾಪುರವೆಂಬ ಗ್ರಾಮವನ್ನು ಜಹಗೀರು ನೀಡಿದ್ದು, ಹಂಡೆ ಪವಾಡಪ್ಪನಾಯಕನು ಈ ಮಠಕ್ಕೆ ಭಕ್ತಿಪೂರ್ವಕವಾಗಿ ನಮಿಸಿದ್ದು ಕಂಡುಬರುತ್ತದೆ. ಹಂಡೆ ಹಿರೇರಾಮಪ್ಪನಾಯಕನು ಕ್ರಿ.ಶ.೧೭೪೯ರ ಸೋಮವಾರ ಪುಣ್ಯಕಾಲ ಶ್ರೀಮಠದ ದೀಪಾರಾಧನೆಗೆ ಮತ್ತು ನೈವೇದ್ಯ ನಡೆಸುವುದಕ್ಕೆ ಕೆಲವೊಂದು ಗ್ರಾಮಗಳನ್ನು ದಾನ ನೀಡಿದ ವಿವರಗಳು ಕಂಡುಬರುತ್ತವೆ.[೧೫] ಈ ಹಿನ್ನೆಲೆಯಲ್ಲಿ ಹಂಡೆ ಅರಸುಮನೆತನದ ನಾಯಕರು ಶೃಂಗೇರಿ ಮಠಕ್ಕೆ ಧಾರ್ಮಿಕ ಮನೋಭಾವನೆಯನ್ನು ಹೆಚ್ಚಾಗಿ ಪಾಲಿಸಿಕೊಂಡು ಬಂದವರು.

ಒಟ್ಟಾರೆಯಾಗಿ ಹಂಡೆ ಅರಸರ ದಾನದತ್ತಿಯು ಪ್ರಮುಖವಾಗಿ ಧಾರ್ಮಿಕ ಹಿನ್ನೆಲೆಯಲ್ಲಿ ಚರ್ಚಿತವಾಗಿದೆ. ಈ ಅರಸರು ದಾನದತ್ತಿ ನೀಡುವಲ್ಲಿ ಮತ್ತು ಮನೆತನದ ಶ್ರೇಯೋಭಿವೃದ್ಧಿಗಾಗಿ ಧಾರ್ಮಿಕ ಕಾರ್ಯಗಳನ್ನು ಹೆಚ್ಚಾಗಿ ಅವಲಂಬಿಸಿದವರು. ತಮ್ಮ ಹಿರಿಯರಿಗೆ ಪುಣ್ಯವಾಗಲೆಂದು ನೀಡಿದ ದಾನಗಳು ಜನಮಾನಸಕ್ಕೆ ಹತ್ತಿರವಾಗಿವೆ. ಈ ಮನೆತನದ ಪ್ರಾರಂಭಿಕ ಅರಸನಾದ ಹಂಡೆ ಬಾಲದ ಹನುಮಪ್ಪನಾಯಕನಿಂದ ಹಿಡಿದು ಕೊನೆಯ ಅರಸನಾದ ಪ್ರಸನ್ನಪ್ಪ ನಾಯಕ ವರೆಗೂ ದಾನ ನೀಡಿರುವ ಪರಿಯನ್ನು ಕಾಣಬಹುದು. ಈ ಅರಸರ ಮತ್ತೊಂದು ವಿಶೇಷವೆಂದರೆ ಮಹಿಳೆಯರು ಕೂಡ ಸಂಸ್ಥಾನವನ್ನು ಆಳಿರುವುದನ್ನು ನೋಡಬಹುದು. ಹಂಡೆ ನೀಲಮ್ಮಳು ಈ ಮನೆತನದಲ್ಲಿ ಸ್ವತಂತ್ರವಾಗಿ ದಾನದತ್ತಿಗಳನ್ನು ನೀಡಿರುವುದು ಕಾಣಬಹುದು.

ಹಂಡೆ ಅರಸರ ನಾಯಕರನ್ನು ಶಾಸನಗಳಲ್ಲಿ ಸಂಬೋಧಿಸುವುದು "ಶ್ರೀ ಮನ್ಮಹಾರಾಜಾಧಿ ರಾಜ ಖಂಡೇ ಯಶವಂತ ಪರದಳ ವಿಭಾಂಡ ಅರಿರಾಯ ಮಾನಮರ್ದನ" ಎಂಬ ನಾಮ ವಿಶೇಷಣದಿಂದ ಕರೆಯಲಾಗುತ್ತದೆ. ನೀಡಿದ ದಾನಗಳಿಗೆ ಪತ್ರಗಳನ್ನು ತಯಾರಿಸಿ ಅವುಗಳ ಮೇಲೆ ಮಾಡುವ ಹಸ್ತಾಕ್ಷರ, ದೇವನಾಗರಿ, ಮರಾಠಿ ಮತ್ತು ಮೋಡಿ ಲಿಪಿ ಹಾಗೂ ದಾನ ಶಾಸನಗಳಲ್ಲಿ ಬಳಸಿದ ಅವರ ಸೀಲುಗಳು ದೇವನಾಗರಿ ಲಿಪಿಯಲ್ಲಿವೆ. ಪ್ರಾಚೀನ ಸಂಸ್ಕೃತ ಶಾಸನಗಳ ಪ್ರಭಾವ ದಾನ ಶಾಸನಗಳಲ್ಲಿ ಕಂಡುಬರುತ್ತದೆ.[೧೬]

ದಾನಶಾಸನಗಳಲ್ಲಿ ಶ್ರೀ ಸಿದ್ಧರಾಮದೇವ, ಶ್ರೀ ಸಿದ್ಧರಾಮೇಶ್ವರ, ಶ್ರೀ ಗುರು ಬಸವ ಲಿಂಗಾಯ ನಮಃ ಹಾಗೂ ಶ್ರೀ ಗುರು ಸಿದ್ಧಲಿಂಗಾಯ ನಮಃ ಎಂಬ ಅಂಕಿತಗಳಿದ್ದು, ತಮ್ಮ ಇಷ್ಟಾರ್ಥ ದೇವರನ್ನು ಸ್ಮರಿಸುತ್ತ ದಾನಶಾಸನದ ಬರಹ ಪ್ರಾರಂಭವಾಗುತ್ತದೆ. ಇದರಿಂದ ಹಂಡೆ ಅರಸರು ದೇವರ ಮೇಲೆ ಇದ್ದ ಭಕ್ತಿಯು ಕೂಡ ಮನನೀಯವಾದದ್ದು. ಮೇಲ್ಕಂಡ ದಾನದತ್ತಿಯಿಂದ ತಿಳಿಯುವುದು ಏನೆಂದರೆ ಈ ಅರಸರು ವಿಶೇಷವಾಗಿ ದಾಸೋಹ ಪ್ರೇಮಿಗಳಾಗಿದ್ದರು. ಗುರುಪೀಠಗಳ ಮಾರ್ಗದರ್ಶನದೊಂದಿಗೆ ಇವರು ದಾನದತ್ತಿ, ದಾಸೋಹ, ಭೂದಾನ ಹಾಗೂ ಮಠಗಳಿಗೆ ಗ್ರಾಮಗಳನ್ನು ದತ್ತಿ ನೀಡುವ ಪರಿಯನ್ನು ಹೊಂದಿದ್ದರು. ಇದರ ಉದ್ದೇಶವೇ ತಮ್ಮ ಮನೆತನಕ್ಕೆ ಒಳಿತಗಾಲಿ ಎಂದು ಇಂತಹ ಜನಮುಖಿ ಕೆಲಸಗಳನ್ನು ಈ ಅರಸರು ಕೈಗೊಂಡಿದ್ದರು.

**ದೇವಾಲಯಗಳು**

ಯಾವುದೇ ಒಂದು ಅರಸುಮನೆತನವು ಹೊಸದಾಗಿ ರಾಜ್ಯ ಸ್ಥಾಪನೆ ಮಾಡಿದಾಗ, ಮೊಟ್ಟಮೊದಲಿಗೆ ಅವರು ಕೈಕೊಳ್ಳುವ ಕೆಲಸ ದೇವಾಲಯ ನಿರ್ಮಾಣ, ಇಲ್ಲವೇ ಈಗಾಗಲೇ

ಅಸ್ತಿತ್ವದಲ್ಲಿದ್ದ ದೇವಾಲಯದ ಮಠಮಾನ್ಯಗಳಿಗೆ ದಾನದತ್ತಿಗಳನ್ನು ಕೊಡುವುದು. ಅದು ಅವರ ಆದ್ಯ ಕರ್ತವ್ಯವೆಂದು ತಿಳಿದುಕೊಂಡಿದ್ದರು. ಏಕೆಂದರೆ, ಸಾಮಾನ್ಯ ಜನರಲ್ಲಿ ತಾವು ಧರ್ಮಾವಲಂಬಿಗಳೆಂಬ ಭಾವನೆ ಮೂಡಿಸಿ ಮುಂದಿನ ತಮ್ಮ ರಾಜಕೀಯ ಚಟುವಟಿಕೆಗಳಿಗೆ ಜನಸಾಮಾನ್ಯರ ಬೆಂಬಲ ಪಡೆಯಲು ಮಾಡಿದ ಪ್ರಯತ್ನದ ಫಲಗಳೇ ದೇವಾಲಯ.

ಕರ್ನಾಟಕವನ್ನು ಪ್ರಾಚೀನ ಕಾಲದಿಂದಲೂ ಆಳ್ವಿಕೆ ಮಾಡಿದ ರಾಜವಂಶಗಳು ಮೂಲದಿಂದ ಧರ್ಮವನ್ನೇ ಅವಲಂಬಿಸಿದವುಗಳು. ಕಾಲ ಹೊಡೆತದ ಸಂದರ್ಭಕ್ಕೆ ಅನುಗುಣವಾಗಿ ತಾತ್ಕಾಲಿಕ ಇಲ್ಲವೇ ಪೂರ್ಣಪ್ರಮಾಣದ ಧರ್ಮವನ್ನು ಅವಲಂಬಿಸಿ ಅದರ ತಳಹದಿಯ ಮೇಲೆ ತಮ್ಮ ಮಹತ್ವಾಕಾಂಕ್ಷೆಗಳನ್ನು ಈಡೇರಿಸಿಕೊಂಡಿವೆ. ಈ ರೀತಿಯ ರಾಜವಂಶಗಳ ವರ್ತನೆ ಕೇವಲ ಆ ಧರ್ಮದ ಮೇಲಿದ್ದ ನಂಬಿಕೆ, ಪ್ರೀತಿ ಕಾರಣವಾಗಿರದೆ, ರಾಜಕೀಯ, ಸಾಮಾಜಿಕ, ಆರ್ಥಿಕ ಕಾರಣಗಳೂ ಇದ್ದವೆಂಬುದನ್ನು ಅಲ್ಲಗಳೆಯಲಾಗುವುದಿಲ್ಲ.

ದಕ್ಷಿಣ ಭಾರತ ಅದರಲ್ಲಿಯೂ ಕರ್ನಾಟಕದ ಒಳಹೊರಗಿನ ಕೆಲವು ರಾಜವಂಶಗಳು ಹಿಂದೂ ಧರ್ಮಪಂಗಡಗಳಾದ ಶೈವ, ವೈಷ್ಣವ ಮತ್ತು ಜೈನ ಧರ್ಮಗಳ ಪ್ರಭಾವಕ್ಕೆ ಒಳಗಾಗಿ ಅವುಗಳನ್ನೇ ತಮ್ಮ ಮನೆತನದ ಧರ್ಮವನ್ನಾಗಿ ಸ್ವೀಕರಿಸಿವೆ. ಇದಕ್ಕೆ ವಿಜಯನಗರ ಮತ್ತು ವಿಜಯನಗರದ ಸಾಮಂತ ಪಾಳೇಗಾರರು ಹೊರತಾಗಿರಲಿಲ್ಲ. ಅಂಥವರಲ್ಲಿ ಹಂಡೆ ಅರಸರು ಒಬ್ಬರು. ಮುಖ್ಯವಾಗಿ ದಕ್ಷಿಣ ಭಾರತದ ರಾಜವಂಶಗಳಾದ ಯಾದವರು, ಕಾಕತೀಯರು, ವಿಜಯನಗರವನ್ನು ಆಳಿದ ಸಂಗಮ ಮನೆತನದಂತಹ ದೊಡ್ಡ ಅರಸೊತ್ತಿಗೆಗಳೇ ಅಲ್ಲದೆ ಚಿಕ್ಕಪುಟ್ಟ ಮನೆತನಗಳೂ ವೀರಶೈವ ಧರ್ಮಾವಲಂಬಿಗಳಾಗಿ, ಆ ಧರ್ಮದ ಏಳ್ಗೆಗಾಗಿ ಶ್ರಮಿಸಿದ್ದನ್ನು ಚರಿತ್ರೆಯ ಪುಟದಲ್ಲಿ ಕಾಣುತ್ತೇವೆ. ಅಂಥವರಲ್ಲಿ ಹಾಗಲವಾಡಿ, ಕೆಳದಿ, ಸಾದ್ವಿ, ಬೀಳಗಿ, ಕೊಡಗು ಇತ್ಯಾದಿಗಳಲ್ಲದೆ ಹಂಡೆ ಅರಸರು ಸಹ ವೀರಶೈವ ಧರ್ಮಾವಲಂಬಿಗಳಾಗಿ ಅದನ್ನು ಉಳಿಸಿ ಬೆಳೆಸಿದರು.

ಮೂಲತಃ ವೀರಶೈವರ ಆಚರಣೆಗಳನ್ನು ಮೈಗೂಡಿಸಿಕೊಂಡಿರುವ ಹಂಡೆ ಮನೆತನದವರು ತಮ್ಮ ಧರ್ಮದ ಉನ್ನತಿಗಾಗಿ ಶ್ರಮಿಸಿದರು. ವೀರಶೈವ ಧರ್ಮ ಸಂಸ್ಕೃತಿಯ ಸಂವರ್ಧನೆಗಾಗಿ ತಮ್ಮ ಆಡಳಿತ ಪ್ರದೇಶದ ಉತ್ಪನ್ನದಲ್ಲಿ ಕೆಲಭಾಗವನ್ನು ಮೀಸಲಿಟ್ಟಿದ್ದರು. ಇವರು ತಮ್ಮ ಅಧಿಕಾರ ವ್ಯಾಪ್ತಿಯ ಪ್ರದೇಶದಲ್ಲಿ ಅನೇಕ ಮಠ-ಮಾನ್ಯಗಳನ್ನು ಸ್ಥಾಪಿಸಿದರು.[೧೭] ಅವುಗಳನ್ನು ಹಂಡೆ ನಾಯಕರೇ ಅಲ್ಲದೆ ಅವರ ಪರಿವಾರದವರು, ಅಧಿಕಾರಿಗಳು, ಶ್ರೀಮಂತರು, ಊರಗೌಡ-ಸಾಮಾನ್ಯರು ಕಟ್ಟಿಸಿ ದಾನದತ್ತಿಗಳನ್ನು ಬಿಟ್ಟಿದ್ದಾರೆ. ಉದಾ: ಶೃಂಗೇರಿ ಮಠಕ್ಕೆ ಇವರು ಹಲವಾರು ಗ್ರಾಮಗಳನ್ನು ದತ್ತಿಯಾಗಿ ನೀಡಿರುವ ವಿಷಯ ಮಠದ ಹಳೆಯ ಚಾರಿತ್ರಿಕ

ಪತ್ರಗಳಲ್ಲಿ ಹಾಗೂ ಕೈಫಿಯತ್ತುಗಳಲ್ಲಿ ದೊರಕುತ್ತದೆ. ಇವರು ಶೈವ, ವೈಷ್ಣವ ಮಠಗಳೆರಡಕ್ಕೂ ಗ್ರಾಮದಾನ ಮತ್ತು ಭೂದಾನ ನೀಡಿರುವರು.

ಹಂಡೆ ಅರಸರ ದೇವಾಲಯಗಳು ಪ್ರಧಾನವಾಗಿ ಬಳ್ಳಾರಿ, ಕುರುಗೋಡು, ಕುಡುತಿನಿ ಮತ್ತು ಅನಂತಪುರ ಪ್ರದೇಶಗಳಲ್ಲಿ ಹರಡಿಕೊಂಡಿವೆ. ಈ ಅರಸರ ಕಾಲದ ದೇವಾಲಯಗಳ ವ್ಯಾಪ್ತಿಯು ಬಳ್ಳಾರಿ ಪ್ರದೇಶಕ್ಕೆ ಹೆಚ್ಚು ಸೀಮಿತಗೊಂಡಿದೆ. ಹಂಡೆ ನಾಯಕರು ನಿರ್ಮಿಸಿದ ಮತ್ತು ಅವರ ಅವಧಿಯಲ್ಲಿ ನಿರ್ಮಿತಿಗೊಂಡ ದೇವಾಲಯಗಳು ಕಲಾತ್ಮಕ ದೃಷ್ಟಿಯಿಂದ ಅವರ ಚಕ್ರವರ್ತಿಗಳಾದ ವಿಜಯನಗರ ಅರಸರ ನಿರ್ಮಿತಿಯ ಮಟ್ಟವನ್ನು ತಲುಪದಿದ್ದರೂ ಅವುಗಳಿಗೆ ಐತಿಹಾಸಿಕ ಮಹತ್ವವುಂಟು. ಇವರ ಕಾಲದ ದೇವಾಲಯಗಳೆಂದರೆ ಹೆಚ್ಚಾಗಿ ಬಸವಣ್ಣ, ಬಳ್ಳಾರಿಯ ಕೋಟೆ ಮಲ್ಲೇಶ್ವರ, ಕುಡುತಿನಿ ನೀಲಮ್ಮನ ಮಠ, ಕುರುಗೋಡಿನ ನೀಲಮ್ಮನ ಗುಡಿ, ನೀಲಮ್ಮನ ಪಾದುಕೆ ಗುಡಿ, ಹೀಗೆ ಬಳ್ಳಾರಿಯ ಸುತ್ತಮುತ್ತಲಿನ ಪ್ರದೇಶಗಳಲ್ಲಿ ದೇವಾಲಯಗಳು ಕಂಡುಬರುತ್ತವೆ.

ಕುಡುತಿನಿ ಗ್ರಾಮವು ಬಳ್ಳಾರಿ ತಾಲೂಕಿಗೆ ಸೇರಿದ್ದು ಅದು ಬಳ್ಳಾರಿ–ಹೊಸಪೇಟೆಯ ಹೆದ್ದಾರಿಯ ಮೇಲ್ಗಡೆ ಬರುತ್ತದೆ. ಈ ಗ್ರಾಮದಲ್ಲಿ ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯರ ಕಾಲದ ಹಲವಾರು ದೇವಾಲಯಗಳಿರುವಂತೆ, ವಿಜಯನಗರ ಕಾಲದ ಮತ್ತು ನಂತರದ ಬಳ್ಳಾರಿ ಹಂಡೆ ಅರಸರ ಕಾಲದಲ್ಲಿಯ ದೇವಾಲಯಗಳು ಇಲ್ಲಿ ಕಂಡುಬರುತ್ತವೆ.

ಊರ ದ್ಯಾಮವ್ವನ ಗುಡಿಯ ಪಕ್ಕದಲ್ಲಿ ಈ ಗುಡಿಯಿದ್ದು ಜನರು ಅದನ್ನು ನೀಲಮ್ಮನ ಮಠವೆಂದು ಕರೆಯುವರು. ಗರ್ಭಗೃಹ, ಸಭಾಮಂಟಪ, ಮುಖಮಂಟಪಗಳಿರುವಂತೆ ಕಟ್ಟಲ್ಪಟ್ಟಿದೆ. ಪೂರ್ವಕ್ಕೆ ಮುಖ ಮಾಡಿ ಗರ್ಭಗೃಹದಲ್ಲಿ ಪೀಠವಿದೆ. ದ್ವಾರದಲ್ಲಿ ಅಲಂಕಾರವಿಲ್ಲ. ಮಂಟಪದಲ್ಲಿ ಎರಡು, ಮುಖಮಂಟಪದಲ್ಲಿ ಎರಡು ಒಟ್ಟು ೪ ಕಂಬಗಳಿವೆ. ಹೊರಗೋಡೆ ಸಪಾಟಾಗಿದ್ದು ಹೆಚ್ಚಿನ ಅಲಂಕಾರ ಕಂಡುಬರುವುದಿಲ್ಲ.[೧೮]

ಬಳ್ಳಾರಿ ಜಿಲ್ಲೆಯ ಕುರುಗೋಡು ಕ್ರಿ.ಶ. ೯೫೦ರಿಂದ ೧೨೦೦ರರವೆಗೆ "ಬಲಕುಂದೆ ಮುನ್ನೂರು ನಾಡಿನ ರಾಜಧಾನಿಯಾಗಿದ್ದು" ೧೦ ಜನ ಸಿಂಧವಂಶದ ಅರಸರು ಆಳಿದ್ದರು. ಇವರು ಕಲ್ಯಾಣ ಚಾಲುಕ್ಯರ ಸಾಮಂತರಾಗಿ ಆಳ್ವಿಕೆ ನಡೆಸಿದರು. ಹೀಗಾಗಿ ಪ್ರಾಚೀನ ಕಾಲದಿಂದಲೂ ಅನೇಕ ಕೋಟೆ–ಕೊತ್ತಲು, ದೇವಾಲಯಗಳು, ಶಿಲ್ಪಗಳನ್ನು ಹೊಂದಿರುವ ಈ ಗ್ರಾಮವು ನೂತನ ಮತ್ತು ತಾಮ್ರಶಿಲಾಯುಗದ ಮಾನವನ ಪ್ರಮುಖ ನೆಲೆಯಾಗಿ ಬೆಳೆದುಬಂದಿತ್ತು. ವಿಜಯನಗರದ ನಂತರದಲ್ಲಿ ಅನೇಕ ಅರಸು ಮತ್ತು ಪಾಳೇಗಾರರ ಆಳ್ವಿಕೆಗೆ ಈ ಪ್ರದೇಶವು

ಒಳಪಟ್ಟಿತ್ತು. ಕುರುಗೋಡಿನಲ್ಲಿ ಹಂಡೆ ಅರಸುಮನೆತನಕ್ಕೆ ಸಂಬಂಧಿಸಿದಂತೆ ಕೆಲವೊಂದು ದೇವಾಲಯಗಳು ಕಂಡುಬರುತ್ತವೆ. ಅವುಗಳು ಈ ಕೆಳಗಿನಂತಿವೆ.

ಕುರುಗೋಡಿನ ಪಶ್ಚಿಮಕ್ಕೆ ಹಬ್ಬಿರುವ ಗುಡ್ಡದಲ್ಲಿ ಚಿಕ್ಕದಾದ ದೇವಾಲಯವಿದೆ. ಈ ದೇವಾಲಯಕ್ಕೆ ಗುಡ್ಡದ ಮೇಲೆ ಹೋಗಲು ಮೆಟ್ಟಿಲುಗಳಿವೆ. ಈ ದೇವಾಲಯದಲ್ಲಿ ಸುಮಾರು ೩ ಅಡಿ ಎತ್ತರದ ಸಮ ಭಂಗಿಯಲ್ಲಿ ನಿಂತಿರುವ ಕಪ್ಪು ಕಲ್ಲಿನಲ್ಲಿ ರಚಿಸಿರುವ ಸುಂದರ ಸ್ತ್ರೀ ವಿಗ್ರಹವಿದೆ. ಈ ವಿಗ್ರಹಕ್ಕೆ "ಚೌಕಿ ನೀಲಮ್ಮ ದೇವಿ"[೧೯] ಎಂದು ಕರೆಯುತ್ತಾರೆ. ನೀಲಮ್ಮನ ಪಾದುಕೆಗಳನ್ನು ಇಂದಿಗೂ ಈ ಗುಡಿಯಲ್ಲಿ ಇರುವುದನ್ನು ನೋಡಬಹುದು. ಮಕ್ಕಳು ಆಗದೆ ಇರುವವರು ನೀಲಮ್ಮನ ಪಾದುಕೆ ಮತ್ತು ತೊಟ್ಟಿಲನ್ನು ತೂಗುವರು. ಈ ದೇವಿಯ ಅನುಗ್ರಹದಿಂದ ಮಕ್ಕಳ ಭಾಗ್ಯ ಲಭಿಸುವುದು ಎಂದು ಇಲ್ಲಿರುವ ಜನರ ನಂಬಿಕೆ. ಈ ದೇವಿಗೆ ಪ್ರತಿವರ್ಷ ಶ್ರಾವಣ ಮಾಸದಲ್ಲಿ ಬರುವ ಕೊನೆಯ ಮಂಗಳವಾರದ ದಿನ ಈ ಊರಿನ ಜನರೆಲ್ಲ ಇಲ್ಲಿಗೆ ಬಂದು ಪೂಜೆಕಾರ್ಯಗಳನ್ನು ನೆರವೇರಿಸಿ ತಿಂಡಿ ತೀರ್ಥಗಳನ್ನು ಸೇವಿಸಿ ಸಂತೋಷದಿಂದ ಮನೆಗೆ ತೆರಳುತ್ತಾರೆ.

ಕುರುಗೋಡು ಪಟ್ಟಣಕ್ಕೆ ಹೊಂದಿಕೊಂಡಿರುವ ಗುಡ್ಡದ ಮೇಲೆ, ಕೋಟೆ–ಕೊತ್ತಲಗಳ ಮೇಲೆ 'ಹನುಮಂತನ ಗುಡ್ಡ' ಅಥವಾ 'ಈಶ್ವರ ಗುಡ್ಡ'[೨೦] ಎಂದು ಕರೆಯುವರು. ಬೆಟ್ಟದ ಕೆಳಗೆ ಕೋಟೆಯ ಪೂರ್ವದಿಕ್ಕಿನಲ್ಲಿ ಪ್ರವೇಶ ಮಹಾದ್ವಾರವಿದೆ. ಈ ಕೆಳಗಿನ ಕೋಟೆಯನ್ನು ಮತ್ತು ಬೆಟ್ಟದ ಮೇಲಿನ ಕೋಟೆಯನ್ನು ಹಂಡೆ ವಂಶದ ಬಾಲದ ಹನುಮಪ್ಪನಾಯಕನ ವಂಶಸ್ಥನಾದ ದೇವಪ್ಪನಾಯಕನು ಕ್ರಿ.ಶ. ೧೭೦೧ರಲ್ಲಿ ಪ್ರಜೆಗಳ ಸುರಕ್ಷತೆಗಾಗಿ ಮತ್ತು ವೈರಿಗಳಿಂದ ರಕ್ಷಣೆಗಾಗಿ ಕಟ್ಟಿಸಿದ. ಆಂಜನೇಯ ಮತ್ತು ಶಿವನ ದೇವಾಲಯವನ್ನು ನಿರ್ಮಿಸಿದ ಎಂದು ತಿಳಿದುಬರುತ್ತದೆ. ದಕ್ಷಿಣಾಭಿಮುಖವಾಗಿ ಇರುವ ಹನುಮಂತನ ಗುಡ್ಡದ ಒಳಗಡೆ ಸುಮಾರು ಮೂರು ಅಡಿ ಎತ್ತರದ ಸಂದರವಾದ ಮೂರ್ತಿ ಇದೆ. ೧೮ನೇ ಶತಮಾನದ ಕೊನೆಯ ಅವಧಿಯಲ್ಲಿ ಬಳ್ಳಾರಿ ಪ್ರದೇಶವನ್ನು ಆಳುತ್ತಿದ್ದ ಹಂಡೆ ವಂಶಸ್ಥರಿಂದ ವಶಪಡಿಸಿಕೊಂಡ ಹೈದರಾಲಿ ಈ ಕೋಟೆ ಮತ್ತು ದೇವಾಲಯವನ್ನು ದುರಸ್ತಿಪಡಿಸಿದ ಎಂಬುದು ತಿಳಿಯುತ್ತದೆ.

ಕುರುಗೋಡಿನಲ್ಲಿ ಶಿವಶರಣೆ ನೀಲಮ್ಮನವರ ಸುಂದರವಾದ ಮಠವಿದೆ. ಈ ಮಠವು ಊರೊಳಗಿನ ಪೂರ್ವಾಭಿಮುಖವಾಗಿರುವುದು. ಈ ಮಠದೊಳಗೆ ಇರುವ ಸುಮಾರು ೩ ಅಡಿ ಎತ್ತರವಿರುವ ಮಂಟಪದ ಜಗುಲಿಯ ಮೇಲೆ ಒಂದು 'ತೂಗು ಮಂಚ'ವಿದೆ. ಅದರ ಮೇಲೆ ಒಂದು ಜೊತೆ ಪಾದುಕೆಗಳನ್ನು ಕಾಣಬಹುದು. ೧೮ನೇ ಶತಮಾನದಲ್ಲಿ ಹಂಡೆ ಅರಸರ ಪ್ರಸಿದ್ಧ ರಾಣಿಯಾದ ನೀಲಮ್ಮನವರು ಈ ಮಠದಲ್ಲಿ ವಾಸಿಸುತ್ತಿದ್ದರು ಎಂಬ ಪ್ರತೀತಿ

ಇದೆ. ಇಂತಹ ಸಂದರ್ಭದಲ್ಲಿ ಕುರುಗೋಡು ಕಲ್ಯಾಣವಾಗಲೆಂದು ನೀಲಮ್ಮಳು ಅನೇಕ ದಾನ–ದತ್ತಿ ನೀಡುವ ಮೂಲಕ ಹಾರೈಸಿದ್ದಳು. ಮುಂದೆ ನೀಲಮ್ಮಳು ಧಾರವಾಡದ ಹತ್ತಿರವಿರುವ 'ಕದಡಿ'[೨೦] ಎಂಬ ಗ್ರಾಮಕ್ಕೆ ತೆರಳಿ ಅಲ್ಲಿಯೇ ವಿಧಿವಶವಾದಳೆಂದು ತಿಳಿದುಬರತ್ತದೆ.

### ೫.೩. ಸಾಮಾಜಿಕ ವ್ಯವಸ್ಥೆ

ಕರ್ನಾಟಕದ ವಿವಿಧ ರಾಜಮನೆತನಗಳು, ಅರಸರು ವಿವಿಧತೆಯಲ್ಲಿ ಏಕತೆಯನ್ನು ಪಾಲಿಸಿಕೊಂಡು ಬಂದವರು. ವಿಜಯನಗರ ಪತನವಾದ ನಂತರ ಅನೇಕ ಸಾಮಂತ ಅರಸರು ಸ್ವತಂತ್ರವಾಗಿ ಆಳ್ವಿಕೆ ನಡೆಸಿದರು. ಮುಂದೆ ಈ ಸಾಮಂತ ಅರಸರು ವಿಜಯನಗರ ಸಾಮ್ರಾಜ್ಯದ ಪುನರ್‌ನಿರ್ಮಾಣಕ್ಕೆ ಪ್ರೇರಣೆಯಾಗಿ, ಒಕ್ಕೂಟ ವ್ಯವಸ್ಥೆಯನ್ನು ಸೃಷ್ಟಿಸಿದರು. ಅರಸೊತ್ತಿಗೆಯ ಸಂದರ್ಭದಲ್ಲಿ ರಾಜವರ್ಗ ಮತ್ತು ಪ್ರಭುವರ್ಗವು ಶ್ರೇಣೀಕೃತ ವ್ಯವಸ್ಥೆ ಮೇಲುಮಟ್ಟದ ವರ್ಗಗಳು ಇವೆರಡರ ನಡುವೆ ಶ್ರಮಿಕವರ್ಗವು ರಾಜರ ಆಜ್ಞೆಯ ಹಿನ್ನೆಲೆಯಲ್ಲಿ ದುಡಿಯುತ್ತಿದ್ದವರು. ರಾಜನ ಆಧೀನದಲ್ಲಿ ಪ್ರತಿಯೊಂದು ಕಾರ್ಯಗಳು ಪ್ರಾರಂಭಗೊಳ್ಳುತ್ತಿದ್ದವು. ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರತಿಯೊಂದು ಸಮುದಾಯವು ತಮ್ಮ ಕುಲಕಸುಬು ಮತ್ತು ಕುಲದೇವರ ಆರಾಧನೆಯಲ್ಲಿ ಅಪಾರವಾದ ನಿಷ್ಠೆ–ತ್ಯಾಗ ಮತ್ತು ಭಕ್ತಿಯ ಮನೋಭಾವನೆಯನ್ನು ಕಂಡು ಕೊಂಡವರು. ಬದುಕಿನ ಕಲೆಯನ್ನು ಕಲಿತರು. ಅರಸನ ಸ್ವಾಮಿನಿಷ್ಠೆಯನ್ನು ಈ ಶ್ರಮಿಕವರ್ಗವು ಪಾಲಿಸಬೇಕಾಗಿತ್ತು. ಆದರೆ ೧೬–೧೭ನೇ ಶತಮಾನದಲ್ಲಿ ಬಳ್ಳಾರಿ ಮತ್ತು ಆಂಧ್ರ ಗಡಿಭಾಗಗಳಲ್ಲಿ ಆಳ್ವಿಕೆಗೆ ಬಂದ ಪ್ರಮುಖ ಅರಸುಮನೆತನವೆಂದರೆ ಹಂಡೆ ಅರಸರು. ಈ ಮನೆತನದ ಪ್ರಮುಖ ಅರಸನೆಂದರೆ ಹಂಡೆ ಬಾಲದ ಹನುಮಪ್ಪನಾಯಕ. ಇವನು ತುಂಬಾ ಸಾತ್ವಿಕ ಮತ್ತು ಜನರ ಶ್ರೇಯೋಭಿವೃದ್ಧಿಗಾಗಿ ದುಡಿದ ಅರಸ. ಜನಕಲ್ಯಾಣಕ್ಕಾಗಿ ಅನೇಕ ಸಾಮಾಜಿಕ ಕಾರ್ಯಗಳನ್ನು ಕೈಗೊಂಡವನು. ಪ್ರಮುಖವಾಗಿ ಕೆರೆ–ಬಾವಿ, ಹೊಂಡ, ಸರೋವರ, ತಟಾಕಗಳು, ಕಾಲುವೆಗಳು ಹಾಗೂ ಒಡ್ಡುಗಳು ಇಂತಹ ಕಲಾತ್ಮಕವಾದ ವಸ್ತುಕಲೆಗಳನ್ನು ಸೃಷ್ಟಿಸಿದವರು. ಬಾಲದ ಹನುಮಪ್ಪನಾಯಕನ ತರುವಾಯ ಹಿರೇಮಲ್ಲಪ್ಪನಾಯಕ, ಪ್ರಸನ್ನಪ್ಪನಾಯಕರು ಪ್ರಮುಖವಾಗಿ ಹಂಡೆ ಅರಸರ ವಸ್ತುಕಲೆಯನ್ನು ಪ್ರಚುರಪಡಿಸಿದವರು. ಹಂಡೆ ಮನೆತನದಲ್ಲಿ ವ್ಯಕ್ತಿ ವಸ್ತುಗಳನ್ನು ರೂಪಿಸಿದರೆ, ಆ ವಸ್ತುಗಳು ವ್ಯಕ್ತಿಯ ಸಮಾಜವನ್ನು ರೂಪಿಸುತ್ತವೆ. ಇವುಗಳನ್ನು ಉಪಕಾರಣಾತ್ಮಕ ವಸ್ತುಗಳು ಎಂದು ಕರೆಯುತ್ತಾರೆ. ಹೀಗಾಗಿ ಬಹು ಪ್ರತಿಷ್ಠೆಯುಳ್ಳ ಈ ಅರಸರು ತಮ್ಮ ಸ್ಥಾನಮಾನ ಹಾಗೂ ಮಾನವೀಯ ಮೌಲ್ಯಗಳಿಂದ ಗುರುತಿಸಿಕೊಂಡವರು. ಹೀಗಾಗಿ ಅವರ ಸಾಮಾಜಿಕ ಕಾರ್ಯಗಳನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

## ಕೆರೆ–ಕಟ್ಟೆಗಳು

ಹಿಂದೆ ಅರಸರು ತಮ್ಮ ಕಾಲಾವಧಿಯಲ್ಲಿ ಅನೇಕ ಕಡೆ ನೀರಿನ ಸಲುವಾಗಿ ಕೆರೆ ಕಟ್ಟೆಗಳನ್ನು ಕಟ್ಟಿಸಿದ್ದರು. ಆದರೆ ಇಂದು ಬೆರಳೆಣಿಕೆಯಷ್ಟು ಕೆರೆಗಳು ಮಾತ್ರ ಕಾಣಿಸಿಕೊಳ್ಳುತ್ತವೆ. ಕುರುಗೋಡಿನಲ್ಲಿ ಒಂದು ಕೆರೆಯಿರುವುದನ್ನು ಕಾಣಬಹುದು. ಆದರೆ ಇದನ್ನು ಯಾರು ಕಟ್ಟಿಸಿದರೆಂಬುದು ಮಾತ್ರ ಇನ್ನೂ ತಿಳಿದುಬಂದಿಲ್ಲ. ಕೆರೆಯು ಕುರುಗೋಡಿನಿಂದ ನೈಋತ್ಯಕ್ಕೆ ಒಂದು ಒಂದುವರೆ ಕಿ.ಮೀ. ಅಂತರದಲ್ಲಿ ಎಮ್ಮಿಗನೂರು ರಸ್ತೆಯ ಉತ್ತರ ಭಾಗಕ್ಕೆ ಹತ್ತಿಕೊಂಡಿದೆ. ಈ ಕೆರೆಯನ್ನು ಸುಮಾರು ಒಂದು ಕಿ.ಮೀ. ಉದ್ದವಾಗಿ ಹಾಗೂ ನೇರವಾಗಿ ಕಟ್ಟಲಾಗಿದೆ. ನೀರು ಮಳೆಗಾಲದಲ್ಲಿ ವಿಶಾಲವಾಗಿ ಹರಡಿಕೊಂಡು ನಿಲ್ಲುತ್ತದೆ. ಕೆರೆಯ ಒಡ್ಡನ್ನು ಮಣ್ಣು ಮತ್ತು ಕಲ್ಲಿನಿಂದ ಕಟ್ಟಲಾಗಿದೆ. ಒಳಭಾಗದಲ್ಲಿ ಕಲ್ಲಿನ ಛಪ್ಪಡಿಗಳನ್ನು ಪಾವಟಿಗೆಗಳ ರೂಪದಲ್ಲಿ ಜೋಡಿಸಲಾಗಿದೆ. ಒಡ್ಡಿನ ದಕ್ಷಿಣ ತುದಿಯಲ್ಲಿ ಒಂದು ನೀರು ಹೋಗಲು ಮೋರಿಯನ್ನು ಮಾಡಲಾಗಿದೆ. ಅದನ್ನು ಒಡ್ಡಿನಲ್ಲಿ ಚೌಕಾಗಿ ಕಲ್ಲಿನಿಂದ ಕಟ್ಟಿ ಅದರ ಮೇಲೆ ಅಡ್ಡ ಚಾವಣಿಕಲ್ಲುಗಳನ್ನು ಹಾಕಲಾಗಿದೆ. ನೀರಿನ ಗದ್ದೆಗಳಿಗೆ ನೀರು ಹೋಗಲು ಎರಡು ತೂಬುಗಳಿವೆ. ಇವುಗಳನ್ನು ಒಡ್ಡಿನ ಒಳಭಾಗದಲ್ಲಿ ನೀರು ನಿಲ್ಲುವ ತಳಭಾಗದಲ್ಲಿ ಕಟ್ಟಲಾಗಿದೆ. ಈ ತೂಬುಗಳ ಮುಖಾಂತರ ನೀರು ಬಿಡಲು ಅನುವಾಗಲು ತೂಬಿನ ಮೇಲೆ ನಾಲ್ಕು ಕಂಬದ ಮಂಟಪಗಳನ್ನು ಕಟ್ಟಲಾಗಿದ್ದು ಮೇಲೆ ಇಟ್ಟಂಗಿ ಗಾರೆಯ ದ್ರಾವಿಡ ಶೈಲಿಯಂತೆ ಕಂಡುಬರುವ ಶಿಖರಗಳಿವೆ. ಮಂಟಪಗಳನ್ನು ಕಟ್ಟುವ ಉದ್ದೇಶ ತೂಬುಗಳ ಮುಖಾಂತರ ಗದ್ದೆಗೆ ನೀರು ಬಿಡುವಾಗ ಮಂಟಪದಲ್ಲಿ ನಿಂತು ತೂಬಿನ ಬಾಯಿಯನ್ನು ತೆರೆಯಲು ಮುಚ್ಚಲು ಅನುವಾಗಲು ಮತ್ತು ಅಲ್ಲಿ ನಿಂತ ಮನುಷ್ಯನಿಗೆ ಮಳೆ ಬಿಸಿಲು ಹತ್ತಬಾರದೆಂಬುದಾಗಿತ್ತು. ಅದಲ್ಲದೆ ನೀರಿನಲ್ಲಿ ತೂಬು ಇಲ್ಲಿಯೇ ಇದೆ ಎಂದು ತಿಳಿದುಕೊಳ್ಳಲು ಅನುವಾಗಲು, ಇಲ್ಲವೆ ಮುಂಜಾನೆ ಸಂಜೆ ವೇಳೆಯಲ್ಲಿ ಈ ತೂಬು ಮಂಟಪಗಳಲ್ಲಿ ಕುಳಿತು ವಿಶ್ರಾಂತಿ ಪಡೆಯುವ ಉದ್ದೇಶವಿತ್ತು. ಇಂತಹ ಕೆರೆಕಟ್ಟೆಗಳನ್ನು ಅಂದು ಬೇರೆ ಬೇರೆ ಕಡೆಯಲ್ಲಿ ಪಾಳೆಗಾರರು ನಿರ್ಮಿಸಿರಬೇಕು. ಆದರೆ ಬಳ್ಳಾರಿ, ಸಿರುಗುಪ್ಪ ತಾಲೂಕುಗಳು ಇಂದು ನೀರಾವರಿಗೆ ಒಳಪಟ್ಟಿದ್ದರಿಂದ ಅಂದು ಇರಬಹುದಾದ ಕೆರೆಕಟ್ಟೆಗಳು ಅಳಿದು ಹೋಗಿರುವುದರಲ್ಲಿ ಯಾವ ಸಂಶಯವೂ ಇರುವುದಿಲ್ಲ.

ಬುಕ್ಕರಾಯನ ಚರಿತ್ರೆಯ ವಂಶಾವಳಿಯಲ್ಲಿ ಕೆರೆ ದುರಸ್ತಿ ಮಾಡುವ ಉಲ್ಲೇಖ ಬಹಳ ಕಡೆ ಬಂದಿರುವುದನ್ನು ಕಾಣಬಹುದು. ವಂಶಾವಳಿಯು ಪ್ರಾರಂಭವಾಗುವುದೇ ಬುಕ್ಕರಾಯನ ಪ್ರಧಾನಿ ಚಿಕ್ಕಪ್ಪ ಒಡೆಯ ಪಾಂಡುನದಿಗೆ ತಟಾಕ ಕಟ್ಟಿಸುವುದರಿಂದ, ಹಾಗೆಯೇ ಮಲ್ಲಪ್ಪನಾಯಕ

ಹಂಡೆ ಅನಂತಪುರದಲ್ಲಿ ನೆಲೆಸಿ ಅಲ್ಲಿಯ ಕೆರೆಯನ್ನು ನಿರ್ಮಿಸಿದ್ದು, ಮೊದಲಿನ ತೂಬು ತೆಗೆದು ಸ್ಥಳಾಂತರಿಸಿ ಕೆರೆಯೇರಿ ಕಟ್ಟಿಸಿದನು.

ಹಂಡೆ ಬಾಲದ ಹನುಮಪ್ಪ ನಾಯಕನು ಬುಕ್ಕರಾಯ ಸಮುದ್ರ ಮತ್ತು ಅನಂತಸಾಗರ ಕೆರೆಯನ್ನು ಕ್ರಿ.ಶ.೧೫೬೯ರಲ್ಲಿ ಅಳಿಯ ರಾಮರಾಯನಿಂದ ಉಂಬಳಿಯಾಗಿ ಪಡೆದ ಅನಂತಪುರ ಮತ್ತು ಬುಕ್ಕರಾಯ ಸಮುದ್ರ, ನಂದ್ಯಾಲ ಮುಂತಾದ ಪ್ರದೇಶಗಳಲ್ಲಿ ತನ್ನ ಆಳ್ವಿಕೆಯನ್ನು ಪ್ರಾರಂಭಿಸುತ್ತಾನೆ. ಮೊದಲಿ ಜನಕಲ್ಯಾಣಕ್ಕಾಗಿ ಬುಕ್ಕರಾಯ ಸಮುದ್ರದಲ್ಲಿ ವಿಶಾಲವಾದ ಕೆರೆಯನ್ನು ಕಟ್ಟಿಸುತ್ತಾನೆ. ಕುಡಿಯುವ ನೀರಿನ ವ್ಯವಸ್ಥೆ ಮತ್ತು ನೀರಿನ ಅವಶ್ಯಕತೆಗಾಗಿ ಅನೇಕ ಕಾಲುವೆಗಳ ನಿರ್ಮಿಸಿರುವುದು ಎಂದು ಅನಂತಪುರದ ಕೈಫಿಯತ್ತು ತಿಳಿಸುತ್ತದೆ.

ಕೊತ್ತಚೆರುವು ಅಥವಾ ಹೊಸಕೆರೆಯಲ್ಲಿ ಕ್ರಿ.ಶ.೧೭೨೦ರಲ್ಲಿ ಹಂಡೆ ಪವಾಡಪ್ಪನಾಯಕನು ನಿಡುಮಾಮಿಡಿ ಮಠವನ್ನು ಸ್ಥಾಪಿಸುವುದರೊಂದಿಗೆ ಕೆರೆಯೊಂದು ಕಟ್ಟಿಸುತ್ತಾನೆ. ಭೂಮಿಗೆ ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಿಕೊಟ್ಟ ಕೀರ್ತಿ ಇವನಿಗೆ ಸಲ್ಲುತ್ತದೆ. ಈತನು ನಿಡುಮಾಮಿಡಿ ಕರಿಬಸವ ಸ್ವಾಮಿಗಳ ಪರಮ ಭಕ್ತನಾಗಿರುವುದರಿಂದ ಈತನ ಸಮಾಧಿಯು ಇಲ್ಲಿಯೇ ಕಟ್ಟಲಾಗಿದೆ.

ಪ್ರಸನ್ನಪ್ಪನಾಯಕನ ಆಳ್ವಿಕೆ ಕಾಲದಲ್ಲಿ ಅನಂತಪುರದಲ್ಲಿಯ ಕೆರೆಯ ಉಲ್ಲೇಖವನ್ನು ವಂಶಾವಳಿ ಸುದೀರ್ಘವಾಗಿ ವಿವರಿಸುತ್ತದೆ. ಯಾವುದೋ ಕೆಲಸಕ್ಕೆ ಕಡಪದ ನವಾಬರ ಹತ್ತಿರ ಹೋಗುವ ಸಮಯದಲ್ಲಿ ಪ್ರಸನ್ನಪ್ಪನಾಯಕ ಸಿರಿಯಪ್ಪ ಬಣಜಿಗನನ್ನು ಕರೆಸಿ "ರಾಜ್ಯದ ಮೇಲೆ ವಂದು ಕಂಣು ಕೆರೆಮ್ಯಾಲೆ ವಂದು ಕಂಣುಯಿರಿಸು. ಯಿ ಕೆರೆತುಂಬಿ ಯಿದ್ದದ್ದರಿಂದ ಪ್ರತ್ಯೇಕ ಕಾಲುವೆ ಅಗೆದು ನೀರು ಕೆರೆಯೊಳಗೆ ಕೆರೆನೆಲಕ್ಕೆ ಯಿಟ್ಟ ಭತ್ತದ (ಅಹಗೆ) ಹೊಸ (ಹೊದಸಲ) ಗೋದುವೆ (ಉದಿ) ಮ್ಯಾಲೆ ಹಾಕಿಶಿದೆವು. ಆದ್ದರಿಂದ ೨ ಫಲಕ್ಕೆ ಬಂದರೆ ಜಾಗ್ರತಿಯಾಗಿ ಇರಬೇಕಾದ್ದೆಂದು ಅಪ್ಪಣೆ ಕೊಟ್ಟು"[೨೨] ಹೋದನು. ಆತ ಹೋದ ನಂತರ ಅಕಾಲಮಳೆಯಿಂದ ಕೆರೆ ತುಂಬಿ ಮೂಡಲ ಹಾಗೂ ಪಡುವಲ ದಿಕ್ಕಿನ ತೂಬುಗಳೆರಡೂ ಕಿತ್ತುಹೋದವು. ಅಲ್ಲಿಯ ಒಕ್ಕಲಿಗರು, ಶಾನುಭೋಗರು ಸಮಸ್ತ ಪ್ರಜೆಗಳನ್ನು ಕರೆಸಿ ರಾತ್ರಿ ಹಗಲು ತೂಬಿನ ತೂತುಗಳಿಗೆ ಕಲ್ಲು ಮಣ್ಣು ಹಾಗೂ ಹುಲ್ಲು ಹಾಕಿ ಬಿಗಿಗೊಳಿಸಿದ ಪ್ರತೀತಿಗಳಿವೆ. ಒಟ್ಟಾರೆಯಾಗಿ ಹಂಡೆ ಅರಸರು ತಮ್ಮ ಕಾಲಾವಧಿಯಲ್ಲಿ ಅನೇಕ ಕಡೆ ನೀರಿನ ಸಲುವಾಗಿ ಕೆರೆಕಟ್ಟೆಗಳನ್ನು ಕಟ್ಟಿಸಿದ್ದು ಕಂಡುಬರುತ್ತದೆ.

### ಹೊಂಡಗಳು

ಬಳ್ಳಾರಿ ಗುಡ್ಡದ ಮೇಲೆ ನೀರು ಸಂಗ್ರಹಣೆಗಾಗಿ ಪ್ರಕೃತಿ ನಿರ್ಮಿತ ನೀರಿನ ಹೊಂಡಗಳಿವೆ. ಒಂದು ಹೊಂಡವಂತೂ ೨೯ ಅಡಿ ಆಳವಾಗಿದೆ. ಈ ಹೊಂಡದ ಹತ್ತಿರದಲ್ಲಿಯೇ, ಮೇಲಿನ ಕೋಟೆಯ ಪೂರ್ವಕ್ಕೆ ಜೋಡಿ ದೇವಾಲಯಗಳಿವೆ. ಹಂಡೆ ಅರಸರ ದ್ಯಾಮಪ್ಪನಾಯಕನ ಮಕ್ಕಳಲ್ಲಿ ಚಿಕ್ಕರಾಮಪ್ಪನಾಯಕನು ಐದು ವರ್ಷ ಆಳ್ವಿಕೆ ಮಾಡಿದ. ಈತನು ಗ್ರಾಮದ ಉತ್ತರ ಭಾಗದಲ್ಲಿ ಹೊಂಡವನ್ನು ನಿರ್ಮಿಸಿದನು. ಹೊಂಡಕ್ಕೆ ಪಶ್ಚಿಮದಲ್ಲಿ ಸಿಂಹಾಸನ ಹೊಸದಾಗಿ ಕಟ್ಟಿಸಿ ನಾಗರ ಕೆರೆಗೆ ಕಲ್ಲು ಬಾವಿ ಕಟ್ಟಿಸಿದ. ಮುಂದೆ ಬಂದ ಚಿಕ್ಕಹನುಮಪ್ಪನಾಯಕನಿಗೂ ಇವನಿಗೂ ಆಗದೇ ಹೋದುದರಿಂದ ಅಣ್ಣ ಕಟ್ಟಿಸಿದ ಹೊಂಡ, ಸಿಂಹಾಸನ ಬಿಚ್ಚಿಸಿ ಆ ಕಲ್ಲಿನಿಂದಲೇ ಹನುಮಪ್ಪನಾಯಕ ಕೋಟೆಗೆ ಬಳಸಿಕೊಂಡಿದ್ದು ಕೈಫಿಯತ್ತಿನಲ್ಲಿ ಉಲ್ಲೇಖವಾಗಿದೆ.[೨೩]

### ಬಾವಿಗಳು

ಜೀವನದ ಮೂಲ ಅಗತ್ಯಗಳಲ್ಲಿ ನೀರು ಒಂದು ಪ್ರಮುಖ ವಸ್ತು. ಈ ಅಗತ್ಯವನ್ನು ಪೂರೈಸಲು ಬಾವಿಗಳನ್ನು ತೋಡಿಸುತ್ತಿದ್ದರು. ಅವುಗಳ ರಕ್ಷಣೆಗಾಗಿ ದತ್ತಿದಾನ ನೀಡಿರುವುದು ಕಂಡುಬರುತ್ತದೆ. ಇದಕ್ಕೆ ಹಂಡೆ ಅರಸರು ಹೊರತಾಗಿರದೆ ಅವರು ಸಹ ಅನೇಕ ಬಾವಿಗಳನ್ನು ಕಟ್ಟಿಸಿರುವರು. ಅಂತಹವುಗಳಲ್ಲಿ ಕೆಲವು ಕಂಡುಬರುತ್ತವೆ. ಬಳ್ಳಾರಿಯಲ್ಲಿ ನಿರ್ಮಿಸಿರುವ ಬಾವಿಗಳ ಬಗ್ಗೆ ಬಳ್ಳಾರಿಯ ಗೆಝೆಟಿಯರ್ ಮಾಹಿತಿಯನ್ನು ನೀಡುತ್ತದೆ. ಕೊರ್ಲಗುಂದ ಗ್ರಾಮದಲ್ಲಿ ಹಾಲಬಸವೇಶ್ವರ ಬಾವಿ, ನೀಲಮ್ಮನ ಹೆಸರಿನ ಬಾವಿಗಳು ಅಂದ್ರಾಳು(ಹಂದರಹಾಳ) ಗ್ರಾಮದಲ್ಲಿ ಎರಡು, ಬೈಲೂರು ಗ್ರಾಮದಲ್ಲಿ ಒಂದು, ಬಳ್ಳಾರಿಯಲ್ಲಿ ಮೂರು, ಬಂಕಾಪುರದಲ್ಲಿ ಒಂದು–ಒಟ್ಟು ಒಂಬತ್ತು ಬಾವಿಗಳು ದೊರಕುತ್ತವೆ. ವಾಸ್ತು ಕಲೆ ಮತ್ತು ರಚನೆಯ ದೃಷ್ಟಿಯಿಂದ ಅಂದ್ರಾಳು, ಕೊರ್ಲಗುಂದ, ಬಂಕಾಪುರ, ಬಳ್ಳಾರಿ ಬಾವಿಗಳು ಪ್ರಮುಖವಾಗಿವೆ. ಇವುಗಳನ್ನು ಕಟ್ಟಲು ಸ್ಥಳೀಯವಾಗಿ ದೊರೆಯುವ ಕಲ್ಲುಗಳನ್ನು ಬಳಸಲಾಗಿದೆ. ಬಾವಿಗಳನ್ನು ಚೌಕಾಗಿ ಕಟ್ಟಿದ್ದು ನಾಲ್ಕು ಗೋಡೆಗಳಿದ್ದು ಒಂದು ಬದಿಯಿಂದ ಬಾವಿಗೆ ಇಳಿಯಲು ಪಾವಟಿಕೆಗಳನ್ನು ಅವುಗಳ ಮಗ್ಗಲಿಗೆ ಕಮಾನು ಕೋಣೆಗಳನ್ನು ಸಹ ಮಾಡಲಾಗಿದೆ. ಭೂಮಿಗೆ ನೀರನ್ನು ಎತ್ತಿ ಹಾಕಲು ಏತಕ್ಕೆ ಸಹಾಯಕವಾಗಲು ಏತದ ಬಾವಿಯನ್ನು, ಏತದ ನೀರು ಬೀಳಲು ಬಚ್ಚಲುಗಳನ್ನು ಕಟ್ಟಲಾಗಿದೆ. ಬಾವಿಗಳ ಗೋಡೆಗಳ ಮೇಲೆ ಮೀನು, ಆಮೆ, ಹಾವು, ಆನೆ, ಸಿಂಹ, ಸ್ತ್ರೀ, ಪುರುಷ, ಮಿಥುನ ಶಿಲ್ಪಗಳ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಬಾವಿಯ ಸುತ್ತಲೂ ಮೇಲೆ ಕುಳಿತುಕೊಳ್ಳಲು ಕಟ್ಟೆಯನ್ನು ಮಾಡಲಾಗಿದೆ. ಈ ಅರಸರ ಕಾಲದಲ್ಲಿ ನಿರ್ಮಾಣವಾದ ಅನೇಕ ಬಾವಿಗಳನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

ಅವ್ವಮ್ಮನ ಬಾವಿ ಬಳ್ಳಾರಿಯಿಂದ ಸು.೨ಕಿ.ಮೀ. ದೂರದ ಸಿರುಗುಪ್ಪಾ ರಸ್ತೆಯ ಅವ್ವಮ್ಮನ ಬಾವಿ ಎಂಬ ಬಡವಾಣೆಯ ಪ್ರವೇಶದಲ್ಲಿಯೇ ಎಡಬದಿಯಲ್ಲಿ ಪೂರ್ವಕ್ಕೆ ಪ್ರವೇಶದ್ವಾರವಿದ್ದು, ಒಳಹೊಕ್ಕ ನಂತರ ಮತ್ತೊಂದು ಕಮಾನಿನ ವ್ಯವಸ್ಥೆಯಿದ್ದು, ಅಂತಸ್ಥಿನ ಉತ್ತರಾಭಿಮುಖವಾಗಿ ಇನ್ನೂ ಕೆಳಗೆ ಹೋಗುವುದಕ್ಕೆ ಮೆಟ್ಟಿಲಗಳ ವ್ಯವಸ್ಥೆಯಿದೆ. ಸೋದರಿ ಬಾವಿ ಮತ್ತು ಸೋದರಿಯರ ಬಾವಿ ಬಳ್ಳಾರಿಯ ಮುಖ್ಯನಗರದ ಮೇದಾರ ಓಣಿಯಲ್ಲಿ ಅವ್ವಮ್ಮನ ಬಾವಿಯ ಶೈಲಿಯನ್ನು ಯಥಾವತ್ತಾಗಿ ಈ ಸಹೀದರಿ ಬಾವಿ ಹೊಂದಿದೆ. ಈ ಬಾವಿಯಲ್ಲಿ ನಂದಿ, ಲಿಂಗ, ನರ್ತಕಿ ಹಾಗೂ ಕಮಲದ ವಿನ್ಯಾಸಗಳನ್ನು ಬಾವಿಯ ಕಲ್ಲಿನ ಗೋಡೆಯಲ್ಲಿ ಕೆತ್ತಾಲಾಗಿದೆ. ಇನ್ನೂ ಸೋದರಿಯರ ಬಾವಿ ಇದು ಬಳ್ಳಾರಿಯಿಂದ ೬ಕಿ.ಮೀ ದೂರದ ಸಿರುಗುಪ್ಪಾ ರಸ್ತೆಯ ಒಕ್ಕರಾಣಿ ಕ್ಯಾಂಪ್‌ನ ಹತ್ತಿರ ಗಾಣಿಗನ ಹಳ್ಳದ ಪಕ್ಕದಲ್ಲಿರುವ ಹುಣಸಿ ಗಿಡದ ಬುಡದಲ್ಲಿ ಕಂಡುಬರುತ್ತದೆ. ಈ ಮೇಲಿನ ಎರಡು ಬಾವಿಗಳನ್ನು ಕೃಷಿ ಉಪಯೋಗಕ್ಕೆ ನಿರ್ಮಿಸಿರುವುದು ಕಂಡುಬರುತ್ತದೆ. ನಗರದ ದೊಡ್ಡ ಬಾವಿಯು ಹಂಡೆ ಹನುಮಪ್ಪನಾಯಕನ ಅಕ್ಕ-ತಂಗಿಯರ ಸ್ಮರಣಾರ್ಥಕವಾಗಿ ನಗರದ ದೊಡ್ಡಬಾವಿಯನ್ನು ನಿರ್ಮಿಸಿದ್ದಾನೆ.

ಹಂಡೆ ಅರಸರ ಕಾಲದಲ್ಲಿ ನಿರ್ಮಿಸಲ್ಪಟ್ಟ ಈ ಬಾವಿಯು ಸುಮಾರು ೧೫.೬೨ ೧೫.೬೨ ಸೆಂ.ಮೀ.ನಷ್ಟು ಚೌಕಾಗಿದೆ. ೬.೨೫ ಸೆಂ.ಮೀ.ನಷ್ಟು ಅಗಲದ ಪಾವಟಿಕೆ ದಾರಿಯಿದೆ. ಬಾವಿಗೆ ಪೂರ್ವದಿಂದ ಪಾವಟಿಕೆ ಮುಖಾಂತರ ಪಶ್ಚಿಮದತ್ತ ಇಳಿಯುವಾಗ ಮಂಟಪದ ರೀತಿ ಕಟ್ಟಲಾಗಿದೆ. ಇದನ್ನು ದಾಟಿದರೆ ಪಾವಟಿಕೆಗಳು ಒಮ್ಮೆಲೆ ದಕ್ಷಿಣದತ್ತ ಕೆಳಗಿಳಿಯುತ್ತವೆ. ಪಾವಟಿಗೆಗಳು ಹಿಡಿದು ಇಡೀ ಬಾವಿಯನ್ನು ಬೆಣಚುಕಲ್ಲು ಬಂಡೆಗಳನ್ನು ಬಳಸಿ ಕಟ್ಟಲಾಗಿದೆ. ದಕ್ಷಿಣ ಗೋಡೆಯಲ್ಲಿ ನೀರನ್ನು ಎತ್ತಿ ಹಾಕಲು ಏತದ ಬೋದುಗೆಗಳನ್ನು ಅಳವಡಿಸಿದ್ದು ಮೇಲೆ ಏತದ ಬಚ್ಚಲು ಇರುವುದು. ಇದೇ ಗೋಡೆಯಲ್ಲಿ ಎರಡು ಕಮಾನುಗಳನ್ನು ಮಾಡಲಾಗಿದೆ. ಗೋಡೆಗಳ ಮಧ್ಯದಲ್ಲಿ ಅಡ್ಡ ಪಟ್ಟಿಕೆಗಳನ್ನು ಜೋಡಿಸಲಾಗಿದೆ. ಬಾವಿಯ ಸುತ್ತಲೂ ಅಂದರೆ ಗೋಡೆಯ ಮೇಲೆ ಕುಳಿತುಕೊಳ್ಳಲು ಮತ್ತು ಬಾವಿಯ ಅಂದವನ್ನು ಹೆಚ್ಚಿಸುವ ಸಲುವಾಗಿ ಕಟ್ಟೆಯನ್ನು ಕಟ್ಟಲಾಗಿದೆ. ಈ ಬಾವಿಯ ಇನ್ನೊಂದು ವಿಶೇಷವೆಂದರೆ ಗೋಡೆಯ ಮೇಲಿನ ಉಬ್ಬುಶಿಲ್ಪಗಳು. ಇವುಗಳಲ್ಲಿ ಮನುಷ್ಯ, ಆನೆ, ನಂದಿ, ಲಿಂಗ, ಸಿಂಹ, ಸರ್ಪ, ಮೀನು, ಆಮೆ ಇತ್ಯಾದಿ ಉಬ್ಬುಶಿಲ್ಪಗಳು ನೋಡುಗರನ್ನು ಆಕರ್ಷಿಸುತ್ತವೆ.

ನೀಲಮ್ಮ ಹೆಸರಿನ ಬಾವಿಯು ಗ್ರಾಮದ ಪಶ್ಚಿಮಕ್ಕೆ ಅರ್ಧ ಕಿ.ಮೀ. ದೂರದಲ್ಲಿದೆ. ಹಾಲಬಸವೇಶ್ವರ ಬಾವಿಗಿಂತ ಸ್ವಲ್ಪ ಚಿಕ್ಕದಾಗಿದೆ. ಚೌಕಾಗಿರುವಂತೆ ಬೆಣಚುಕಲ್ಲುಗಳನ್ನು ಬಳಸಿ ಕಟ್ಟಲಾಗಿದೆ. ಬಾವಿಗೆ ದಕ್ಷಿಣ ಬಾಜುವಿನಿಂದ ಇಳಿಯುತ್ತ ಪಶ್ಚಿಮಕ್ಕೆ ಇಳಿದು ಹೋಗಬೇಕು.

ಪಾವಟಿಗೆಗಳ ಮಧ್ಯೆ ಒಂದು ಮಂಟಪ ಬರುವುದು. ಪಶ್ಚಿಮ ಗೋಡೆಯಲ್ಲಿ ಏತದ ಬೋದುಗೆಗಳಿದ್ದು ಮೇಲೆ ಬಚ್ಚಲು ಇದೆ. ಸಂಪೂರ್ಣವಾಗಿ ಈ ಬಾವಿಯ ನೀರನ್ನು ಕೃಷಿ ನೀರಾವರಿಗೆ ಬಳಸಲಾಗುತ್ತದೆ. ಅದರ ಸಫಲತೆಗಾಗಿಯೇ ಈ ಬಾವಿಯನ್ನು ಕಟ್ಟಲಾಗಿದೆ. ಬಾವಿಯ ಗೋಡೆಯ ಮೇಲೆ ಲಜ್ಜಾಗೌರಿ, ಸರ್ಪ, ಆಮೆ, ಮೀನು, ಲಿಂಗ, ನಂದಿ, ಆನೆ ಇತ್ಯಾದಿ ಉಬ್ಬುಶಿಲ್ಪಗಳಿವೆ.

ಬಳ್ಳಾರಿಯ ಪಾರ್ವತಿ ನಗರದಲ್ಲಿ ಕಟ್ಟಲಾದ ಬಾವಿಯು ಮೊದಲು ಅಡವಿಯಲ್ಲಿ ಹೊಲದ ನೀರಾವರಿ ಸಲುವಾಗಿ ಕಟ್ಟಿಸಿದಂತಹ ಬಾವಿಯಾಗಿದ್ದು ಈಗ ಬಳ್ಳಾರಿಯ ಊರಲ್ಲಿ ಕಂಡುಬರುವುದು. ಇದು ನೋಡಲು ಪುಷ್ಕರಣಿಯಂತೆ ಕಂಡುಬರುತ್ತದೆ. ಗೋಡೆಯನ್ನು ಬೆಣಚು ಕಲ್ಲುಗಳನ್ನು ಬಳಸಿಮೆಟ್ಟಿಲು ರೀತಿಯಲ್ಲಿ ಕಟ್ಟಲಾಗಿದೆ. ಆದಾಗ್ಯೂ ಪಶ್ಚಿಮಗೋಡೆಯಲ್ಲಿ ಏತದ ಬಚ್ಚಲು ಮಾಡಲಾಗಿದ್ದಂತೆ ಪೂರ್ವಗೋಡೆಯಲ್ಲಿ ಇಳಿಯಲು ಪಾವಟಿಕೆಗಳನ್ನು ಜೋಡಿಸಲಾಗಿದೆ. ನೀರಿನ ಬಳಕೆ ನಿಂತಿದ್ದರಿಂದ ಬಾವಿಯು ಶಿಥಿಲಗೊಂಡು ಸ್ವಲ್ಪ ಹಾಳಾದ ಸ್ಥಿತಿಯಲ್ಲಿದೆ.

ಅಂದ್ರಾಳುವಿನ ಪೂರ್ವಭಾಗಕ್ಕೆ ಹತ್ತಿಕೊಂಡು ಕಟ್ಟಲಾದ ಬಾವಿಯು ಪ್ರಮಾಣದಲ್ಲಿ ದೊಡ್ಡದಾಗಿದೆ. ಇದರ ಗೋಡೆಯನ್ನು ಕಟ್ಟಲು ಬೆಣಚುಕಲ್ಲುಗಳನ್ನೇ ಬಳಸಲಾಗಿದೆ. ಉತ್ತರ ಗೋಡೆಯಲ್ಲಿ ಏತದ ಬೋದುಗೆಗಳಿದ್ದು ಮೇಲೆ ಬಚ್ಚಲು ಇದೆ. ಬಾವಿಗೆ ಪೂರ್ವದಿಂದ ಇಳಿಯುತ್ತಾ ಉತ್ತರಕ್ಕೆ ತಿರುಗಿ ಇಳಿಯುವಂತೆ ಪಾವಟಿಕೆಗಳನ್ನು ಜೋಡಿಸಲಾಗಿದೆ. ಈ ಪಾವಟಿಕೆಗಳ ಹತ್ತಿರದಲ್ಲಿ ಪೂರ್ವಮುಖ ಮಾಡಿ ಚಿಕ್ಕಗುಡಿಯನ್ನು ಕಟ್ಟಲಾಗಿದೆ. ಬಾವಿಯ ಗೋಡೆಗಳ ಮೇಲೆ ಪ್ರಾಣಿ–ಪಕ್ಷಿ, ಸ್ತ್ರೀ–ಪುರುಷ ಹಾಗೂ ಮಿಥುನ ಶಿಲ್ಪಗಳನ್ನು ಕೆತ್ತಲಾಗಿದೆ. ಇಂತಹುದೇ ಮತ್ತೊಂದು ಬಾವಿಯು ಅಂದ್ರಾಳು ಇಬ್ರಾಂಪೂರ ರಸ್ತೆಯ ಮೇಲ್ಗಡೆ ಇರುವುದು. ಈ ಬಾವಿಯು ಸಹ ಚೌಕಾಗಿದ್ದು ಪಾವಟಿಕೆಯಿಂದ ಇಳಿಯುವಾಗ ಕಂಬದ ಮಂಟಪ ಮತ್ತು ದೇವರ ಗುಡಿಗಳನ್ನು ಮಗ್ಗುಲಿನ ಗೋಡೆಗಳಲ್ಲಿ ಮಾಡಲಾಗಿದೆ. ಇದಕ್ಕೂ ಕೂಡ ಏತದ ಬಚ್ಚಲು ಇರುವುದು. ಈ ಬಾವಿಯನ್ನು ಹನುಮಪ್ಪನಾಯಕನು ಕಟ್ಟಿಸಿದ ಉಲ್ಲೇಖ ನಮಗೆ ದೊರೆಯುತ್ತದೆ.

ಬಂಕಾಪುರದ ಅಂಕದಖಣ ಹೆಸರಿನ ಓಣಿಗೆ ಹೊಂದಿ ಪಶ್ಚಿಮ ದಿಕ್ಕಿನಲ್ಲಿ ಪಂಚಮಲಕಪ್ಪನ ಬಾವಿ ಎಂದು ಪ್ರಸಿದ್ಧಿ ಪಡೆದಿರುವ ಸೋಪಾನದ ಬಾವಿಯಿದೆ. ಇದು ಒಂದು ಐತಿಹಾಸಿಕ ಮಹತ್ವ ಪಡೆದ ಕಟ್ಟಡ. ಶಹಬಝಾರದಲ್ಲಿಯ ಬಸವಣ್ಣ ದೇವಸ್ಥಾನದ ಮುಂದಿರುವ ಒಂದು ಶಾಸನ(ಕ್ರಿ.ಶ. ೧೪೭೬) ಮಹಾನಾಯಕಾಚಾರ್ಯ ಸಿಂಗೆನಾಯಕರ ಪತ್ನಿ ಬಾಬಲಿನಾಯಕಿತ್ತಿಯರು

ತಮ್ಮ ಮಗಳು ದೇಮರಸಿ ದುರ್ಮರಣ ಹೊಂದಿದುದಕ್ಕೆ ಆಕೆಗೆ ಪುಣ್ಯಲೋಕವಾಗಲೆಂದು ಗೋದಾನ, ಭೂದಾನ, ಹಿರಣ್ಯದಾನ ಮೊದಲಾದ ದಾನಗಳ ಜೊತೆಗೆ ಉದಕದಾನದ ಮಹತ್ವವನ್ನು ತಿಳಿದು ಅಂಕದಖಣ ಪಡುವಲಲ್ಲಿ ಸೋಪಾನದ ಬಾವಿಯನ್ನು ನಿರ್ಮಿಸಿ ಉದಕ ದಾನ ಮಾಡಿದರೆಂದು ತಿಳಿಸಿದೆ. ಈ ರೀತಿ ಶಕವರುಷ ೧೩೬೩ನೆಯ ದುರ್ಮುಖಿ ಸಂವತ್ಸರ ಕಾರ್ತಿಕ ಬಹುಳ ೫(ಅಂದರೆ ೬ ನವೆಂಬರ್ ೧೪೭೬)ರಂದು ಬಾವಿ ಕಟ್ಟಿ ಪೂರ್ಣಗೊಳಿಸ ಲಾಯಿತು. ಈ ನಗರದ ಅಂಕದಖಣದ ಪಶ್ಚಿಮ ದಿಕ್ಕಿಗಿರುವ ಪಂಚಮಲಕಪ್ಪನ ಬಾವಿಯೇ ಈ ಶಾಸನೋಕ್ತ ಭಾವಿ. ಈ ಶಾಸನದಲ್ಲಿ ಈ ಭಾವಿಯ ಉಪಯುಕ್ತತೆಯ ಬಗೆಗೆ ಹೀಗೆ ಹೇಳಲಾಗಿದೆ.

೨೦. ... ಜಲಂ ಭುವನಮಿತ್ಯಾ

೨೧. ಹುರ್ಜ್ಜಲಂ ಜೀನಮುಚ್ಯತೇತ್ಸಮಾಜ್ಜಲಪ್ರದಾತಾ ಧರ್ಮದಾಯಕಃದೀನಾ

೨೨. ಬಹುಜೀವಂತಿ ನಾನ್ಯೇನಹಿತಂ... ಕ್ಷಣ ಮೇಕಂ ನಜೀ

೨೩. ವತಿ...॥

ಹೀಗೆ ಹೇಳುವುದರ ಮೂಲಕ ಜೀವ ಧರಿಸುವುದಕ್ಕೆ ನೀರು ಎಷ್ಟು ಮಹತ್ವದ್ದೆಂದು ವರ್ಣಿಸಿ ಉದಕ ದಾನದ ಶ್ರೇಷ್ಠತೆಯನ್ನು ಒತ್ತಿ ಹೇಳಲಾಗಿದೆ.

ಈ ಬಾವಿಯ ವಾಸ್ತು ಮತ್ತು ಮೂರ್ತಿಶಿಲ್ಪದ ಬಗೆಗೆ ಅಧ್ಯಯನ ಮಾಡಿದ ಡಾ. ಅ. ಸುಂದರ ಅವರು ಇದರ ಗಮನಾರ್ಹ ಅಂಶಗಳನ್ನು ಗುರುತಿಸುತ್ತ 'ಈ ಭಾವಿಯ ಮೇಲ್ಭಾಗದ ಕಟ್ಟಡವು ಆಯತಾಕಾರ ವಿನ್ಯಾಸದಲ್ಲಿದ್ದು ಪೂರ್ವ ಬದಿಯಿಂದ ಕೆಳಗೆ ನೀರಿನ ಮಟ್ಟಕ್ಕೆ ಹೋಗಲು ಮೆಟ್ಟಿಲುಗಳಿವೆ. ಮೆಟ್ಟಿಲು ಭಾಗದ ಉತ್ತರಾರ್ಧದ ಕೆಳಗೆ ಭಾವಿ ನೀರಿಗೆ ಪ್ರವೇಶದ್ವಾರವು ಇದರ ಮೇಲೆ ಒಂದಂತಸ್ತಿನ ಕಟ್ಟಡವಿದೆ. ಈ ಅಂತಸ್ತಿನ ಮುಂಭಾಗವು ತೆರೆದ ಅಂಕಣ ಅಂದರೆ ಮೊಗಸಾಲೆ, ಮೊಗಸಾಲೆಯಿಂದ ಪಡಸಾಲೆಗೆ ಹೋಗಲು ಪ್ರವೇಶದ್ವಾರವಿದೆ. ಪಡಸಾಲೆಯ ಎಡಬದಿಯ ಅಂಕಣಕ್ಕೆ ಅಡ್ಡಲಾಗಿ ಗೋಡೆ ಇದ್ದು ಈ ಅಂಕಣಕ್ಕೆ ಹೋಗಲು ಪ್ರವೇಶದ್ವಾರವಿದೆ. ಪಡಸಾಲೆಯ ಹಿಂಬದಿಯಲ್ಲಿ ಬಾವಿ. ಇದನ್ನು ನೋಡಲು ಗೋಡೆಯ ಅಕ್ಕಪಕ್ಕದಲ್ಲಿ ಜಾಲಂಧ್ರವುಳ್ಳ ಕಮಾನಿನ ಕಿಟಕಿಗಳಿವೆ. ಮೊಗಸಾಲೆಯ ಎಡಬಲ ಬದಿ ಅಂಕಣಗಳಲ್ಲಿ ಒಂದೊಂದು ಶಿವಲಿಂಗಗಳಿವೆ. ಈ ಅಂತಸ್ತಿನ ನೆಲದ ಮಟ್ಟಕ್ಕೆ ಮೆಟ್ಟಿಲುಗಳ ಇಕ್ಕೆಲಗಳಲ್ಲಿ ಒಬ್ಬರು ಸುಲಭವಾಗಿ ನಡೆದು ಈ ಅಂತಸ್ತಿಗೆ ಬರಲು ಕಟ್ಟೆಗಳಿವೆ. ಈ ಕಟ್ಟೆಗಳ ಆರಂಭದಲ್ಲಿ ಎದುರುಬದುರಿನ ಗೋಡೆಯಲ್ಲಿ ಒಂದೊಂದು ದೇವಕೋಷ್ಠವಿದೆ. ಒಂದರಲ್ಲಿ ನಾಗಮಂಡಲ, ಮತ್ತೊಂದರಲ್ಲಿ

ಆಂಜನೇಯನ ವಿಗ್ರಹಗಳಿವೆ. ಮೊಗಸಾಲೆಯ ಛತ್ತಿನಲ್ಲಿ ಅರಳಿದ ೧೬ ಎಸಳಿನ ಕಮಲಪುಷ್ಪದ ಒಂದು ಭವ್ಯ ಶಿಲ್ಪವು ನೋಡುಗರ ಮನವನ್ನು ಸೆಳೆಯುತ್ತದೆ.

ಈ ಬಾವಿಯಲ್ಲಿಯ ಎರಡು ದ್ವಾರಬಂಧಗಳು ಮತ್ತು ಪಡಸಾಲೆಯ ಮಾಡಿನಲ್ಲಿಯ ನಾಲ್ಕು ಜೋಡಿ ಉಬ್ಬುಶಿಲ್ಪಗಳು ಮತ್ತು ವಿಪುಲ ಗಂಟುಗಳ ಸುಂದರ ಸುಳುಹು ಹೊಳಹುಗಳಿಂದ ಕೂಡಿದ ನಾಗಬಂಧ ವಿಶೇಷವಾಗಿದೆ. ಪಡಸಾಲೆಗೆ ಹೋಗುವ ದ್ವಾರಬಂಧದಲ್ಲಿ ಎರಡು ರತ್ನ, ವಿಶಿಷ್ಟ ಸ್ತಂಭ ಮತ್ತು ಎರಡು ಲತಾಶಾಖೆಗಳಿವೆ. ಸ್ತಂಭಶಾಖೆಯ ಬುಡದಲ್ಲಿ ಒಂದೊಂದು ಶೈವ ದ್ವಾರಪಾಲಕರುಳ್ಳ ತುದಿಯಲ್ಲಿ ಅತಿ ದೊಡ್ಡ ಸ್ಪಷ್ಟ ಸಿಂಹಲಲಾಟವುಳ್ಳ ಕಮಾನಿನ ಗೂಡು, ದ್ವಾರಪಾಲಕರ ಒಂದು ಬದಿಯಲ್ಲಿ ನೃತ್ಯಗಾತಿಯರು, ದ್ವಾರಬಂಧದ ಮೇಲಿನ ಮಾಲೆಗಳಲ್ಲಿ ಎದ್ದು ತೋರುವ ಕುಳಿತ ಸಿಂಹದ ಶಿಲ್ಪ. ಇವುಗಳ ಅಂತರದಲ್ಲಿ ವಾದ್ಯಮೇಳದೊಂದಿಗೆ ನೃತ್ಯಗಾತಿಯರು ಕೋತದ ಅಡ್ಡಪಟ್ಟಿಕೆಯ ಮೇಲೆ ಕಂಗುರಗಳ ಸಾಲು ವಿಶೇಷವೆಂದೇ ಹೇಳಬೇಕು. ಲಲಾಟಬಿಂಬದಲ್ಲಿ ಬಹುಶಃ ಸಿಂಹ ವಾಹನದ ಜೊತೆಗೆ ವಾಮಲಲಿತಾ ಸದನಲ್ಲಿಯ ದೇವಿಯ ಬಿಂಬವಿದೆ. ಪಡಸಾಲೆಯ ಎಡಬದಿಯ ಅಂಕಣದ ದ್ವಾರಬಂಧವು ದ್ವಾರಪಾಲಕರಿಲ್ಲದ, ಆದರೆ ಸಾಮಾನ್ಯವಾಗಿ ಪ್ರಾಚೀನ ದೇವಾಲಯದ ಸರಳ ದ್ವಾರಬಂಧದಂತೆಯೆ ಇದೆ. ಹಾಗೆಯೆ ಛತ್ತಿನಲ್ಲಿ ಪ್ರೇಮಸಲ್ಲಾಪದಲ್ಲಿ ತೊಡಗಿರುವ ದಂಪತಿಗಳ ಎರಡು ಚಿತ್ರಗಳು, ಒಬ್ಬ ಪ್ರತಿಷ್ಠಿತ ವ್ಯಕ್ತಿಯ ಮುಂದೆ ವಾದ್ಯ ನುಡಿಸುತ್ತಿರುವ ವ್ಯಕ್ತಿ, ನಾಲ್ಕು ಕಾಲುಗಳನ್ನೇ ವಿವಿಧ ಭಂಗಿಯಲ್ಲಿ ವ್ಯಕ್ತಪಡಿಸಿದ ಇಬ್ಬರು ಪುರುಷರು, ಒಬ್ಬ ಸ್ತ್ರೀಯ ಕುಣಿತ ಹಾಗೂ ಫಲಪುಷ್ಪ ಫಲಕಗಳು ವಿಜಯನಗರ ಶೈಲಿಯಲ್ಲಿವೆ. ಕರ್ನಾಟಕದ ನಾನಾ ಭಾಗಗಳ ವಿಜಯನಗರ ಶಿಲ್ಪ ಸಂಪತ್ತಿನಲ್ಲಿ ವೈವಿಧ್ಯಮಯವಾದ ಸುಲಭವಾಗಿ ಬಿಡಿಸಲಾಗದ ನಾಗಮಂಡಲ ಮತ್ತು ನಾಗ ವಿಶೇಷ ಗಮನಾರ್ಹ. ಆದರೆ ಈ ಬಾವಿಯ ಪಡಸಾಲೆ ಛತ್ತಿನ ದೊಡ್ಡ ಪ್ರಮಾಣದ ಕಗ್ಗಂಟಷ್ಟೇ ಅಲ್ಲ, ಬಿಡಿಸಲಸಾಧ್ಯವೇನೋ ಎಂಬಂತಿರುವ ಬ್ರಹ್ಮಗಂಟಿನ ಅತಿ ಉದ್ದದ ಏಳು ಹೆಡೆಯ ಘಟಸರ್ಪದ ಮಂಡಲ. ಮಧ್ಯದಲ್ಲಿ ಬಿಚ್ಚಿದ ತನ್ನ ಏಳು ಹೆಡೆಯನ್ನಿಟ್ಟು ಹೊರಬದಿಯಲ್ಲಿ ಸುರುಳಿ ಒಳಬದಿಯಲ್ಲಿ ಚೌಕೋನ ಮತ್ತು ಪವಿತ್ರ ಗಂಟುಗಳು ಬರುವಂತೆ ತನ್ನ ಉದ್ದ ದೇಹವನ್ನು ಒಂದು ವ್ಯೂಹವನ್ನಾಗಿ ಮಾಡಿಕೊಂಡಿದೆ.

ಇದರ ಶೈಲಿ ಹಾಗೂ ಕಾಲಮಾನವನ್ನು ಪರಿಚಯಿಸುತ್ತ ನೋಡಿದಲ್ಲಿ ಪಂಚಮಲಕಪ್ಪನ ಬಾವಿಯು ಸಾರವತ್ತಾಗಿ ವಿಜಯನಗರ ಶೈಲಿಯಲ್ಲಿದೆ. ಅಷ್ಟೇ ಅಲ್ಲ; ಈ ಶೈಲಿಯಲ್ಲಿ ಭಾರತೀಯ ಇಸ್ಲಾಂ ಶೈಲಿಯ ಅಲ್ಪಪ್ರಮಾಣದ ಪ್ರಭಾವವನ್ನೂ ಕಾಣಬಹುದು. ಪಡಸಾಲೆಯ ದ್ವಾರಬಂಧದ ಮೇಲಿನ ಕಂಗುರಪಟ್ಟಿಕೆ, ದ್ವಾರಪಾಲಕ ಕಮಾನಿನ ಗೂಡು, ಪಡಸಾಲೆಯಲ್ಲಿನ ಕಮಾನಿನ

ಕಿಟಕಿ ಹಾಗೂ ನಿರ್ಮಾಣದಲ್ಲಿ ವಜ್ರಗಾರೆಯ ಉಪಯೋಗ ಇವು ಭಾರತೀಯ-ಇಸ್ಲಾಂ ವಾಸ್ತುಶಿಲ್ಪದ ಲಕ್ಷಣಗಳು. ಆದ್ದರಿಂದ ಈ ಬಾವಿಯು ಇವೆರಡು ಶೈಲಿಗಳ ಹದ ಮಿಶ್ರಣದ ಒಂದು ಉತ್ತಮ ನಿರ್ದಶನ ಎಂದಿರುವರು. 'ಈ ಶೈಲಿ ಒಂದು ಪ್ರಭೇದವಾದ' ಆದಿಲ್‌ಶಾಹಿ ಶೈಲಿಯದೆಂದು ತರ್ಕಿಸಬಹುದು. ಇದರಲ್ಲಿ ವಿಜಯನಗರ ಶೈಲಿಯು ಈ ಶೈಲಿಯ ಮಧ್ಯ ಮತ್ತು ಅಂತ್ಯ ಹಂತದ ಕಾಲದ್ದೆಂದು ಮೇಲೆ ಗುರುತಿಸಿದ ಕೆಲವು ವಿಶಿಷ್ಟ ಲಕ್ಷಣಗಳಿಂದ ಹೇಳಬಹುದು. ಆದ್ದರಿಂದ ಈ ಬಾವಿಯು ೧೬ನೆಯ ಶತಮಾನದ್ದೆಂದು ಅಭಿಪ್ರಾಯಪಟ್ಟಿರುವ ಡಾ. ಸುಂದರ ಅವರು ಇದಕ್ಕೆ ಒಂದು ವಿರೋಧವನ್ನು ಸೂಚಿಸುತ್ತ 'ಶಹಬಝಾರ ಬಸವಣ್ಣನ ಗುಡಿಯ ಮುಂದಿನ ಶಾಸನ ಇದರ ನಿರ್ಮಾಣದ ಕಾಲ ಕ್ರಿ.ಶ. ೧೪೭೬ ಎಂದು, ಸೋಪಾನದ ಭಾವಿ ಇರುವ ಸ್ಥಳವನ್ನು ಅಂಕದಬಣದ ಪಡುವದಿಕ್ಕು' ಎಂದು ಸರಿಯಾಗಿ ನಿರ್ದೇಶಿಸಿದೆ. ಅಂಕದಬಣದ ಪಶ್ಚಿಮಕ್ಕೆ ಇದೊಂದೇ ಸೋಪಾನದ ಬಾವಿಯಿದೆ. ಆದರೆ ಈ ಬಾವಿ ಎಂಬುದು ಈ ಸಂದರ್ಭದಲ್ಲಿ ನಮ್ಮ ಗಮನ ಸೆಳೆಯುವುದೆಂದು ಸೂಚಿಸುತ್ತಾರೆ. ಹಂಡೆ ಬಾಲದ ಹನುಮಪ್ಪನಾಯಕನಿಗೆ ಐದು ಮಕ್ಕಳಿದ್ದು ಇಬ್ಬರಿಗೆ ಹಿರೇಮಲ್ಲಪ್ಪ, ಚಿಕ್ಕಮಲ್ಲಪ್ಪರೆಂಬ ಹೆಸರಿತ್ತು. ಈ ಬಾವಿಗೆ ಪ್ರಚಲಿತ ಹೆಸರು, ಈ ಐದು ಜನ ಸಹೋದರರ ಹೆಸರನ್ನೇ ಸೂಚಿಸುತ್ತದೆಯೆಂದು ಊಹಿಸಬಹುದು. ಬಹುಶಃ ಹಿರೇ ಮತ್ತು ಚಿಕ್ಕಮಲ್ಲಪ್ಪನಾಯಕರು ಈ ಬಾವಿಯ ನಿರ್ಮಾಣಕ್ಕೆ ಕಾರಣರಾಗಿ ಉಳಿದ ೩ ಜನ ಅಣ್ಣತಮ್ಮಂದಿರು ಈ ಕಾರ್ಯದೊಡನೆ ಸೇರಿದ್ದರಿಂದ ಈ ಬಾವಿಗೆ ರೂಢಿಯಲ್ಲಿ 'ಪಂಚಮಲಕಪ್ಪನ ಬಾವಿ' ಎಂದು ಹೆಸರು ಬಂದಿರಬಹುದು. ಇದು ನಿಜವಾದಲ್ಲಿ ಹಂಡೆ ಮನೆತನದ ಮೇಲೆ ಹೊಸ ಬೆಳಕು ಬೀಳುತ್ತದೆ. ಶಾಸನವನ್ನು ಮತ್ತೆ ಕೂಲಂಕಷ ಪರೀಕ್ಷೆಗೆ ಒಳಪಡಿಸಬೇಕಾಗುತ್ತದೆ. ಪಂಚ ಸಹೋದರರು ಕಟ್ಟಿಸಿದ ಈ ಬಾವಿಗೂ ದುರ್ಮರಣ ಹೊಂದಿದ ದೇವರಸಿಗೂ ಸಂಬಂಧವೇನೆಂಬುದನ್ನು ಶೋಧಿಸಬೇಕಾಗಿದೆ ಎಂದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ.

**ಕೋಟೆ-ವಾಸ್ತುಕಲೆ**

ಸ್ವರಕ್ಷಣೆಯ ದೃಷ್ಟಿಯಿಂದ ಯುದ್ಧತಂತ್ರಗಳಲ್ಲಿ ಒಂದಾಗಿ ಬೆಳೆದು ಬಂದ ಕೋಟೆ ಅಥವಾ ದುರ್ಗ, ಆಕ್ರಮಣಗಾರರಿಗೆ ಆಕ್ರಮಣಗಳ ವಿಧಾನವನ್ನು ಹೇಳಿಕೊಟ್ಟಿತು.[೨೪] ಅದಕ್ಕಾಗಿಯೇ ಕಾಮಂಧಕನು "ಭದ್ರವಾದ ಕೋಟೆಯಿಲ್ಲದ ರಾಜನು ಬಿರುಗಾಳಿಯ ಮುಂದಿನ ಮೋಡದ ತುಂಡುಗಳಿಗೆ ಸಮಾನನೆಂದು" ಹೇಳುತ್ತಾನೆ. ದುರ್ಗವು ರಾಜ್ಯದ ಸಪ್ತಾಂಗಗಳಲ್ಲಿ ಒಂದು ಎಂದು ತಿಳಿಯಲಾಗಿತ್ತು.[೨೫] ರಕ್ಷಣಾದೃಷ್ಟಿಯಿಂದ ಇಷ್ಟೊಂದು ಮಹತ್ವ ಪಡೆದ ಕೋಟೆಯನ್ನು ಕಟ್ಟಲು ಆಯ್ಕೆ ಮಾಡಿಕೊಡ ಸ್ಥಳಕ್ಕೆ ಹೆಚ್ಚಿನ ಮಹತ್ವ ನೀಡಲಾಗುತ್ತಿತ್ತು. ಶತ್ರುಪಡೆ ಸಂಪೂರ್ಣವಾಗಿ

ಹತ್ತಿರ ಬರದಂತೆ ಕೋಟೆಗಳನ್ನು ಕಡಿದಾದ ಬೆಟ್ಟದ ಮೇಲೆ, ಕಾಡಿನ ಮಧ್ಯದಲ್ಲಿ ಮತ್ತು ನದಿಯ ದಂಡೆಯ ಮೇಲೆ ಕಟ್ಟಲಾಗಿದೆ. ರಕ್ಷಣಾ ದೃಷ್ಟಿಯಿಂದ ಉತ್ತರದತ್ತ ನಡೆದು ಕೆಲವು ಪ್ರದೇಶಗಳನ್ನು ವಶಪಡಿಸಿಕೊಂಡಂತೆ ಈ ಬಳ್ಳಾರಿ ಕೋಟೆಯನ್ನು ಕೈವಶ ಮಾಡಿಕೊಂಡಿದ್ದರು. ಕ್ರಿಶ. ೧೭೯೨ರವರೆಗೆ, ನಂತರ ಹೈದ್ರಾಬಾದ್ ನಿಜಾಮ ಮತ್ತು ಈಸ್ಟ್ ಇಂಡಿಯಾ ಕಂಪನಿಗೆ ಹಸ್ತಾಂತರವಾಗಿತ್ತು. ಇವರ ಕಾಲದಲ್ಲಿ ಸಹ ಕೋಟೆಯನ್ನು ಹಂಡೆ ಅರಸರು ಅವರ ಅಧೀನರಾಗಿ ಬಳ್ಳಾರಿಯ ಕೋಟೆಯನ್ನು ಆಳುತ್ತಿದ್ದರು.

ಬಳ್ಳಾರಿಯ ಕೋಟೆಯನ್ನು ಹದಿನಾರನೇ ಶತಮಾನದ ಆದಿ ಭಾಗದಲ್ಲಿ ಆಳ್ವಿಕೆ ನಡೆಸಿದ ಹಂಡೆ ಬಾಲದ ಹನುಮಪ್ಪನಾಯಕನು ಈ ಕೋಟೆಯನ್ನು ನಿರ್ಮಾಣ ಮಾಡಿದ್ದಾನೆ. ಮುಂದೆ ತೆಕ್ಕಲಕೋಟೆಯಲ್ಲಿ ಇದೇ ತರಹದ ಕೋಟೆಯನ್ನು ನಿರ್ಮಿಸಿದ್ದು ಕಂಡುಬರುತ್ತದೆ. ಈ ಕೋಟೆಯನ್ನು ಆತನ ಮಗನಾದ ಚಿಕ್ಕರಾಮಪ್ಪನಾಯಕನು ೧೭೨೬ರಿಂದ ೧೭೩೦ರರವರೆಗೆ ಆಳ್ವಿಕೆ ನಡೆಸುವ ಸಂದರ್ಭದಲ್ಲಿ ಕೆಳಗಿನ ಕೋಟೆಯನ್ನು ನಿರ್ಮಾಣ ಮಾಡಿರುತ್ತಾನೆ. ನಂತರದಲ್ಲಿ ೧೭೩೮ರಿಂದ ೧೭೬೪ರವರೆಗೆ ಆಳ್ವಿಕೆ ನಡೆಸಿದ ಹಂಡೆ ಹಿರೇರಾಮಪ್ಪನಾಯಕನು ಶಿಥಿಲಗೊಂಡಿದ್ದ ಕೋಟೆಯನ್ನು ದುರಸ್ತಿ ಕಾರ್ಯ ಮಾಡಿಸಿ ಕೋಟೆಯ ಮೇಲೆ ನೀರಿನ ಹೊಂಡಗಳನ್ನು ನಿರ್ಮಾಣ ಮಾಡಿದನು. ಈತನ ತರುವಾಯ ೧೭೬೯ರಲ್ಲಿ ಹಂಡೆ ದೊಡ್ಡಪ್ಪನ ಅವಧಿಯಲ್ಲಿ ಈ ಕೋಟೆಯನ್ನು ಹೈದರಾಲಿ ವಶಪಡಿಸಿಕೊಳ್ಳುತ್ತಾನೆ. ಮುಂದೆ ಹೈದರಾಲಿಯು ಫ್ರೆಂಚ್ ಇಂಜಿನಿಯರ್ ಸಹಾಯದಿಂದ ಈ ಕೋಟೆಯನ್ನು ಪುನರ್ ನಿರ್ಮಾಣ ಮಾಡುತ್ತಾನೆ. ಇವನ ಮರಣದ ನಂತರ ಈ ಕೋಟೆಯು ಮಗನಾದ ಟಿಪ್ಪುಸುಲ್ತಾನನ ವಶವಾಗುತ್ತದೆ. ಈ ಕೋಟೆಯನ್ನು ಮದ್ದು ಗುಂಡುಗಳ ಬಳಕೆಗಾಗಿ ಉಪಯೋಗಿಸಿಕೊಳ್ಳುತ್ತಾನೆ. ಟಿಪ್ಪು ಸುಲ್ತಾನ ೧೭೯೯ರ ತರುವಾಯ ಈ ಕೋಟೆಯು ಮದ್ರಾಸ್ ಪ್ರಾಂತ್ಯದ ವಶವಾಗುತ್ತದೆ. ಹೀಗೆ ಅನೇಕ ಅರಸರು ಮತ್ತು ಸುಲ್ತಾನರ ಆಳ್ವಿಕೆಯಲ್ಲಿ ಈ ಕೋಟೆಯು ಆಳ್ವಿಕೆಗೆ ಒಳಪಟ್ಟಿತ್ತು.

ಬಳ್ಳಾರಿಯ ಮಧ್ಯಭಾಗವೆಂಬಂತೆ ಕಂಡುಬರುವ ಬಳ್ಳಾರಿಯ ಬೆಣಚುಕಲ್ಲಿನ ಬಂಡೆಯುಳ್ಳ ದೊಡ್ಡ ಬೆಟ್ಟವನ್ನು ಸುತ್ತುವರಿದುಕೊಂಡು ಕಟ್ಟಲ್ಪಟ್ಟ ಕೋಟೆ ನಾಲ್ಕು ಸುತ್ತಿನ ಗೋಡೆಯುಳ್ಳ ಕೋಟೆಯಾಗಿದೆ. ಹೊರಕೋಟೆ ಅಥವಾ ಮೊದಲನೇ ಕೋಟೆ ಬೆಟ್ಟದ ಪೂರ್ವಕ್ಕಿರುವ ಸಮತಟ್ಟಾದ ಪ್ರದೇಶವನ್ನು ಸುತ್ತುವರಿದಂತೆ ಬೆಟ್ಟವನ್ನು ಸುತ್ತುವರಿದಿದೆ. ಇನ್ನುಳಿದ ಮೂರು ಸುತ್ತುಗಳು ಬೆಟ್ಟದ ಮೇಲೆ ಬರುತ್ತವೆ. ಹೊರಕೋಟೆಯನ್ನು ದಪ್ಪಕಲ್ಲಿನಿಂದ ಕಟ್ಟಲ್ಪಟ್ಟಿದೆ. ಅನೇಕ ಕಡೆಗಳಲ್ಲಿ ಚಿಕ್ಕ ಚಿಕ್ಕ ಮಾದರಿ ಕಲ್ಲುಗಳಿಂದ ದುರಸ್ತಿಗೊಳಿಸಿದೆ. ಕೋಟೆಯಲ್ಲಿ ಚೌಕಾಕಾರ ಮತ್ತು ವರ್ತುಲಾಕಾರದ ಕೊತ್ತಳಗಳಿರುವುವು. ಗೋಡೆಯಲ್ಲಿ ಬಂದೂಕಿನ ಕಿಂಡಿಗಳಿವೆ.

ಕೊತ್ತಳಗಳ ಮೇಲಿನ ಇಟ್ಟಿಗೆ ಮತ್ತು ಗಾರೆಯ ದಪ್ಪವಾದ ಕೈಪಿಡಿಗೋಡೆಯಲ್ಲಿ ತೋಪುಗಳಿಗಾಗಿ ಬಿಟ್ಟಿರುವ ಸಂದುಗಳಿವೆ. ರೈಲ್ವೆ ಹಳಿಯ ಹತ್ತಿರದ ಮೇಲು ಸೇತುವೆ ಹತ್ತಿರದ ಚೌಕಾಕಾರದ ಕೊತ್ತಳದ ಕಲ್ಲಿನ ಮೇಲೆ ಸರ್ಪದ ಬಾಲ ಹಿಡಿದಂತೆ ಕೆತ್ತಲ್ಪಟ್ಟ ಮಂಗನ ಶಿಲ್ಪವಿರುವುದು. ಇದೇ ಕೊತ್ತಳದ ಹತ್ತಿರದ ಕೋಟೆಗೋಡೆಯ ಮೇಲೆ ಕಾಳಿಂಗ ಮರ್ದನ ಕೃಷ್ಣ ಮತ್ತು ಎರಡು ಹುಳಿಗಳ ಶಿಲ್ಪಗಳು ಕೆತ್ತಲ್ಪಟ್ಟಿವೆ. ಪೂರ್ವಕ್ಕಿರುವ ದ್ವಾರವನ್ನು ಕಂಬ-ಚಾವಣಿಗಳಿಂದ ಕಟ್ಟಲಾಗಿದೆ. ಈ ದ್ವಾರದ ಕದಗಳನ್ನು ಮರದಿಂದ ಮಾಡಲ್ಪಟ್ಟಿದ್ದು ಇಂದಿಗೂ ಸಹ ಸುಸ್ಥಿತಿಯಲ್ಲಿವೆ.

ಹೊರಕೋಟೆಯ ಆವರಣದ ವಾಯವ್ಯ ಭಾಗದಲ್ಲಿ ಹಂಡೆ ಅರಸರು ಕಟ್ಟಿಸಿದ ಕೋಟೆ ಮಲ್ಲೇಶ್ವರ ದೇವಾಲಯವಿದೆ. ಈ ದೇವಾಲಯದ ಪ್ರಾಕಾರದ ಗೋಡೆಯ ಒಳ ಬದಿಯಲ್ಲಿ ಅರವತ್ತುಮೂರು ಪುರಾತನ ಶಿವಶರಣರ ಮತ್ತು ಶಿವಲೀಲೆಯ ಉಬ್ಬುಶಿಲ್ಪಗಳಿವೆ. ಈ ದೇವಾಲಯದ ಹತ್ತಿರ ಕೋಟೆ ಗೋಡೆಗೆ ಹತ್ತಿಕೊಂಡು ದೊಡ್ಡ ಇಳಿಮೋರೆಯಿದೆ. ಗೋಡೆಯ ಮೇಲೆ ತೋಪು, ಕುದುರೆಗಳನ್ನು ಒಯ್ಯುವುದಕ್ಕಾಗಿ ಇದನ್ನು ಬಳಸಲಾಗುತ್ತಿತ್ತೆಂದು ತೋರುತ್ತದೆ.

ಕೋಟೆಗೆ ಹತ್ತಲು ಬೆಟ್ಟದ ಆಗ್ನೇಯ ಭಾಗದಲ್ಲಿ ಮೆಟ್ಟಿಲುಗಳನ್ನು ಮಾಡಲಾಗಿದೆ. ಈ ದಾರಿಯ ಹತ್ತಿರದಲ್ಲಿಯೇ ಪೂರ್ವಕ್ಕೆ ಮುಖ ಮಾಡಿ ಕಟ್ಟಲಾದ ಮಲ್ಲೇಶ್ವರ ಅಥವಾ ಬಸವಣ್ಣನ ದೇವಾಲಯವಿರುವುದು. ಗರ್ಭಗೃಹದಲ್ಲಿ ನಂದಿಶಿಲ್ಪವಿದ್ದರೆ, ಸಭಾಮಂಟಪದ ಕಂಬಗಳ ಮೇಲೆ ಭಕ್ತನ ಶಿಲ್ಪವಿದ್ದು ಇದು ಬಹುಶಃ ಹಂಡೆ ಅರಸರಲ್ಲಿ ಒಬ್ಬನದಾಗಿರಬೇಕು. ಇಂತಹುದೇ ಶಿಲ್ಪ ದೇವಾಲಯದ ಮುಂದಿನ ದೀಪಕಂಬದ ಮೇಲೆ ಇರುವುದು. ಈ ದೇವಾಲಯದ ಪೂರ್ವದಲ್ಲಿರುವ ಮೆಟ್ಟಿಲುಗಳು ಉತ್ತರಕ್ಕೆ ಕೋಟೆ ಮೇಲಕ್ಕೆ ಹೋಗುತ್ತಾ ಎರಡನೇ ಕೋಟೆಯ ದಕ್ಷಿಣ ದ್ವಾರವನ್ನು ತಲುಪುತ್ತವೆ. ಮೊದಲ ಎದುರಿನ ಗೋಡೆಯಲ್ಲಿ ದಕ್ಷಿಣ ಮುಖವಾದ ಕಮಾನಿನ ದ್ವಾರವಿದೆ. ಇದನ್ನು ದಾಟಿ ಬಲಕ್ಕೆ ತಿರುಗಿದಾಗ ಪಶ್ಚಿಮಾಭಿಮುಖವಾದ ದೊಡ್ಡ ದ್ವಾರವಿದೆ. ಇದನ್ನು ಕಂಬ-ಚಾವಣಿಗಳಿಂದ ದ್ವಾರವನ್ನು ಆಲಂಕಾರಿಕವಾಗಿ ಕಮಾನಿನ ರೀತಿಯಲ್ಲಿ ಮಾಡಲಾಗಿದೆ. ತೊಲೆಗಳು ಪುಷ್ಪಬೋದಿಗೆಗಳ ಮೇಲೆ ಪ್ರವೇಶದ ಮಗ್ಗುಲುಗಳಲ್ಲಿರುವ ಕೋಟೆಗಳ ಮೇಲೆ ಎರಡು ಅಷ್ಟಕೋನದ ಕಂಬಗಳಿವೆ. ಈ ದಕ್ಷಿಣ ಕೋಟೆಯ ಹೊರಗೋಡೆಯಲ್ಲಿ ಮುಂದೆ ಬಂದ ಬಾಲ್ಕನಿ(ಉಪ್ಪರಿಗೆ) ಇರುವುದು. ನಂತರ ಮೆಟ್ಟಲುಗಳನ್ನು ಹತ್ತುತ್ತಾ ಮುಂದೆ ನಡೆದಾಗ ಎರಡನೇ ಕೋಟೆಯಲ್ಲಿ ಒಂದು ವಿಶಿಷ್ಟವಾಗಿ ಕಟ್ಟಲಾದ ಕೊತ್ತಳವಿದೆ(ಬುರುಜು). ವೃತ್ತಾಕಾರದ ಈ ಕೊತ್ತಳದ ಮಧ್ಯದಲ್ಲಿ ದಪ್ಪವಾದ ಕಂಬವಿದೆ. ಎರಡು ಚೌಕ ಮತ್ತು ಎರಡು ಅಷ್ಟಕೋನ ಭಾಗಗಳ ಕಂಬದ ಮೇಲೆ ವೃತ್ತಾಕಾರದ ತಲೆಭಾಗವಿರುವುದು. ಈ ಕಂಬದ ಮೇಲೆ ಎಂಟು ದಿಕ್ಕಿಗೆ ಚಾಚಿದ ಎಂಟು ತೊಲೆಗಳಿವೆ(ಚಾವಣಿ). ತೊಲೆಗಳ ಮತ್ತೊಂದು

ತುದಿಯಲ್ಲಿ ವೃತ್ತಾಕಾರದ ಗೋಡೆಯಲ್ಲಿ ಅರೆಗಂಬಗಳಿವೆ. ಕೊತ್ತಳವನ್ನು ಪ್ರವೇಶಿಸಲು ದ್ವಾರವಿದ್ದು ಗೋಡೆಯಲ್ಲಿ ಬಂದೂಕಿನ ಕಿಂಡಿಗಳನ್ನು ಮಾಡಲಾಗಿದೆ.

ಮೂರನೆ ಕೋಟೆಗೆ ಪಶ್ಚಿಮ ಮುಖ ಮಾಡಿ ದೊಡ್ಡದಾದ ದ್ವಾರಬಾಗಿಲಿದೆ. ಇದರಲ್ಲಿ ಕಂಬ, ತೊಲೆ, ಪುಷ್ಪ, ಸೂರ್ಯ, ಚಂದ್ರರ ಶಿಲ್ಪಗಳಿವೆ. ದ್ವಾರದ ಮುಂದಿರುವ ದೊಡ್ಡ ವರ್ತುಲಾಕಾರದ ಕೊತ್ತಳವು ಬಾಗಿಲವನ್ನು ಮರೆಮಾಡಿದೆ. ಪ್ರವೇಶದ ಬಲಭಾಗದ ಕಟ್ಟೆಯ ಮೇಲೆ ಎರಡು ಮತ್ತು ಎಡಭಾಗದ ಕಟ್ಟೆಯ ಮೇಲೆ ಎರಡು ಹೀಗೆ ಒಟ್ಟು ನಾಲ್ಕು ಕಂಬಗಳಿರುವುವು. ಈ ಕಂಬಗಳು ಚೌಕಾಗಿದ್ದು ಅಷ್ಟಪೈಲು ಕಾಂಡಗಳನ್ನು ಹೊಂದಿವೆ.

ಮೂರನೇ ಕೋಟೆಗೆ ಒಂದು ದೊಡ್ಡ ಕೊತ್ತಳವಿದ್ದು ಅದನ್ನು ಪ್ರವೇಶಿಸಲು ದ್ವಾರವಿದೆ. ಕೋಟೆಯ ಮೇಲೆ ತೋಪನ್ನು ಸಾಗಿಸುವುದಕ್ಕಾಗಿ ಈ ಕೊತ್ತಳದ ಒಳಭಾಗದಲ್ಲಿ ಎರಡು ಇಳಿಮೊರೆಗಳಿವೆ(ಮೆಟ್ಟಿಲು). ಕೋಟೆಯ ಪಶ್ಚಿಮ ಭಾಗದಲ್ಲಿ ಮಾತ್ರ ಮೂರನೆಯ ಕೋಟೆಯ ನಂತರ ಮತ್ತೊಂದು ಕೋಟೆಯಿದೆ. ಈ ಕೋಟೆಗಳ ಮಧ್ಯದಲ್ಲಿ ಒಂದು ದೊಡ್ಡ ಬಂಡೆಯ ಆಸರೆಯ ಅಡಿಯಲ್ಲಿ ಹನುಮಂತ ಮತ್ತು ಸರ್ಪಗಳ ಶಿಲ್ಪಗಳು ಬಂಡೆಯ ಮೇಲೆ ಕೆತ್ತಲ್ಪಟ್ಟಿವೆ. ಮತ್ತೊಂದು ಕೋಟೆಯ ಒಳಗೆ ಒಂದು ದೊಡ್ಡ ನೀರಿನ ಕೊಳ ಮತ್ತು ಅದರ ದಂಡೆಯ ಮೇಲೆ ಕಂಬಗಳುಳ್ಳ ಎರಡು ದೊಡ್ಡ ಮಂಟಪಗಳಿರುವುವು. ಇವುಗಳಿಂದ ಉತ್ತರದತ್ತ ನಡೆದರೆ ಮತ್ತೊಂದು ಮಂಟಪವಿರುವುದು.

ಈ ಕೋಟೆಯ ಉತ್ತರ ಭಾಗದಲ್ಲಿ ಅಂದರೆ ಮೂರನೇ ಮತ್ತು ನಾಲ್ಕನೇ ಕೋಟೆಗೋಡೆಗಳ ಮಧ್ಯದಲ್ಲಿ ನೀರಿನ ಕೊಳಗಳಿವೆ. ಇಲ್ಲಿಯೇ ಎರಡು ದೇವಾಲಯಗಳು ಮತ್ತು ಇನ್ನೊಂದು ಇಟ್ಟಿಗೆಯಿಂದ ಕಟ್ಟಲ್ಪಟ್ಟ ಕಟ್ಟಡಗಳಿವೆ. ಇವು ಅಂದು ಸೈನಿಕರು ಗಸ್ತಿ ನಡೆಸುವ ಸಲುವಾಗಿ ಇರಲು ಮಾಡಿದ ಕಟ್ಟಡಗಳಾಗಿರಬೇಕು; ಇಲ್ಲವೇ ನಾಯಕರವುಗಳಾಗಿರಬೇಕು. ಬೆಟ್ಟದ ಮೇಲೆ ನೈಸರ್ಗಿಕವಾಗಿ ಬಂದು ಸೇರುವ ನೀರನ್ನು ಹಿಡಿದಿಡುವ ಸಲುವಾಗಿ ಈ ಕೊಳಗಳನ್ನು ಮಾಡಿ ರುವರು. ಇವು ಉದ್ದವಾಗಿದ್ದು ಆಳವಾಗಿವೆ. ಇವುಗಳ ಪಕ್ಕದಲ್ಲಿಯೇ ಎರಡು ಚಿಕ್ಕ ದೇವಾಲಯ ಗಳನ್ನು ಕಟ್ಟಿರುವರು. ವಾಸ್ತುಶೈಲಿಯ ದೃಷ್ಟಿಯಿಂದ ಈ ದೇವಾಲಯಗಳು ಕುರುಗೋಡಿನ ಸಿಂಧರ ಕಾಲಕ್ಕೆ ಸೇರಿದವುಗಳೆಂದು ಹೇಳಬಹುದು. ನಂತರದ ಕಾಲದಲ್ಲಿ ಇವುಗಳನ್ನು ಜೀರ್ಣೋದ್ಧಾರಗೊಳಿಸಲಾಗಿದೆ.

ನಾಲ್ಕನೇ ಕೋಟೆಯಲ್ಲಿ ದಕ್ಷಿಣ ಮತ್ತು ಪೂರ್ವ ದಿಕ್ಕಿಗೆ ಒಂದೊಂದರಂತೆ ದ್ವಾರಗಳಿವೆ. ಇದರ ಕಂಬ ತೊಲೆ ದ್ವಾರಗಳನ್ನು ಕಮಾನಿನಿಂದ ಆಲಂಕಾರಿಕವಾಗಿ ಕೆತ್ತಲಾಗಿದೆ. ಕೋಟೆಯಲ್ಲಿ ಅಂದು ಕಾಳು ಕಡಿ ಸಂಗ್ರಹಿಸಲು ಕಣಜಗಳನ್ನು ಕಟ್ಟಲಾಗಿದೆ ಹಾಗೂ ಇಲ್ಲಿ ದೊಡ್ಡ ದೊಡ್ಡ

ಸ್ಮಾರಕಗಳಿದ್ದು, ಇವು ವಾಸಕ್ಕಾಗಿ ಕಟ್ಟಿದಂತವುಗಳು. ಬೆಟ್ಟದ ಮೇಲಿರುವ ಕೋಟೆಯ ಕೈಪಿಡಿ ಅಂದರೆ ಕುಂಬೆ ಗೋಡೆಯನ್ನು ಇಟ್ಟಂಗಿ-ಗಾರೆಯಿಂದ ಕಟ್ಟಲಾಗಿದೆ. ಅಗಲವಾಗಿ ಕಟ್ಟಲಾದ ಈ ಕೋಟೆಯ ಹೊರಮೈಯಲ್ಲಿ ಇಳಿಜಾರಿನಂತೆ ಮಾಡಿರುವರು. ಕೋಟೆ ಗೋಡೆಗಳಿಗೆ ಅಲ್ಲಲ್ಲಿ ಹೊಂದಿಕೊಂಡು ಕಟ್ಟಲಾದ ಬುರುಜು(ಕೊತ್ತಳ)ಗಳು ಮೇಲಿನ ಉಕಂಬೆ ಗೋಡೆಯಲ್ಲಿ ತೋಪುಗಳನ್ನು ಇಡುವ ಸಲುವಾಗಿ ಬಿಟ್ಟ ಅಗಲವಾದ ಸಂದುಗಳನ್ನು ನೋಡಬಹುದು. ಕೆಲವು ಕೊತ್ತಳಗಳ ಮೇಲೆ ಗಾರೆಯಿಂದ ಕಟ್ಟಿದ ನೀರಿನ ಚಿಕ್ಕ ತೊಟ್ಟಿಗಳಿದ್ದು ಗೋಡೆಯಲ್ಲಿ ಕಾವಲುಗಾರನ ಕೋಣೆ ಮತ್ತು ಗೂಡುಗಳಿವೆ. ಇಲ್ಲಿರುವ ಕೆಲವು ನೀರಿನ ತೊಟ್ಟಿಗಳನ್ನು ಜ್ಯಾಮಿತಿ ವಿನ್ಯಾಸದಲ್ಲಿ ರಚಿಸಲಾಗಿದೆ. ಮೇಲಿಂದ ಮೇಲೆ ಬೇರೆ ಬೇರೆಯವರ ಕೈವಶಕ್ಕೆ ಕೋಟೆ ಸಿಲುಕಿದ್ದರಿಂದ ಅವರು ಆಗಾಗ ದುರಸ್ತಿ ಕಾರ್ಯಕೈಕೊಂಡಿದ್ದರಿಂದ ಕೋಟೆಯು ನೋಡಲು ಸುಂದರ ಮತ್ತು ಸದೃಢವಾಗಿ ಕಾಣುತ್ತದೆ. ಆದರೆ ರೈಲ್ವೆ ಹಳಿಯ ಹತ್ತಿರದ ಗೋಡೆ ಮಾತ್ರ ಸ್ವಲ್ಪ ಭಗ್ನಗೊಂಡಿದೆ.

ಹಂಡೆ ಅರಸರ ಕಾಲದ ಅರಮನೆಗಳು ಮತ್ತು ಜನರ ವಾಸಕ್ಕಾಗಿ ಕಟ್ಟಿದ ಸ್ಮಾರಕಗಳು ಯಾವುವೂ ಇಂದು ಉಳಿದುಬಂದಿಲ್ಲ. ಕಾರಣ ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆಯವರ ಅಧೀನಕ್ಕೆ ಒಳಪಟ್ಟ ಕೋಟೆಯು ಅಲ್ಲಿಯ ವಾಸದ ಮನೆಗಳು ಸಹ ಬದಲಾಗುತ್ತ ಬಂದಿವೆ. ಈಗ ಹೇಳಿಕೊಳ್ಳುವಂತಹ ವಾಸದ ಮನೆಗಳೆಂದರೆ ಬೆಟ್ಟದ ಮೇಲೆ ಇರುವ ದೊಡ್ಡ ದೊಡ್ಡ ನಿವಾಸಗಳು ಮಾತ್ರ, ಅವು ಸಹ ಜನವಸತಿ ಇರಲಾರದ್ದರಿಂದ ಜೀರ್ಣಾವಸ್ಥೆಗೆ ಬಂದು ತಲುಪಿವೆ.

## ೫.೪. ಆರ್ಥಿಕ ವ್ಯವಸ್ಥೆ

ಸಮಾಜ ಹಾಗೂ ಆರ್ಥಿಕ ಪರಿಕಲ್ಪನೆಗಳು ಬಹಳ ನಿಕಟವಾದ ನಂಟನ್ನು ಹೊಂದಿವೆ. ಈ ಎರಡೂ ಮಾದರಿಯಲ್ಲಿ ಬರುವ ಗ್ರಹಿಕೆಯ ವಿಚಾರಗಳು ಒಂದು ನಿರ್ದಿಷ್ಟ ಜನ ಸಮುದಾಯದ ಸಾಂಸ್ಕೃತಿಕ ಜೀವನದ ಮೇಲೆ ಪರಿಣಾಮ ಬೀರುವಂಥವೊ ಆಗಿರುತ್ತವೆ. ಹೀಗಾಗಿ ಸ್ವಾತಂತ್ರ್ಯ ಭಾರತದ ಆರ್ಥಿಕ ಪರಿಸ್ಥಿತಿಯಲ್ಲಿ ಗಂಭೀರವಾದ ಬದಲಾವಣೆಯನ್ನು ಅಂದಿನಿಂದ ಇಂದಿನವರೆಗೂ ಕಾಣಬಹುದು. ಜಗತ್ತಿನ ಆರ್ಥಿಕ ವ್ಯವಸ್ಥೆಯು ಇಂದು ಪ್ರತಿಯೊಂದು ರಂಗದಲ್ಲಿ ವಿಶಾಲವಾಗಿ ಹಬ್ಬಿರುವುದನ್ನು ನೋಡುತ್ತೇವೆ. ಆದರೂ ಸಾಮ್ರಾಜ್ಯ, ಅರಸರು, ಪಾಳೆಯಗಾರರು, ಅನೇಕ ಸಣ್ಣ ಮಟ್ಟ ಪಾಳೆಯಗಾರರು ಹಾಗೂ ಸರದಾರರೂ ಸ್ವತಂತ್ರವಾಗಿ ಆಡಳಿತವನ್ನು ನಡೆಸುವ ಸಂದರ್ಭದಲ್ಲಿ ಸಾಮಾಜಿಕ ಹಾಗೂ ಆರ್ಥಿಕ ಪಲ್ಲಟಗಳು ಆಗಿರುವುದನ್ನು ನೋಡಬಹುದು. ಒಂದು ನಾಡಿನ ನೈಸರ್ಗಿಕ ಸಂಪನ್ಮೂಲಗಳು ಮತ್ತು ಅವುಗಳನ್ನು ಬಳಸಿಕೊಳ್ಳುವ

ಮತ್ತು ಉಪಯೋಗಪಡಿಸಿಕೊಳ್ಳುವ ಜನರ ಪರಿಶ್ರಮದಿಂದ, ಆ ನಾಡಿನ ಆರ್ಥಿಕ ವ್ಯವಸ್ಥೆಯನ್ನು ತಿಳಿದುಕೊಳ್ಳಬಹುದು. ಜನರು ತಮ್ಮ ಜೀವನ ನಿರ್ವಹಣೆಗೆ ಮತ್ತು ಆರ್ಥಿಕ ಭದ್ರತೆಗೆ, ಆ ನಾಡಿನ ನಿಸರ್ಗ ಸಂಪತ್ತಾದ ಭೂಮಿಯನ್ನು ಆಶ್ರಯಿಸುವರು. ಭೂಮಿಯ ಒಳಗೆ ಸಿಗುವ ಖನಿಜಗಳು ಹವಾಗುಣದಿಂದ ಉಂಟಾಗುವ ಅರಣ್ಯ, ಮಣ್ಣು, ನೀರು ಇವುಗಳ ಮುಖೇನ ಅನೇಕ ಅರಸರು, ಪಾಳೆಯಗಾರರು ಆರ್ಥಿಕ ವ್ಯವಸ್ಥೆಗೆ ಮಾರುಹೋದವರು. ಇದಕ್ಕೆ ಶಾಸನಗಳಲ್ಲಿ ನೇರವಾದ ಮಾಹಿತಿಗಳು ಸಿಗುವುದಿಲ್ಲ. ಆದರೆ ಅಲ್ಲಿಯ ಜನ ಜೀವನದಿಂದ ಹೇಗೆ ಬಳಸಿ ಕೊಳ್ಳುತ್ತಿದ್ದರು ಎಂಬುದನ್ನು ತಿಳಿಯಬಹುದು. ಇನ್ನು ವಿಜಯನಗರ ಕಾಲದಲ್ಲಿ ಪ್ರಜೆಗಳು ಸುಖಭೋಗದ ತುತ್ತತುದಿಗೇರಿದ್ದರು ಎಂದು ಇತಿಹಾಸ ಹೇಳುತ್ತದೆ. ಅದಕ್ಕೆ ಇತಿಹಾಸ ಒದಗಿಸುವ ಸಮರ್ಥನೆ ಎಂದರೆ ಅಂದು ವಿಜಯನಗರ ಬೊಕ್ಕಸ ಸಂಪದ್ಭರಿತವಾಗಿತ್ತೆಂಬುದನ್ನು ತಿಳಿಸುತ್ತದೆ. ಇದರಿಂದ ರಾಜ್ಯ ಸುಭಿಕ್ಷವಾಗಿತ್ತೆಂದು ಅಂದರೆ ಆರ್ಥಿಕ ಪರಿಸ್ಥಿತಿಯು ಜನರ ಸಂತೋಷಕ್ಕೆ ಪ್ರಮುಖ ಕಾರಣ ಎಂದು ತಿಳಿಸುತ್ತದೆ. ಹಂಡೆ ಅರಸರು ವಿಜಯನಗರದ ಸಾಮಂತ ಅರಸರಾಗಿ ಕಾರ್ಯ ನಿರ್ವಹಿಸಿದ್ದಾರೆ. ಹೀಗಾಗಿ ಈ ಅರಸರ ಆರ್ಥಿಕ ಸ್ಥಿತಿಯು ಒಂದು ಕಾರಣವಾಗಿತ್ತು. ಮಿತ್ರ ಪಾಳೆಯಪಟ್ಟುಗಳಾದ ಸೋದೆ ಅರಸರು, ಕೆಳದಿ ಅರಸರು, ಬಾಗೂರು ಅರಸರು, ಜರಿಮಲೆ ಪಾಳೆಯಗಾರರು ಮತ್ತು ಗುಡೆಕೋಟೆ ಪಾಳೆಯಗಾರರು ಬಸವಪಟ್ಟಣದ ಪಾಳೆಯಗಾರರು ಈ ಎಲ್ಲ ಅರಸರ ಸಹಕಾರವು ಹಂಡೆ ಅರಸರಿಗೆ ಇದ್ದು, ಎಲ್ಲಾ ದೃಷ್ಟಿಯಿಂದ ಹಂಡೆ ಅರಸರು ಆರ್ಥಿಕ ವ್ಯವಸ್ಥೆಯಲ್ಲಿ ಉತ್ತಮವಾಗಿದ್ದದ್ದು ಕಂಡುಬರುತ್ತದೆ.

ಈ ಹಂಡೆ ಅರಸರು ಆರ್ಥಿಕವಾಗಿ ಶೋಚನೀಯವಾಗಿದ್ದರೂ ಸಾಂಸ್ಕೃತಿಕವಾಗಿ ಅವರನ್ನು ಇಂದಿಗೂ ಗುರುತಿಸಲಾಗಿದೆ. ಆದಾಯದ ಮೂಲಗಳು ಕಡಿಮೆಯಿದ್ದದ್ದು, ಇವರ ಪ್ರಜೆಗಳಿಂದ ಯಾವುದೇ ಸುಂಕವನ್ನು ಈ ಅರಸರು ಪಡೆಯುತ್ತಿದ್ದಿಲ್ಲ. ಕಾರಣ ಜನಕಲ್ಯಾಣಕ್ಕಾಗಿ ದಾನದತ್ತಿ ಕೊಡುವ ಪರಂಪರೆಯನ್ನು ಈ ಅರಸರು ರೂಢಿಸಿಕೊಂಡಿದ್ದರು. ಕೆಲವೊಂದು ಪ್ರದೇಶಗಳಲ್ಲಿ ಭೂದಾನ ಮಾಡಿದ ನಂತರ ಆ ದಾನದಿಂದ ಬಂದ ಕಂದಾಯವನ್ನು ಸಾಮಾಜಿಕ ಕಾರ್ಯಗಳಿಗೆ ವಿನಿಯೋಗಿಸಿಕೊಳ್ಳುತ್ತಿದ್ದರು. ಕೆರೆ ನಿರ್ಮಾಣದ ಸಂದರ್ಭದಲ್ಲಿ, ತಟಾಕಗಳ ನಿರ್ಮಾಣ ಕಾರ್ಯಕ್ಕೆ ಹಣವನ್ನು ವ್ಯಯಿಸುತ್ತಿದ್ದರು. ಅಷ್ಟೇ ಅಲ್ಲದೇ ತೂಬುಗಳ ನಿರ್ಮಾಣ ಅಂದರೆ ಕೆರೆಗಳು ಕಟ್ಟಿಸಿದ ನಂತರ ಕಟ್ಟೆ ಒಡೆಯದಂತೆ, ತೂಬು ಹಾಳಾಗದಂತೆ, ನೀರು ಒಣಗಿ ಹೋಗದಂತೆ ಅವುಗಳ ನಿರ್ಮಾಣಕ್ಕೆ ಖರ್ಚು ಮಾಡಲು ಹಣ ಬೇಕಾಗುವುದು. ಇದಕ್ಕಾಗಿ ಈ ಹಂಡೆ ಅರಸರು ಹೆಚ್ಚಾಗಿ ಭೂಮಿಯನ್ನು ದಾನ ಮಾಡುತ್ತಿದ್ದರು. ಇದರಿಂದ ಬಂದ ಹಣ ಅಥವಾ ಕಂದಾಯದ ರೂಪದಲ್ಲಿ ಬಂದ ಹಣವನ್ನು ಸಾಮಾಜಿಕ ಕಾರ್ಯಗಳಿಗೆ ಉಪಯೋಗಿ

ಸುತ್ತಿದ್ದರು. ದೇವಾಲಯಗಳ ನಿರ್ಮಾಣ ಮತ್ತು ಅವುಗಳ ಊರ್ಜಿತವೂ ಆಗಬೇಕಾಗುತ್ತದೆ. ಕಂದಾಯದಿಂದ ಬಂದ ಹಣವನ್ನು ದೇವಾಲಯಗಳ ಉಪ್ಪರಿಗೆ ಬಾಗಿಲು, ಮಂಟಪ, ಸಭಾಂಗಣ, ಸುಕನಾಸಿ ನಂದಿಧ್ವಜ ಮುಂತಾದ ಕಾರ್ಯಗಳಿಗೆ ಹಣವನ್ನು ಧಾರ್ಮಿಕವಾಗಿ ಸಂಗ್ರಹಿಸುತ್ತಿದ್ದರು. ಇಂತಹ ಕಾರ್ಯಗಳಿಂದ ಆರ್ಥಿಕ ಸ್ಥಿತಿಯು ಸುಧಾರಿಸಿಕೊಳ್ಳುತ್ತಿತ್ತು.

ರಾಜನಾದವನು ತನ್ನ ಪ್ರಜೆಗಳ ನೀತಿ ನಡತೆಗಳಿಗೆ ಸಂಬಂಧಿಸಿದಂತೆ ಕೆಲವು ಆಜ್ಞೆಗಳನ್ನು ಹೊರಡಿಸುತ್ತಿದ್ದನು. ಅಂದು ಈ ಅರಸರು ಹೊರಡಿಸಿದ ಮಾಪನಗಳು ಕೈಫಿಯತ್ತಿನಲ್ಲಿ ದೊರಕುತ್ತವೆ. ಬನವಳ್ಳಿ ಬಣಜಿಗರ ಕೈಫಿಯತ್ತಿನಲ್ಲಿ ಆಯಾ ಸ್ಥಳಗಳಲ್ಲಿ ಹುಟ್ಟುವ ಧಾನ್ಯ, ಕೈಗಾರಿಕಾ ಉತ್ಪತ್ತಿ ಆಯಾತ ನಿರ್ಯಾತಗಳ ವಸ್ತುಗಳ ವಿವರಗಳನ್ನು ಸೂಚಿಸಲಾಗಿದೆ. ಇವುಗಳಿಂದ ಪಾಳೆಯಗಾರರ ಕಾಲದಲ್ಲಿಯ ಜನರ ಆರ್ಥಿಕ ಜೀವನದ ವ್ಯವಸ್ಥೆಯ ಬಗ್ಗೆ ಸ್ಪಷ್ಟ ಚಿತ್ರಣಗಳು ದೊರಕುತ್ತವೆ.

ಕೈಫಿಯತ್ತು ತಿಳಿಯಪಡಿಸುವಂತೆ 'ಈ ಊರಲ್ಲಿ ತೂಕ ಮಾಡುವುದರ ವಿವರ. ಸವರನ ದುಡ್ಡು ೨೪ಕ್ಕೆ ವಂದು ಕಚ್ಚಾ ಸೇರು, ಆರು ಕಚ್ಚಾ ಸೇರಿಗೆ ಒಂದು ಪಂಚೇರು ೨ಕ್ಕೆ ಧಡಿಯಾ, ಧಡಿಯಾ ನಾಲ್ಕಕ್ಕೆ ಒಂದು ಮಣ, ಮಣಕ್ಕೆ ೪೮ ಕಚ್ಚಾ, ನಾಲ್ವತ್ತೆಂಟು ಸೇರು ಅಂದರೆ ಒಂದು ಮಣ. ಮಣ ಎಂಟಕ್ಕೆ ಒಂದು ಎತ್ತಿನ ಚೇರು, ನಿಜ ೧ಕ್ಕೆ ೨೨ ಮಣ ಯಿರುಕಿರೇಮಣ ಅಂಗಡಿಯಲ್ಲಿ ನಡಿಯೋವಂಥದ್ದು. ಗ್ರಾಮದಲ್ಲಿ ನಡಿಯೋದು ಅಡಿಕೆ ಪೋರಳಿ, ೯೦ ಕಚ್ಚಾ ಸೇರಿಗೆ ಒಂದು ಮಣ, ಇಂಥ ಇಪ್ಪತ್ತೆರಡು ಮಣಕ್ಕೆ ಒಂದು ಖಂಡಿ ಅಂಥಾರೆ ಎಂದು ಹೇಳಿರುವುದನ್ನು ನೋಡಿದರೆ ಅದು ಅನಂತಪುರ ಅರಸರು ತಮ್ಮ ವಿಸ್ತಾರವಾದ ಪರಿಸರದಲ್ಲಿ ಬಳಸುತ್ತಿದ್ದ ಅಳತೆ ಮಾಪನಗಳ ವಿವರ ತಿಳಿದುಬರುತ್ತದೆ.

ತಪ್ಪು ಮಾಡಿದವರಿಗೆ ಅಂದು ಶಿಕ್ಷೆ ಕೊಡುವ, ದಂಡ ಕಟ್ಟುವ ಪ್ರಕ್ರಿಯೆ ಜಾರಿಯಲ್ಲಿತ್ತು. ಅಪರಾಧಿಗಳು ಹೀಗೆ ಕಟ್ಟಿದ ದಂಡದಿಂದ ಬಂದ ಹಣದ ಮೊತ್ತವನ್ನು ರಾಜನಾದವನು ಆ ಊರಿನ ಕೆರೆಯ ಜೀರ್ಣೋದ್ಧಾರ ಕೆಲಸಗಳಿಗೆ ಬಿಟ್ಟುಕೊಟ್ಟಿರುವನು.

ಅನಂತಪುರ ಅರಸರು ಕೈಫಿಯತ್ತಿನಲ್ಲಿ ಬೇರೆ ಬೇರೆ ಅಧಿಕಾರದವರಿಗೆ ಕೊಡುವ ತೆರಿಗೆಗಳು, ಹಬ್ಬಗಳಿಗೆ ಕೊಡಬೇಕಾದ ಚಂದಾಹಣ, ದಶಪದಾರ್ಥಗಳ ವಿಷಯ, ಅಪುತ್ರಕ ಧನದ ವಿಷಯ ಇತ್ಯಾದಿ ವಿಷಯಗಳಿಗೆ ಒಬ್ಬೊಬ್ಬ ವರ್ತಕ ಶ್ರೇಣಿಗಳಿಗೂ ಒಂದೊಂದು ಜಾತಿಗೂ ಬೇರೆ ಬೇರೆ ನಿಯಮಗಳನ್ನು ವಿಧಿಸಿದ್ದು ತಿಳಿದುಬರುತ್ತದೆ.

ಆದಾಯವಿದ್ದಲ್ಲಿ ವ್ಯಯ ಇದ್ದೇ ಇರುತ್ತದೆ. ಆದಾಯದ ಬಗ್ಗೆ ಲಭ್ಯವಾಗುವಷ್ಟು ಮಾಹಿತಿ ಶಾಸನಗಳಿಂದಾಗಲೀ, ಸಾಹಿತ್ಯ ಕೃತಿಗಳಿಂದಾಗಲೀ ಖರ್ಚಿನ ವಿಷಯದಲ್ಲಿ ಸಿಗುವುದಿಲ್ಲ.

ಊಹೆ ಮಾಡಿ ತಿಳಿದುಕೊಳ್ಳಬೇಕು. ಪೂರ್ವ ಕರ್ನಾಟಕದ ರಾಜ್ಯ ವೈಭವ, ಆಡಳಿತ ವ್ಯವಸ್ಥೆ, ಸಾಮಾಜಿಕ–ಧಾರ್ಮಿಕ ಸುಧಾರಣಾ ಕಾರ್ಯಗಳಲ್ಲಿ ಆಗುತ್ತಿದ್ದ ಖರ್ಚು ಹೆಚ್ಚು, ಕೋಟೆ, ಸೈನ್ಯ, ಆಯುಧಗಳು, ಅಧಿಕಾರಿಗಳ ವೇತನ, ರಾಜರ ವೈಯಕ್ತಿಕ ಜೀವನಕ್ಕೂ ಹಣ ಖರ್ಚಾಗುತ್ತಿತ್ತು.[೨೬] ಎಲ್ಲ ವರ್ಗದ ಜನರು ತೆರಿಗೆಯನ್ನು ಕೊಡುತ್ತಿರಲಿಲ್ಲ. ಅಗ್ರಹಾರಗಳಿಗೆ, ದೇವಸ್ಥಾನಗಳಿಗೆ, ಮಠಗಳಿಗೆ ದಾನ ದತ್ತಿಗಳನ್ನು ಬಿಟ್ಟಾಗ ಅವು ಸರ್ವಮಾನ್ಯವಾಗಿರುತ್ತಿದ್ದವು. ಅದಕ್ಕೆ ಅವರು ಯಾವ ತೆರಿಗೆಯನ್ನು ಕೊಡಬೇಕಾಗಿರಲಿಲ್ಲ. ಕೆಲವೊಮ್ಮೆ ಕೊಟ್ಟರೂ ಅತಿ ಸ್ವಲ್ಪ ಕೊಡುತ್ತಿದ್ದರು. ಹೀಗಾಗಿ ಹಂಡೆ ಅರಸರ ಆದಾಯವೆಂದರೆ ಜಹಗೀರ ಗ್ರಾಮಗಳ ಮೂಲಕ ಹಣವನ್ನು ಪಡೆಯುತ್ತಿದ್ದರು.

ಉದಾಹರಣೆಗೆ

> "..........ಹಂಡೆ ಹನು। ಮೀನಾಯಕ ಅ। ಂಕುಶರಾಯ। ರು ಕೊಟ
> ಭೂದಾ। ನದರ್ಮ ಸಾಸ। ನದ ಪಟೆದ। ಕ್ರಮವೆಂತೆ। ಂದರೆ.........
> ಬಳ್ಳಾರಿ ಸೀ। ಮೆಯೊಳಗಣ। ಮಣವೂರ ಗ್ರಾ। ಮವನು ನಂಮ ಕೋಮಾರ ದೊಢ। ತಿ
> ಆ ರಾಮಪ್ಪ। ಗೆ.....।....ಆ ಗ್ರಾಮಕೆ। ಸಲುವ ಚತುಸೀಮೆ ವಳುಗಾ।
> ಸು೦। ಕ ಅನು ಪನು ಕಾಸು ಹಲು। ವೊಲ ಹಿರಿಮುರವಳ್ಳಿಗೆ ಸಕಲ। ಜೊಷ್ಟ......
> ......ಸಹವಾಗಿ। ಧಾರಾಪೂರ್ವಕವಾಗಿ ಲಿಂಗ। ಗ ಮುದ್ರಾಕಲ್ಲು ಹಾಕಿ ಪುರ।
> ವರ್ಗಮಮ್ಮಾಡಿ ನಿಂಮ। ಪುತ್ರ ಪೌತ್ರ ಪಾರಂಪ। ರೆ ಆಚಂದ್ರಾರ್ಕ ಸ್ಥಾಯಿ। ವಾಗಿ
> ಅನುಭವಿಸಿ। ಸಿ ಕೊಂಡಿಹುದುಯ। ಂದು ಬರಸಿ ಕೊಟ್ಟ। ದಾನ ಪಟ್ಟೆ।[೨೭]

ಹಂಡೆ ಹಿರೇ ರಾಮಪ್ಪನಾಯಕನು ತೊಲಮಾಮಿಡಿ, ಸಂಗನಕಲ್ಲು ಮತ್ತು ಚಾಗನೂರು ಗ್ರಾಮಗಳನ್ನು ತನ್ನ ಹಿರಿಯರಿಗೆ ಸುಕೃತವಾಗಬೇಕೆಂದು ಕೊಟ್ಟೂರು ಸ್ವಾಮಿಗೆ ದಾನ ನೀಡುತ್ತ "ಕಾಡಾರಂಭ ನೀರಾರಂಭ ಸಹಿತ ಸರ್ವಮಾನ್ಯ। ವಾಗಿ ಕೊಟ್ಟು ಇದ್ದೇವೂ ವರುಷ ವಂದಕ್ಕೆ ನಾಣ್ಯ ನಿರ್ಣಯ ಮಾಡಿದ್ದು।" ಎಂದು ಆ ಭೂಮಿಗಳ ಉತ್ಪತ್ತಿಯನ್ನು ನಿಶ್ಚಯಿಸಿ, ಅದನ್ನು ಬಳ್ಳಾರಿಯ ಕೊಟ್ಟೂರು ಮಠದಲ್ಲಿ ದಾಸೋಹ ನಡೆಸಬೇಕೆಂದು ಹೇಳಿದ್ದಾರೆ. ಅಲ್ಲದೆ "ಇದು ಹೊರ್ತಾಗಿ ಬಳ್ಳಾರಿ, ಕುರುಗೋಡು ತೆಕ್ಕಲಕೋಟೆ ೨ ಮೂರು ಮಹಲಾಲ ಜಿತಾಯ್ತಿಯಲ್ಲಿ ಪ್ರತಿ ಮಹಾಲಿಗೂ। ಕಾಲ್ನೆಡೆ ೧ಕ್ಕೆ ದುಗ್ಗಾಣಿವು ತಾರವು ಮೇಲುಕಾಸು ಮಾಡುಕೊಟ್ಟು ಇದ್ದೆವೂ। ನಿಂಮ ಶಿಷ್ಯ ಪ್ರತಿಶಿಷ್ಯ ಆಶಿಷ್ಯ ಪಾರಂಪರ್ಯ ಆ ಚಂದ್ರಾರ್ಕ। ನಿರಂತರವಾಗಿ ದಾಸೋಹ ಧರ್ಮ ನಡೆಶಿಕೊಂಡು ಬಹೂದು ಎಂದು। ಬರ್ಸಿಕೊಟ್ಟ ದಾನಪತ್ರವೂ ಇದಕ್ಕೆ ಮುದ್ರೆವುಂಗುರವೂ ಮೊಹರು। ಆಕಿಯಿರುತ್ತದೆ."[೨೮]

ಹಂಡೆ ಅರಸರ ಆಡಳಿತ ವರ್ಗದಲ್ಲಿ ಇರುವ ಪ್ರಮುಖ ಅಧಿಕಾರಿಗಳಾದ ದೇಸಾಯಿ, ಗೌಡ, ಶ್ಯಾನುಭೋಗ, ತಳವಾರ ಮುಂತಾದವರಿಗೆ ಖರ್ಚು ವೆಚ್ಚಕ್ಕಾಗಿ ಉಂಬಳಿಯಾಗಿ ದೊರೆತ ಭೂಮಿ ಅಥವಾ ಗ್ರಾಮಗಳನ್ನು ಸುಂಕಗಳಿಗಾಗಿ ನಿಗದಿ ಮಾಡಿದ್ದು ತಿಳಿದುಬರುತ್ತದೆ. ಈ ಗ್ರಾಮಗಳಿಂದ ಬರುವ ಕಂದಾಯವನ್ನು ಆಯಾ ಅಧಿಕಾರಿಗಳೇ ಅನುಭವಿಸುತ್ತಿದ್ದರು. ಉದಾ: ಹಂಡೆ ಬಾಲದ ಹನುಮಪ್ಪನಾಯಕನಿಗೆ ಕುರುಗೋಡು ಪರಗಣಿಯ ದೇಸಾಯಿ ದೇಶಕುಲಕರ್ಣಿಯನ್ನು ಮಾಡುವವರಿಗೆ ನೂರಕ್ಕೆ ಐದು ಹೊನ್ನು ಹಣವನ್ನು ಎರಡು ಬಾಬಿಗೆ ಐದು ವರಹ ಹಣವನ್ನು ಶಿವಾಯಿ ಎಂಬ ಜಹಗೀರು ಗ್ರಾಮವನ್ನು ಕೊಡಲಾಗಿತ್ತು. ದೇಸಾಯಿಕೆಯ ಖರ್ಚಿಗೆ ಬೈಲೂರು ಮತ್ತು ಬೈರದ್ಯಾವನಹಳ್ಳಿ ಎಂಬ ಎರಡು ಗ್ರಾಮಗಳನ್ನು ಕೊಡಲಾಗಿತ್ತು.[೨೯] ಹೀಗೆ ಅರಸರ ಅಧಿಕಾರ ವ್ಯಾಪ್ತಿಯಲ್ಲಿ ಅನೇಕ ಜಹಗೀರುಗಳನ್ನು ಬಿಟ್ಟುಕೊಡಲಾಗಿತ್ತು.

ಹಂಡೆ ಆಡಳಿತ ವ್ಯಾಪ್ತಿಯ ಪ್ರದೇಶದಲ್ಲಿ ಮುಕ್ಕಾಲು ಪಾಲು ಗ್ರಾಮಗಳೇ ಇದ್ದವು. ಇವು ಸುಸಜ್ಜಿತವಾದ ಕೋಟೆ ಕಿಲ್ಲೆಗಳನ್ನು ಹೊಂದಿರುತ್ತಿದ್ದವು. ಕೋಟೆಯ ಮೇಲೆ ಅರಸರು ಫಿರಂಗಿ ವ್ಯವಸ್ಥೆ ಮಾಡುತ್ತಿದ್ದರು. ಇವುಗಳ ನಿರ್ಮಾಣದ ಖರ್ಚಿನ ಮೂಲವೆಂದರೆ ಗ್ರಾಮವಾಸಿಗಳಾದ ರೈತರು ತಮ್ಮ ಭೂಮಿಯ ಗುಣಮಟ್ಟದ ಮೇಲಿಂದ ಭೂಕಂದಾಯವನ್ನು ಇಂತಿಷ್ಟು ಪಾಲು ತೆರಿಗೆಯನ್ನು ಕೊಡುತ್ತಿದ್ದರು. ಇವರಂತೆ ಇತರ ವೃತ್ತಿ ಸಂಘಗಳೆನಿಸಿದ ಕಮ್ಮಾರ, ಚಮ್ಮಾರ, ಬುಟ್ಟಿ ಹೆಣೆಯುವವರು, ಗಾಣಿಗರು, ಚಿಂಪಿಗರು ಮುಂತಾದವರು ನಿಗದಿಪಡಿಸಿದಂತೆ ತೆರಿಗೆ ಕೊಡುತ್ತಿದ್ದರು. ಹೀಗೆ ಹಲವು ಗ್ರಾಮಗಳ ಮೂಲಕ ಹಂಡೆ ಅರಸರು ತಮ್ಮ ರಾಜ್ಯಕ್ಕೆ ಕಂದಾಯವನ್ನು ಪಡೆದುಕೊಳ್ಳುತ್ತಿದ್ದರು. ಇದರಿಂದ ಆಂತರಿಕ ಸುಖ–ನೆಮ್ಮದಿಯು ಇವರ ಸಾಂಸ್ಕೃತಿಕ ಬದುಕು ಹಸನಾಗಿದ್ದದ್ದು ಕಂಡುಬರುತ್ತದೆ.

ಹಂಡೆ ಅರಸು ಮನೆತನದವರ ತೆರಿಗೆ ಪದ್ಧತಿಯು ಅಂದಿನ ಸಮಕಾಲೀನ ನೆರೆಹೊರೆಯ ರಾಜ್ಯಗಳಲ್ಲಿದ್ದ ಪದ್ಧತಿಯಿಂದ ಬಹುಮಟ್ಟಿಗೆ ಪ್ರಭಾವಿತವಾಗಿದ್ದಿತು. ಈ ಅರಸರು ವಿಜಯನಗರ ಸಾಮ್ರಾಜ್ಯದ ಅಧೀನವಾಗಿದ್ದರಿಂದ ಸಹಜವಾಗಿಯೇ ಅವರ ತೆರಿಗೆ ಪದ್ಧತಿಯನ್ನೇ ಅಳವಡಿಸಿ ಕೊಂಡು ಬಂದರು. ವಿಜಯನಗರ ಪತನದ ನಂತರ ಹಂಡೆ ಅರಸರು ತಮ್ಮ ಸ್ಥಾನಮಾನಕ್ಕಾಗಿ ಸೋದೆ ಅರಸುಮನೆತನ, ಕೆಳದಿಯ ನಾಯಕರು, ಬಿಜಾಪುರದ ಆದಿಲ್‌ಶಾಹಿಗಳು, ಮೊಗಲರು ಹಾಗೂ ಮರಾಠರು ಇವರೊಂದಿಗೆ ನಿರಂತರವಾಗಿ ಹೋರಾಡಬೇಕಾಯಿತು. ಕಾರಣವಾಗಿ ಈ ಎಲ್ಲ ರಾಜ್ಯಗಳಲ್ಲಿ ಚಲಾವಣೆಯಲ್ಲಿದ್ದ ವ್ಯವಸ್ಥೆಯಲ್ಲಿ ಎರಡು ಹಂತಗಳಿದ್ದವು. ಮೊದಲನೆಯದು ಕಂದಾಯದ ನಿಗದಿ, ಎರಡನೆಯದು ಕಂದಾಯದ ವಸೂಲಿ. ಮೊದಲನೆಯ ತತ್ವ ಕೃಷಿಕರು ಕೊಡಬೇಕಾದ ತೆರಿಗೆಯನ್ನು ಮುಖ್ಯವಾಗಿ ಮಣ್ಣಿನವರ್ಗ ಮತ್ತು ಬೇಸಾಯದ ಪರಿಸ್ಥಿತಿ

ಇವುಗಳ ಆಧಾರದಿಂದಲೇ ನಿರ್ಣಯಿಸಬೇಕು ಎನ್ನುವುದು. ಹಂಡೆ ಅರಸರ ಆಳ್ವಿಕೆಯಲ್ಲಿ ಈ ನಿಯಮವನ್ನೇ ಅನುಸರಿಸುತ್ತಿದ್ದರು. ಅದಕ್ಕಾಗಿ ನಾಲ್ಕು ಬಗೆಯ ಬೇಸಾಯದ ಕ್ರಮವನ್ನು ಅನುಸರಿಸಲಾಗುತ್ತಿತ್ತು. ಹಂಡೆ ಅರಸರ ಅವಧಿಯಲ್ಲಿ "ಬಿರಾಡ" ಎಂಬ ಭೂಮಿಯ ಹೆಸರಿನ ಪದ, ಪದೇ ಪದೇ ಶಾಸನಗಳಲ್ಲಿ ಉಲ್ಲೇಖಿತವಾಗಿರುವುದನ್ನು ಗಮನಿಸಬೇಕು.[೩೦] "ಬಿರಾಡ" ಭೂಮಿ ಎಂದರೆ ಬಹುಶಃ ಬರಡು, ಕಚ್ಚಾ ಭೂಮಿ ಆಗಿರಬೇಕು. ಈ ಭೂಮಿಯು ಹೆಚ್ಚು ಫಲವತ್ತತೆಯನ್ನು ಹಾಗೂ ಉಳುಮೆ ಮಾಡಲು ಅಷ್ಟೊಂದು ಯೋಗ್ಯವಾಗಿರುವುದಿಲ್ಲ ಎಂಬುದು ತಿಳಿಯುತ್ತದೆ.

ಕಂದಾಯ ವ್ಯವಸ್ಥೆಗೆ ಸಂಬಂಧಿಸಿದಂತೆ 'ಸಿಸ್ತಾದಾಯ' ಹಾಗೂ 'ಬಿರಾಡ' ಎಂಬ ಪರಿಕಲ್ಪನೆಗಳನ್ನು ನಾವು ಶಾಸನಗಳಲ್ಲಿ ಕಾಣುತ್ತೇವೆ. ಸಾಗುವಳಿ ಭೂಮಿಗೆ ವಿಧಿಸುತ್ತಿದ್ದ ಮೂಲ ಕಂದಾಯ ದರವನ್ನೇ 'ಶಿಸ್ತಾದಾಯ' ಎಂದೂ, ಇನ್ನು ಮೂಲ ಕಂದಾಯದ ಪ್ರತಿ ವರಹ ಅಥವಾ ಗದ್ಯಾಣಕ್ಕೆ ಒಂದು ಇಲ್ಲವೆ ಎರಡು ಹಣವನ್ನು ಹೆಚ್ಚುವರಿಯಾಗಿ ವಿಧಿಸುವ ತೆರಿಗೆಗೆ 'ಬಿರಾಡ' ಎಂದು ಕರೆಯಲಾಗುತ್ತಿತ್ತು.[೩೧] ಈ ಪಾರಿಭಾಷಿಕ ಪದಗಳು ಹಂಡೆ ರಾಜ್ಯದಲ್ಲಿಯೂ ಪ್ರಚಲಿದಲ್ಲಿದ್ದವು.

ಭೂಮಿಗೆ ಸಂಬಂಧಿಸಿದಂತೆ ಕಂದಾಯ ನಿಗದಿಪಡಿಸುವ ಮೊದಲು ಅಲ್ಲಿಯ ಉತ್ಪನ್ನಗಳನ್ನು ಗಣನೆಗೆ ತೆಗೆದುಕೊಳ್ಳುತ್ತಿದ್ದರು. ತೆಂಗು, ಅಡಿಕೆ, ಹಲಸು, ಮಾವಿನ ಮರಗಳು ಮತ್ತು ವೀಳ್ಯದೆಲೆಗಳನ್ನು ಪ್ರತ್ಯೇಕವಾಗಿ ತೆರಿಗೆಯನ್ನು ವಿಧಿಸುತ್ತಿದ್ದರು. ಕಂದಾಯ ನಿಗದಿಯ ವ್ಯವಸ್ಥಿತ ರೂಪದ ಎರಡನೆಯ ನಿಯಮ ರೈತರೊಂದಿಗೆ ಕಂದಾಯವನ್ನು ಕುರಿತು ಇತ್ಯರ್ಥ ಮಾಡಿಕೊಳ್ಳುವುದಕ್ಕೆ ಮುಂಚೆ ಅದನ್ನು ಸರ್ವೆ ಮಾಡಿ ಅಳತೆ ಮಾಡಬೇಕು ಎನ್ನುವುದು. ತೆರಿಗೆ ನಿಗದಿಗಾಗಿ ಜಮೀನನ್ನು ಅಳತೆ ಮಾಡುವುದು ಕರ್ನಾಟಕದಲ್ಲಿ ಹಿಂದಿನಿಂದಲೂ ಬಂದ ಪದ್ಧತಿ. ಹಂಡೆ ಪೂರ್ವಜರಾದ ವಿಜಯನಗರ ರಾಜರು ಹಳೆಯ ಅಳತೆಗಳ ಜೊತೆಗೆ ಈ ಕಾಲದಲ್ಲಿ ಕೆಲವು ಹೊಸ ಅಳತೆಗಳನ್ನು ಜಾರಿಗೆ ತಂದರು. ಆ ಸಮಯದಲ್ಲಿ ೧೮ ಪಾದ ಉದ್ದವಿದ್ದ ಮಾನದಂಡ ಎಂಬ ಅಳತೆಯ ಕೋಲು ಪ್ರಚಲಿತವಾಗಿತ್ತು. ಸಾಮಾನ್ಯವಾಗಿ ಎರಡು ಬಗೆಯಾಗಿ ಕಂದಾಯ ನಿಗದಿ ಆಗುತ್ತಿದ್ದಿತು. ಈ ದೃಷ್ಟಿಯಿಂದ ನೋಡಿದರೆ ಕಂದಾಯದ ಮೂಲಗಳು ಸಮೃದ್ಧವಾಗಿ ಇದ್ದದ್ದು ಕಂಡುಬರುತ್ತದೆ. ಆ ಕಾಲದ ಪರಿಸ್ಥಿತಿಯ ದೃಷ್ಟಿಯಿಂದ ನೋಡಿದರೆ ಕೃಷಿಯ ಬಗೆಗೆ ತಿಳುವಳಿಕೆ ಚೆನ್ನಾಗಿಯೇ ಬೆಳೆದಿತ್ತು ಎಂದು ಹೇಳಬಹುದು. ಮಣ್ಣು, ಪರಿಸ್ಥಿತಿ, ಕೃತಕ ನೀರಾವರಿ ಸೌಲಭ್ಯ, ಮಳೆ ಮತ್ತು ಬೆಳೆ ಇವುಗಳ ಆಧಾರದ ಮೇಲೆ ಕೃಷಿ ಭೂಮಿಯನ್ನು ವೈಜ್ಞಾನಿಕವಾಗಿ ವರ್ಗೀಕರಿಸುವುದರಿಂದ ಇದನ್ನು ತಿಳಿದುಕೊಳ್ಳಬಹುದು.

ಹಂಡೆ ಅರಸರು ಹೆಚ್ಚಾಗಿ ನೀರಾವಾರಿ ಸೌಲಭ್ಯವನ್ನು ಹೊಂದಿಲ್ಲದಿದ್ದರೂ ಆರ್ಥಿಕ ವ್ಯವಸ್ಥೆಗೋಸ್ಕರ ಕೆಲವೊಂದು ಪ್ರದೇಶಗಳಲ್ಲಿ ಸುಂಕವನ್ನು ವಿಧಿಸುತ್ತಿದ್ದರು.

ಜನರ ಜೀವನೋಪಾಯದ ಮುಖ್ಯ ಕಸುಬುಗಳಾದ ಕೃಷಿ, ವ್ಯಾಪಾರ, ವಾಣಿಜ್ಯ ಉದ್ಯೋಗವನ್ನೊಳಗೊಂಡು ಸಮಸ್ತ ಆದಾಯಕ್ಕೆಲ್ಲಾ ವ್ಯವಸಾಯವು ಕೇಂದ್ರ ಬಿಂದುವಾಗಿತ್ತು. ಭಾರತದಲ್ಲಿ ಪೂರ್ವಕಾಲದಿಂದಲೂ ಬೆಳೆದುಬಂದದ್ದು ವ್ಯವಸಾಯವೇ ಆಗಿದೆ. ಆದರೆ ವ್ಯವಸಾಯದ ಕ್ರಮ ಕುರಿತಂತೆ ಶಾಸನಗಳು ಸ್ಪಷ್ಟವಾದ ಚಿತ್ರಣವನ್ನು ಒದಗಿಸುವುದಿಲ್ಲ. ವ್ಯವಸಾಯಕ್ಕೆ ನದಿ, ಕೆರೆ, ಕಾಲುವೆ, ಬಾವಿ, ತಟಾಕ, ಹಳ್ಳಗಳ ಮುಖಾಂತರ ಬೆಳೆಗಳಿಗೆ ನೀರು ಪೂರೈಸುತ್ತಿದ್ದರು. ಹಂಡೆ ಅರಸರ ಕಾಲದಲ್ಲಿ ಅತ್ಯುತ್ತಮ ನೀರಾವರಿ ಕಾರ್ಯ ಆರಂಭಗೊಂಡಿತ್ತು. ಉದಾಹರಣೆಗೆ ಕ್ರಿ.ಶ.೧೫೫೭ರ ಶಾಸನ ಹಂಡೆ ಹನುಮಪ್ಪ ನಾಯಕನಿಗೆ ಸಂಬಂಧಿಸಿದ್ದು, ನೀರಾವರಿ ಸೌಲಭ್ಯಕ್ಕೆಂದೇ ಲಿಂಗದಹಳ್ಳಿಯಲ್ಲಿ ಕೆರೆ ಕಟ್ಟಿಸಿದನೆಂದು ಉಲ್ಲೇಖಿಸುತ್ತದೆ.[೩೨] ಹೀಗೆ ನೀರಾವರಿಯ ಜೀವನಾಡಿಯಾಗಿರುವ ನದಿ, ಕೆರೆ, ಬಾವಿ, ಕಾಲುವೆ ಮುಂತಾದವುಗಳನ್ನು ಕಾಪಾಡಿಕೊಂಡು ಹೋಗುವುದು ಧರ್ಮವೆಂದೂ, ಕೆಡಿಸುವುದು ಅಧರ್ಮವೆಂದೂ ಹಲವಾರು ಶಾಸನಗಳು ತಿಳಿಸುತ್ತವೆ. ಮುಖ್ಯವಾಗಿ ವಾಣಿಜ್ಯ ಕಬ್ಬಿನ ಉತ್ಪನ್ನಗಳಾದ ಸಕ್ಕರೆ ಮತ್ತು ಬೆಲ್ಲ ಹೇರಳವಾಗಿ ಉತ್ಪಾದನೆಯಾಗುತ್ತಿದ್ದು ಈ ವಸ್ತುಗಳನ್ನು ಇಲ್ಲಿಂದ ಹೊರದೇಶಗಳಿಗೆ ರಫ್ತು ಮಾಡುತ್ತಿದ್ದುದ್ದರಿಂದ ಈ ಕಬ್ಬು ಬೆಳೆಗಾರರಿಗೆ ಅಪಾರವಾದ ಲಾಭ ತರುವ ನಗದು ಬೆಳೆ. ಇನ್ನೂ ಉಪ ಉತ್ಪನ್ನಗಳಾದ ಎಣ್ಣೆ, ಎಳ್ಳಿನಿಂದ, ಹರಳಿನಿಂದ ಕೂಡ ಎಣ್ಣೆ ತೆಗೆಯುತ್ತಿದ್ದರು. ಈ ಮೇಲೆ ನಿರೂಪಿಸಿದ ವಿವಿಧ ಬೆಳೆಗಳ ವರ್ಣನೆಯೂ ಪಾಳೆಯಗಾರರ ಕಾಲ ಮತ್ತು ಅರಸರ ಕಾಲದಲ್ಲಿಯೂ ಕಾಣಬಹುದು.

ವಿಜಯನಗರ ನಂತರದ ಕಾಲದಲ್ಲಿ ಫಲವತ್ತಾದ ಕಣಿವೆಗಳಲ್ಲಿ ಭತ್ತ, ಕಿತ್ತಳೆ, ನಿಂಬೆ, ಸಿಭಾನ, ಕೆಂಪುಮೂಲಂಗಿ ಮತ್ತು ಎಲೆಕೋಸು ಮೊದಲಾದ ತೋಟದ ಬೆಳೆಗಳು ಆಗಿದ್ದವು. ಗೋಧಿ, ಭತ್ತ, ಕಾಳು ಮತ್ತು ಜೋಳಗಳನ್ನು ಕಪ್ಪು ನೆಲೆದಲ್ಲಿ ಬೆಳೆಯುತ್ತಿದ್ದರು. ಒಟ್ಟಿನಲ್ಲಿ ದೇಶದಾದ್ಯಂತ ಉತ್ತಮ ರೀತಿಯಲ್ಲಿ ಬೇಸಾಯವಾಗುತ್ತಿತ್ತು. ನೆಲ ಫಲವತ್ತಾಗಿತ್ತು. ಹಂಡೆ ಅರಸರ ಆಡಳಿತವು ಗದ್ದೆ ಬೆಳೆಗಳ ಬೇಸಾಯಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡುತ್ತಿತ್ತು. ನಗದು ಬೆಳೆಗಳಾದ ಭತ್ತ, ಕಬ್ಬು, ಹತ್ತಿ ಮತ್ತು ಸಾಂಬಾರ ವಸ್ತುಗಳು ಹೆಚ್ಚಿನ ವರಮಾನವನ್ನು ತರುತ್ತಿದ್ದವು. ಕೆರೆಗಳು, ನಾಲೆಗಳು ಮತ್ತು ಬಾವಿಗಳನ್ನು ನಿರ್ಮಿಸುವುದರ ಮೂಲಕ ಬಂಜರು ನೆಲವನ್ನು ಹೆಚ್ಚು ಹೆಚ್ಚಾಗಿ ಒಳಪಡಿಸುತ್ತಿದ್ದರು. ಇದರಿಂದ ಆಹಾರ ಧಾನ್ಯಗಳು, ಹತ್ತಿ, ತುಂಬಾಕು, ಎಣ್ಣೆಕಾಳು, ಸಾಂಬಾರ ಪದಾರ್ಥಗಳು, ಕಾಳುಮೆಣಸು, ಕಾಫಿ, ಏಲಕ್ಕಿ, ಅಡಿಕೆ

ಮುಂತಾದ ವ್ಯವಸಾಯದ ವಸ್ತುಗಳು ಹೇರಳವಾಗಿ ಉತ್ಪನ್ನವಾಗುತ್ತಿದ್ದವು. ಇವು ವಿದೇಶ ವ್ಯಾಪಾರಕ್ಕೂ ಹೆಚ್ಚು ಮಾರಾಟವಾಗುತ್ತಿತ್ತು ಎಂದು ತಿಳಿಯುತ್ತದೆ.

ಹಂಡೆ ಅರಸರು ಆಳ್ವಿಕೆಯಲ್ಲಿ ವರಹ, ಗದ್ಯಾಣ, ದುಗ್ಗಾಣಿ, ಶ್ರೀಕಂಠಿರಾಯ ಪಗೋಡ ಎಂಬ ಹೆಸರಿನ ನಾಣ್ಯಗಳು ಚಲಾವಣೆಯಲ್ಲಿದ್ದವು.೩೩ ಬಳ್ಳಾರಿ, ಅನಂತಪುರ, ತೆಕ್ಕಲಕೋಟೆ, ಇಕ್ಕೇರಿ ಮುಂತಾದ ಪ್ರದೇಶಗಳಲ್ಲಿ ಟಂಕಸಾಲೆಗಳನ್ನು ಸ್ಥಾಪಿಸಿದ್ದರು. ವಿದೇಶಿ ವ್ಯಾಪಾರಿಗಳು ಈ ನಾಣ್ಯಗಳನ್ನು ಒಪ್ಪಿಕೊಂಡಿದ್ದರು.

**ಅಡಿಟಿಪ್ಪಣಿಗಳು**

೧. ದೇವರಕೊಂಡಾರೆಡ್ಡಿ(ಸಂ), ೧೯೮೮, ಶಾಸನ ಸಂಪುಟ-೧, ಪು.೮.

೨. ಕಲಬುರ್ಗಿ ಎಂ.ಎಂ., ೧೯೯೪, ಕರ್ನಾಟಕದ ಕೈಫಿಯತ್ತು, ಪು.೪೫೧.

೩. ಅದೇ, ಪು.೪೫೧.

೪. ಅದೇ, ಪು.೪೫೧.

೫. ಪುಸ್ತಕ ಭಂಡಾರ, ಶ್ರೀ.ಜ.ನಿ. ಶ್ರೀಶೈಲ ಪಂಡಿತಾರಾಧ್ಯ ಚರಿತ್ರಮು, ಪು.೯.

೬. ಶ್ಯಾಮಲ ಸಿ.ಆರ್., ೨೦೦೮, ಪೂರ್ವ ಕರ್ನಾಟಕದ ಪಾಳೆಯಗಾರರು: ಒಂದು ಅಧ್ಯಯನ, ಪು.೧೭೧.

೭. ಉಮಾಪತಿಶಾಸ್ತ್ರಿ ಗೌ.ಮ., ೧೯೮೩, ಹಂಪೆ ಹೇಮಕೂಟ ಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಕೊಟ್ಟೂರು ಸ್ವಾಮಿ, ಗುರು ಪರಂಪರೆ, ಪು.೧೧.

೮. ಅದೇ, ಪು.೧೩.

೯. ಅದೇ, ಪು.೧೪.

೧೦. ಅದೇ, ಪು.೧೫.

೧೧. ಅದೇ, ಪು.೧೭.

೧೨. ಅದೇ, ಪು.೧೮.

೧೩. ಅದೇ, ಪು.೨೧.

೧೪. ಪಾಟೀಲ ಎಸ್.ಸಿ., ೨೦೧೪, ಶಾಸನೋಕ್ತ ಹಂಡೆ ಅರಸು ಮನೆತನ, ಪು.೬೬.

೧೫. ಅದೇ, ಪು.೮೦.

೧೬. ಚೆನ್ನಕ್ಕ ಪಾವಟೆ, ೨೦೦೫, ಸಂಸ್ಕೃತಿ ಅಧ್ಯಯನ, ಪು.೧೧೪.

೧೭. ಚಂದ್ರಶೇಖರ ನಾರಾಯಣಪುರ, ೨೦೦೨, ಕರ್ನಾಟಕದ ವೀರಶೈವ ಮಠಗಳು, ಪು. ೬೨೦.

೧೮. ಉಮಾಪತಿ ಶಾಸ್ತ್ರಿ ಗೌ. ಮ., ೧೯೮೩, ಹಂಪಿ ಹೇಮಕೂಟ ಸಿಂಹಾಸನಾಧೀಶ್ವರ, ಪು.೩೨.

೧೯. ಹನುಮಂತ ರೆಡ್ಡಿ ವೈ. ೧೯೯೧, ಕುರುಗೋಡು ಕ್ಷೇತ್ರ ದರ್ಶನ, ಪು.೮.

೨೦. ಅದೇ, ಪು.೨೩.

೨೧. ಅದೇ, ಪು.೨೭.

೨೨. ರವೀಂದ್ರನಾಥ ಕೆ., ೨೦೦೩, ಅಗ್ನಿ ದಿವ್ಯ, ಪು.೧೯೬.

೨೩. ಕಲಬುರ್ಗಿ ಎಂ.ಎಂ., ೧೯೯೪, ಕರ್ನಾಟಕ ಕೈಫಿಯತ್ತು, ಪು.೪೫೭.

೨೪. ಶೇಷಶಾಸ್ತ್ರಿ ಆರ್., ೧೯೮೨, ಕರ್ನಾಟಕದ ವೀರಗಲ್ಲುಗಳು, ಪು.೧೮೭.

೨೫. ಚನ್ನಬಸಪ್ಪ ಪಾಟೀಲ, ೧೯೯೯, ಕರ್ನಾಟಕದ ಕೋಟೆಗಳು, ಸಂಪುಟ–೧, ಪು.೧–೨.

೨೬. ಶ್ಯಾಮಲ ಸಿ.ಆರ್., ೨೦೧೭, ಪೂರ್ವ ಕರ್ನಾಟಕದ ಪಾಳೆಯಗಾರರು, ಪು.೫೨೦.

೨೭. ಶ್ಯಾಮಲ ಸಿ.ಆರ್., ೨೦೧೭, ಪೂರ್ವ ಕರ್ನಾಟಕದ ಪಾಳೆಯಗಾರರು, ಪು.೫೨೧.

೨೮. ಅದೇ, ಪು.೫೨೧.

೨೯. ಚೆನ್ನಕ್ಕ ಪಾವಟೆ, ೨೦೦೫, ಸಂಸ್ಕೃತಿ ಅಧ್ಯಯನ, ಚನ್ನಗಂಗಾ ಪ್ರಕಾಶನ, ಪು.೧೮೧.

೩೦. ದೇವರಕೊಂಡಾರೆಡ್ಡಿ(ಸಂ), ೧೯೯೮, ಕ.ವಿ.ವಿ.ಹಂಪಿ, ಶಾಸನ ಸಂಪುಟ–೧.

೩೧. ವಾರಿ ಜೆ.ಎಂ., ೧೯೯೯, ಸೋದೆ ಅರಸು ಮನೆತನ, ಬಾದಾಮಿ, ಪು.೧೫೧.

೩೨. ಶ್ಯಾಮಾಶಾಸ್ತ್ರಿ ಮತ್ತು ಲಕ್ಷ್ಮೀನಾರಾಯಣರಾವ್(ಸೌಥ್ ಇಂಡಿಯನ್ ಇನ್‌ಸ್ಕ್ರಿಪ್‌ಶನ್ಸ್) ಪು.೬೭೬.

೩೩. ದೇವರಕೊಂಡಾರೆಡ್ಡಿ(ಸಂ), ೧೯೯೮, ಶಾಸನ ಸಂಪುಟ–೧, ಪು. ೧೪೩.

# ಅಧ್ಯಾಯ : ಆರು

## ಸಮಾರೋಪ

ಪ್ರಸ್ತುತ ಅಧ್ಯಯನವು ಪ್ರಧಾನವಾಗಿ 'ಹಂಡೆ ಅರಸುಮನೆತನ: ಸಾಂಸ್ಕೃತಿಕ ಅಧ್ಯಯನ' ಎಂಬುದಾಗಿದೆ. ದಕ್ಷಿಣ ಭಾರತದ ಬಹುಭಾಗವನ್ನು ಒಳಗೊಂಡಿದ್ದ ವಿಜಯನಗರ ಸಾಮ್ರಾಜ್ಯ ಅನೇಕ ಮಾಂಡಳಿಕ ರಾಜ್ಯಗಳ ಒಕ್ಕೂಟವಾಗಿದ್ದಿತು. ಆಡಳಿತದ ದೃಷ್ಟಿಯಿಂದ ಮಾಂಡಳಿಕ ರಾಜ್ಯಗಳು, ಸ್ಥಳೀಯ ಅರಸರು ವಿಜಯನಗರದ ಒಕ್ಕೂಟವನ್ನು ರೂಪಿಸಿದರು. ಈ ಒಕ್ಕೂಟ ವ್ಯವಸ್ಥೆಯೇ ಪಾಳೇಗಾರರು ಮತ್ತು ಅರಸರು. ಇನ್ನೂ ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ವಿಜಯನಗರದ ಅಳಿಯ ರಾಮರಾಯನು ಶತ್ರುಗಳನ್ನು ಸದೆಬಡೆಯಲು ಹೋದಾಗ ಈ ಸಾಮಂತ ಅರಸರು ಅವರ ನೆರವಿಗೆ ಸೈನ್ಯಸಮೇತ ಹೋಗಿ, ಒಂದೊಂದು ಸ್ಥಳದಲ್ಲಿ ಇಳಿದುಕೊಳ್ಳುತ್ತಿದ್ದರು. ಇದರಿಂದ ಇವರಿಗೆ ಪಾಳೆಯಗಾರರು ಇಲ್ಲವೇ ಅರಸರು ಎಂದು ಕರೆದಿರಬಹುದು. ಇಂಥ ಅರಸರಲ್ಲಿ ಹಂಡೆ ಅರಸರು ಒಬ್ಬರು. ಇವರು ವಿಜಯನಗರೋತ್ತರ ಕಾಲದಲ್ಲಿ ಸ್ವತಂತ್ರವಾಗಿ ಆಳ್ವಿಕೆ ನಡೆಸಿದವರು. ಹಂಡೆ ಅರಸರು ಅಳಿಯ ರಾಮರಾಯನಿಗೆ ಬೆಂಗಾವಲಾಗಿ ನಿಂತರು.

ಇದಕ್ಕಿಂತ ಪೂರ್ವದಲ್ಲಿ ಹಂಡೆ ಅರಸರು ಬಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲೂಕಿನ 'ಮುತ್ತಗಿ' ಎಂಬ ಗ್ರಾಮದಲ್ಲಿ ಗೌಡಿಕಿ ಮಾಡುವುದರ ಮೂಲಕ ತಮ್ಮ ರಾಜಕೀಯ ಜೀವನ ಪ್ರಾರಂಭಿಸಿದರು. ಈ ಮನೆತನದ ಮೂಲ ಪುರುಷ 'ಲಕ್ಕಿ ನಾಯಕ'ನಾದರೂ ಹಂಡೆ ಅರಸುಮನೆತನಕ್ಕೆ ಅಚ್ಚುಕಟ್ಟಾದ ಅಡಿಪಾಯ ಹಾಕಿಕೊಟ್ಟವನು ಹಂಡೆ ಹನುಮಪ್ಪನಾಯಕ. ಇವನು ಲಕ್ಕಿನಾಯಕನ ಹಿರಿಯ ಮಗ. ಹನುಮಪ್ಪನಾಯಕನಿಗೆ ಒಬ್ಬ ಸಹೋದರ ಇದ್ದನು. ಬಳಗನಾಯಕನೆಂದು ಈತನು ಮುತ್ತಗಿ ಸುತ್ತಮುತ್ತಲಿನ ಪ್ರದೇಶವಾದ 'ವಡವಡಗಿ' ಎಂಬ ಪ್ರದೇಶದಲ್ಲಿ ಗೌಡಕಿ ಮಾಡುತ್ತಿದ್ದನು. ರಾಜಕೀಯ ಚತುರತೆ ಮತ್ತು ಬುದ್ಧಿವಂತಿಕೆಯಿಂದ ಹನುಮಪ್ಪನಾಯಕನು ಬಿಜಾಪುರ ಸುಲ್ತಾನನಾದ ಆದಿಲ್‌ಶಾಹಿ ಪ್ರೀತಿಗೆ ಪಾತ್ರನಾದನು.

ಇದರಿಂದ ಬಹುಬೇಗನೆ ಬಂಕಾಪುರ ಪ್ರಾಂತದ ಅಧಿಕಾರತ್ವವು ಹಂಡೆ ಹನುಮಪ್ಪನಾಯಕನಿಗೆ ದೊರಕಿತು. ಹೀಗೆ ನಿಷ್ಠೆಯಿಂದ ಸೇವೆ ಸಲ್ಲಿಸುತ್ತಿರುವಾಗ ಹಂಡೆ ಬಾಲದ ಹನುಮಪ್ಪನಾಯಕನಿಗೂ ಮತ್ತು ಸುಲ್ತಾನನಿಗೂ ವಿರೋಧ ಉಂಟಾಗಿ ಕೃಷ್ಣಾನದಿಯ ಮುಖಾಂತರವಾಗಿ ಬಳ್ಳಾರಿ ಕಡೆಗೆ ವಲಸೆ ಬಂದನು. ಹೀಗಿರುವಾಗ ಕ್ರಿ.ಶ. ೧೫೬೫ರಲ್ಲಿ ರಕ್ಕಸತಂಗಡಿ ಕದನದಲ್ಲಿ ಸೋತು ಅವನತಿ ಹೊಂದಿದ ವಿಜಯನಗರ ಸಾಮ್ರಾಜ್ಯದ ಶಾಖೆಯೊಂದು ಪೆನುಗೊಂಡದಿಂದ ಆಡಳಿತ ನಡೆಸುತ್ತಿತ್ತು. ಈ ಪೆನುಗೊಂಡದಿಂದ ರಾಜ್ಯವಾಳುತ್ತಿದ್ದ ವಿಜಯನಗರದ ಅರಸ ವೆಂಕಟಪತಿದೇವನ ಸಾಮಂತನಾಗಿ ಹಂಡೆ ಹನುಮಪ್ಪನಾಯಕನು ಬಳ್ಳಾರಿ ಸೀಮೆಯನ್ನು ಆಳುತ್ತಿದ್ದ ವಿಷಯ ಮಣ್ಣೂರ ಎಸ್.ಶಾಸನದಿಂದ ತಿಳಿದುಬರುತ್ತದೆ(ಕ.ವಿ.ವಿ, ಸಂ–೨, ನಂ–೬೩).

ರಾಜಕೀಯ ಅಸ್ತಿತ್ವ ಪಡೆದ ಹಂಡೆ ಹನುಮಪ್ಪನಾಯಕನು ಮುಂದೆ ಅಳಿಯರಾಮರಾಯನ ಕೋಶಾಧಿಕಾರಿಯಾದ ಬೊಕ್ಕಸದ ತಿಮ್ಮರಸ ವಿಜಯನಗರಕ್ಕೆ ದ್ರೋಹ ಎಸಗುವ ಸಂದರ್ಭದಲ್ಲಿ ಅವನನ್ನು ಹಿಡಿದು ಅಳಿಯ ರಾಮರಾಯನಿಗೆ ಒಪ್ಪಿಸುತ್ತಾನೆ. ಇದರಿಂದ ಅಳಿಯ ರಾಮರಾಯನು ಹನುಮಪ್ಪನಾಯಕನಿಗೆ ನಂದ್ಯಾಲ, ಧರ್ಮಾವರಂ, ಶಿರಗುಪ್ಪಿ, ಬಳ್ಳಾರಿ, ತೆಕ್ಕಲಕೋಟೆ, ಕುರುಗೋಡು ಗಳನ್ನು ದಾನವಾಗಿ ನೀಡಿ ಆಡಳಿತ ನಡೆಸಲು ಅನುವು ಮಾಡಿಕೊಡುತ್ತಾನೆ. ಈ ಎಲ್ಲ ದೃಷ್ಟಿಯಿಂದ ಹಂಡೆ ಅರಸುಮನೆತನಕ್ಕೆ ಕೀರ್ತಿ ಮತ್ತು ಮೂರ್ತ ಸ್ವರೂಪ ಕೊಟ್ಟವನು ಹಂಡೆ ಹನುಮಪ್ಪನಾಯಕ.

ಹಂಡೆ ಹನುಮಪ್ಪನಾಯಕನಿಗೆ ಐದು ಜನ ಮಕ್ಕಳಲ್ಲಿ ಅಂಕುಶರಾಯನಿಗೆ–ಬಂಕಾಪುರ ಸೀಮೆ, ದ್ಯಾಮಪ್ಪನಾಯಕನಿಗೆ ಶಿರಿವಾಳ ಸೀಮೆ, ನಿಚ್ಚಮದುವಣಿಗ ರಾಮಪ್ಪನಾಯಕನಿಗೆ ಸುಂದರ್ಪಿ ಸೀಮೆ, ಹಿರೇಮಲ್ಲಪ್ಪನಾಯಕನಿಗೆ ಅನಂತಪುರ, ಧರ್ಮಾವರ, ಕಣಿಕಲ್ಲು, ನಂದ್ಯಾಲದ ಭಾಗಗಳಿಗೆ ಹಾಗೂ ಚಿಕ್ಕಮಲ್ಲಪ್ಪನಾಯಕನಿಗೆ–ಬಳ್ಳಾರಿ, ಕುರುಗೋಡು, ತೆಕ್ಕಲಕೋಟೆ, ಶಿನ್ನೂರು, ಶಿರುಗುಪ್ಪ ಆಡಳಿತವನ್ನು ಸುವ್ಯವಸ್ಥಿತವಾಗಿ ಕಾಪಾಡಿಕೊಂಡು ಹೋಗಲು ಭೌಗೋಳಿಕವಾಗಿ ರಾಜ್ಯವನ್ನು ವಿಸ್ತರಿಸಿದ ಕೀರ್ತಿ ಹಂಡೆ ಹನುಮಪ್ಪನಾಯಕನಿಗೆ ಸಲ್ಲುತ್ತದೆ.

ವಿಜಯನಗರ ಸಾಮ್ರಾಜ್ಯದ ಸಾಮಂತರಾಗಿದ್ದ ಹಂಡೆ ಅರಸರು ಸಾಂಸ್ಕೃತಿಕವಾದ ಕಾರ್ಯಗಳನ್ನು ಮಾಡುತ್ತ ಬಂದಿದ್ದಾರೆ. ಇವರ ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ವ್ಯವಸ್ಥೆಯನ್ನು ತಿಳಿಯಲು ಆಕರಗಳು ಮಹತ್ವದ ಮಾಹಿತಿಯನ್ನು ನೀಡುತ್ತವೆ. ಅವುಗಳನ್ನು ಸಾಹಿತ್ಯ ಮತ್ತು ಸಾಹಿತ್ಯೇತರ ಆಕರಗಳೆಂದು ವರ್ಗೀಕರಿಸಿಕೊಂಡು ಅಧ್ಯಯನ ಮಾಡಲಾಗಿದೆ. ಸಾಹಿತ್ಯ ಆಕರಗಳಲ್ಲಿ ಅಹೋಬಲನ ವಿರೂಪಾಕ್ಷ ವಸಂತೋತ್ಸವ, ಭಕ್ತಿರಸ ಸೋನೆ, ಷಟಸ್ಥಲ ಶಿವಾಯಣ, ಬುಕ್ಕರಾಯ ಚರಿತೆ, ತರುಳ ಚರಪತಿ ವಿರಚಿತ ಗಂಗೆಗೌರಿ

ಸಂವಾದ, ಭಟ್ಟಾಂಗಿನಿ ಸಾಹಿತ್ಯ, ತೆಲುಗು ಕೃತಿಗಳಾದ ಶ್ರೀಶೈಲ ಪೀಠದರ್ಶನ, ಶ್ರೀಶೈಲ ಪಂಡಿತಾರಾಧ್ಯ ಚರಿತೆ, ಹಂಡೆ ಮಂಡಲ ಚರಿತ್ರೆ ಕಥಲು, ಹಂಡೆ ಅನಂತಪುರ ಚರಿತ್ರೆ, ಕರಿಬಸವಸ್ವಾಮಿ ಕಾವ್ಯ ಮುಂತಾದವುಗಳು. ಸಾಹಿತ್ಯೇತರ ಆಕರಗಳಲ್ಲಿ ಶಾಸನಗಳು, ಕೈಫಿಯತ್ತುಗಳು, ವಂಶಾವಳಿ, ಕೋಟೆ–ಕೊತ್ತಲಗಳು, ಸ್ಮಾರಕಗಳು ಮುಂತಾದ ಆಕರಗಳ ನೆರವಿನಿಂದ ಹಂಡೆ ಅರಸರ ಸಾಂಸ್ಕೃತಿಕ ಅನನ್ಯತೆಯನ್ನು ಕಂಡುಕೊಳ್ಳಲಾಗಿದೆ.

ಹಂಡೆ ಅರಸರು ಶೈವ ಪರಂಪರೆಯನ್ನು ಅವಲಂಬಿಸಿರುವುದು ಅಧ್ಯಯನದಿಂದ ತಿಳಿಯಬಹುದು. ಸೊನ್ನಲಿಗೆಯ ಸಿದ್ಧರಾಮೇಶ್ವರನನ್ನು ತಮ್ಮ ಆರಾಧ್ಯದೈವವಾಗಿ ಆರಾಧಿಸುತ್ತಾ ಬಂದಿದ್ದಾರೆ. ದೇವಾಲಯಗಳ ನಿರ್ಮಾಣ ಮತ್ತು ಅವುಗಳ ಜೀರ್ಣೋದ್ಧಾರದ ಕಾರ್ಯ, ದಾನ–ದತ್ತಿ ನೀಡುವುದು ಹಾಗೂ ವೀರಶೈವ ಪರಂಪರೆಯ ಮಠಗಳಾದ ಹಂಪೆಯ ಹೇಮಕೂಟ ಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಕೊಟ್ಟೂರಸ್ವಾಮಿ ಮಠ, ನಿಡುಮಾಮಿಡಿ ಮಠ ಹಾಗೂ ಬಳ್ಳಾರಿಯ ಕೊಟ್ಟೂರಸ್ವಾಮಿ ಮಠಗಳಿಗೆ ಭಕ್ತಿಪೂರ್ವಕವಾಗಿ ನಡೆದುಕೊಂಡವರು. ಬಳ್ಳಾರಿ, ಕುರುಗೋಡು, ಗುಡೆಕೋಟೆ, ಕುಡುತಿನಿ ಮತ್ತು ಅನಂತಪುರ ಮುಂತಾದ ಪ್ರದೇಶಗಳಲ್ಲಿ ದೇವಾಲಯಗಳನ್ನು ನಿರ್ಮಾಣ ಮಾಡಿದರು. ಹೀಗಾಗಿ ಧಾರ್ಮಿಕ ಕ್ಷೇತ್ರಕ್ಕೆ ಅಮೋಘವಾದ ಕೊಡುಗೆಗಳನ್ನು ಕೊಟ್ಟದ್ದಾರೆ. ತಮ್ಮ ಹಿರಿಯರಿಗೆ ಪುಣ್ಯವಾಗಲೆಂದು ದಾನ–ದಾಸೋಹದ ಪರಿಕಲ್ಪನೆಯನ್ನು ಹೆಚ್ಚಾಗಿ ಪ್ರಚುರಪಡಿಸಿದವರು. ಇಂದಿಗೂ ದಾಸೋಹದ ಪರಿಕಲ್ಪನೆಯನ್ನು ಹಂಡೆ ಅರಸರ ಪ್ರಮುಖ ನಾಯಕಿಯಾದ ಮತ್ತು ಹನುಮಪ್ಪನಾಯಕನ ಹೆಂಡತಿ ಅವ್ವಮ್ಮಳ ಹೆಸರಿನಲ್ಲಿ ಬಳ್ಳಾರಿ ಕೊಟ್ಟೂರುಸ್ವಾಮಿ ಮಠದಲ್ಲಿ 'ಅವ್ವಮ್ಮ ದಾಸೋಹ'ವನ್ನು ನಡೆಸಿಕೊಂಡು ಬಂದಿರುವುದನ್ನು ಇಂದಿಗೂ ಕಾಣಬಹುದು.

'ಹಂಡೆ ವಜೀರ' ಎಂಬ ಪರಿಕಲ್ಪನೆಯಲ್ಲಿ ಪದದ ಅರ್ಥವನ್ನು ಕುರಿತು ಚರ್ಚಿಸಲಾಗಿದೆ. ಈ ಪದವು ಮುಸ್ಲಿಂ ಅರಸರ ಕಾಲದಲ್ಲಿ ಬಳಕೆಯಾಗಿದ್ದು, 'ವಜೀರ' ಎನ್ನುವುದಕ್ಕೆ 'ನಾಯಕ', ದಂಡನಾಯಕ, ಅಮಾತ್ಯ, ದಿವಾನ, ಸೇನಾಧಿಕಾರಿ ಎಂಬಿತ್ಯಾದಿ ಅರ್ಥಗಳನ್ನು ಕೊಡಲಾಗಿದೆ.

ಹಂಡೆ ಅರಸರು ಧಾರ್ಮಿಕವಾಗಿ ಹೆಚ್ಚಿನ ಪ್ರಾಮುಖ್ಯತೆಯನ್ನು ಕಂಡುಕೊಂಡವರು. ಇವರು ದೇವಾಲಯಗಳ ನಿರ್ಮಾಣದ ಜೊತೆಗೆ ಮಠ–ಮಾನ್ಯಗಳಿಗೆ ನೀಡಿದ ದಾನ–ದತ್ತಿಯು ಅನುಪಮವಾದದ್ದು. ಶ್ರೀ ಕೂಡ್ಲಿ ಶೃಂಗೇರಿ ಮಠದ ಶಂಕರ ಭಾರತಿ ಸ್ವಾಮಿಗೆ ಹಂಡೆ ಅರಸರ ಹಿರೇ ರಾಮಪ್ಪನಾಯಕನ ಪುತ್ರನಾದ ಪವಾಡಪ್ಪನಾಯಕನು ತಮ್ಮ ಹಿರಿಯರಿಗೆ ಪುಣ್ಯವಾಗಲೆಂದು ಮತ್ತು ಶ್ರೀ ವಿದ್ಯಾ ಶಂಕರದೇವರ ದೀಪಾರಾಧನೆಗೆ ಅಲ್ಲಾಪುರವೆಂಬ ಗ್ರಾಮವನ್ನು ಕ್ರಿ.ಶ. ೧೬೬೦ರಲ್ಲಿ ಧಾರ್ಮಿಕ ಕಾರ್ಯಗಳಿಗೆ ದಾನ ನೀಡಿರುತ್ತಾನೆ. ಹೀಗಾಗಿ

ಮಧ್ಯ ಕರ್ನಾಟಕವರೆಗೂ ಇವರ ಆಳ್ವಿಕೆ ಇತ್ತು ಎಂದು ಮನಃಗಾಣಬಹುದು. ಚಾರಿತ್ರಿಕವಾಗಿ ಹಂಡೆ ಅರಸರು ಶೃಂಗೇರಿ ಮಠಕ್ಕೆ ಭಕ್ತಿಯಿಂದ ಮಣಿದವರು. ಈ ಮಠಕ್ಕೆ ಪವಾಡಪ್ಪನಾಯಕನು ಎರಡು ಬಾರಿ ದಾನ ನೀಡಿದ ವಿವರಗಳು ಕಂಡುಬರುತ್ತವೆ.

ಹಂಡೆ ಅರಸರ ಕುರಿತಾಗಿ ವೀರಶೈವ ಪರಂಪರೆಯ ಹೆಚ್ಚು ಆಕರಗಳು ಲಭ್ಯವಾಗುತ್ತವೆ. ಈ ಅರಸರು ಪರಧರ್ಮ ಸಹಿಷ್ಣುತಾ ಭಾವನೆವುಳ್ಳಾವರಾಗಿದ್ದು ಎಲ್ಲ ಧರ್ಮಗಳನ್ನು ಸಮಾನ ದೃಷ್ಟಿಯಿಂದ ಕಂಡವರು. ಹೀಗಾಗಿ ಧಾರ್ಮಿಕ ಕಾರ್ಯಗಳಿಗೆ ಹೆಚ್ಚು ಮನ್ನಣೆ ನೀಡುವುದರ ಜೊತೆಗೆ ಸಾಮಾಜಿಕ ಕಾರ್ಯಗಳಿಗೆ ಅಷ್ಟೇ ಆದ್ಯತೆಯನ್ನು ಕೊಟ್ಟವರು ಈ ಅರಸರು.

ಜನಕಲ್ಯಾಣಕ್ಕಾಗಿ ಅನೇಕ ಸಾಮಾಜಿಕ ಕಾರ್ಯಗಳನ್ನು ಕೈಗೊಂಡವರು ಹಂಡೆ ಅರಸರು. ಪ್ರಮುಖವಾಗಿ ಕೆರೆ–ಬಾವಿ, ಹೊಂಡ, ಸರೋವರ, ತಟಾಕಗಳು, ಕಾಲುವೆಗಳು, ಸ್ಮಾರಕಗಳು, ಕೋಟೆ–ಕೊತ್ತಲಗಳು ಹಾಗೂ ಒಡ್ಡುಗಳು ಇಂಥ ಕಲಾತ್ಮಕವಾದ ವಾಸ್ತು ಕಲೆಗಳನ್ನು ಸೃಷ್ಟಿಸಿದವರು. ಬುಕ್ಕರಾಯನ ಚರಿತ್ರೆ ವಂಶಾವಳಿಯಲ್ಲಿ ಕೆರೆ ದುರಸ್ತಿ ಮಾಡುವ ಉಲ್ಲೇಖಗಳು ಕಂಡುಬರುತ್ತವೆ. ವಂಶಾವಳಿಯು ಪ್ರಾರಂಭವಾಗುವುದೇ ಪ್ರಧಾನಿ ಚಿಕ್ಕಪ್ಪ ಒಡೆಯ ಪಾಂಡುನದಿಗೆ ತಟಾಕ ಕಟ್ಟಿಸುವುದರಿಂದ ಪ್ರಾರಂಭವಾಗುತ್ತದೆ. ಮಲ್ಕಪ್ಪನಾಯಕನು ಅನಂತಪುರದಲ್ಲಿ ಕೆರೆ ನಿರ್ಮಿಸಿದ ಉದಾಹರಣೆಗಳು ಕಂಡುಬರುತ್ತವೆ. ನೀರು ಸಂಗ್ರಹಣೆಗಾಗಿ ಬಳ್ಳಾರಿಯ ಕೋಟೆಯ ಮೇಲೆ ಹೊಂಡಗಳು ಇರುವುದನ್ನು ಕಾಣಬಹುದು.

ಹಂಡೆ ಅರಸರು ಪ್ರಮುಖವಾಗಿ ಜೀವನದ ಮೂಲ ಅಗತ್ಯಗಳಲ್ಲಿ ನೀರು ಒಂದು ಪ್ರಮುಖ ವಸ್ತು ಎಂದು ತಿಳಿದಿದ್ದರು. ಈ ಅಗತ್ಯವನ್ನು ಪೂರೈಸಲು ಬಾವಿಗಳನ್ನು ತೋಡಿಸುತ್ತಿದ್ದರು. ಕೊರ್ಲಗುಂದ ಗ್ರಾಮದಲ್ಲಿ ಹಾಲಬಸವೇಶ್ವರ ಬಾವಿ, ಅಂದ್ರಾಳಿನಲ್ಲಿ ನೀಲಮ್ಮನ ಬಾವಿ, ಬಳ್ಳಾರಿಯಲ್ಲಿರುವ ಅಮ್ಮವ್ವನ ಬಾವಿ ಹಾಗೂ ಬಂಕಾಪುರದಲ್ಲಿರುವ ಪಂಚಮಲಕ್ಕಪ್ಪನ ಬಾವಿಗಳು ಪ್ರಮುಖವಾಗಿ ಕಂಡುಬರುತ್ತವೆ. ಪಂಚಲಕ್ಕಪ್ಪನ ಬಾವಿಯು ಹಂಡೆ ಹನುಮಪ್ಪನಿಗೆ ಐದು ಜನ ಮಕ್ಕಳಿದ್ದು, ಈ ಐದುಜನ ಸಹೋದರರ ಹೆಸರನ್ನೇ ಸೂಚಿಸುವ ಹಿನ್ನೆಲೆಯಲ್ಲಿ ಈ ಬಾವಿಯು ಇರಬಹುದಾಗಿದೆ. ಬಹುಶಃ ಚಿಕ್ಕಮಲ್ಕಪ್ಪನಾಯಕರು ಈ ಬಾವಿ ನಿರ್ಮಾಣಕ್ಕೆ ಕಾರಣರಾಗಿರ ಬಹುದು. ಉಳಿದ ಮೂವರು ಸಹೋದರರು ಈ ಕಾರ್ಯಕ್ಕೆ ಕೈ ಜೋಡಿಸಿರಬಹುದೆಂದು ಈ ಬಾವಿಗೆ ಪಂಚಮಲ್ಕಪ್ಪನ ಬಾವಿ ಎಂದು ಹೆಸರು ಬಂದಿರಬಹುದು.

ರಕ್ಷಣೆ ದೃಷ್ಟಿಯಿಂದ ಕೋಟೆ ಅಥವಾ ದುರ್ಗಗಳನ್ನು ಶತ್ರುಪಡೆಯು ಹತ್ತಿರ ಬರದಂತೆ ಕಡಿದಾದ ಬೆಟ್ಟದ ಮೇಲೆ ನಿರ್ಮಾಣ ಮಾಡಲಾಗುತ್ತಿತ್ತು. ಬಳ್ಳಾರಿ ಮಧ್ಯಭಾಗದಲ್ಲಿರುವ ದೊಡ್ಡ ಬೆಟ್ಟದ ಮೇಲೆ ನಾಲ್ಕು ಸುತ್ತಿನ ಗೋಡೆಯುಳ್ಳ ಕೋಟೆಯನ್ನು ಕಟ್ಟಲಾಗಿದೆ. ಈ

ಕೋಟೆಗೆ ಎರಡು ಭಾಗಗಳಿದ್ದು ಮೊದಲನೇ ಕೋಟೆಯನ್ನು ಬೆಟ್ಟದ ಪೂರ್ವಕ್ಕಿರುವ ಸಮತಟ್ಟಾದ ಬೆಟ್ಟವನ್ನು ಹಂಡೆ ಹನುಮಪ್ಪನಾಯಕನು ಈ ಜೀರ್ಣೋದ್ಧಾರ ಮಾಡಿದನು. ಮುಂದೆ ಕ್ರಿ.ಶ. ೧೭೨೬-೧೭೩೦ರಲ್ಲಿ ಆಳ್ವಿಕೆಗೆ ಬಂದ ಚಿಕ್ಕ ರಾಮಪ್ಪನಾಯಕನು ಬಳ್ಳಾರಿಯ ಕೆಳಗಿನ ಕೋಟೆಯನ್ನು ನಿರ್ಮಿಸಿದನು. ಈ ಕೋಟೆ ಹತ್ತಲು ಬೆಟ್ಟದ ಆಗ್ನೇಯ ದಿಕ್ಕಿನಲ್ಲಿ ಮೆಟ್ಟಿಲುಗಳಿವೆ. ಕೋಟೆಯ ಮೇಲ್ಭಾಗದಲ್ಲಿ ಮಲ್ಲೇಶ್ವರ ದೇವಾಲಯ, ಬಸವಣ್ಣನ ದೇವಾಲಯ, ನಂದಿ ಮಂಟಪ ಕಂಡುಬರುತ್ತದೆ. ತರುವಾಯ ಕ್ರಿ.ಶ. ೧೫೭೫ರಲ್ಲಿ ಹೈದರಾಲಿಯು ಕೋಟೆಯನ್ನು ವಶಪಡಿಸಿಕೊಂಡು ತನ್ನ ಮಗನಾದ ಟಿಪ್ಪು ಸುಲ್ತಾನನಿಗೆ ಕ್ರಿ.ಶ. ೧೭೮೪ರಲ್ಲಿ ವರ್ಗಾವಣೆ ಮಾಡುತ್ತಾನೆ.

ಹಂಡೆ ಅರಸರು ಆರ್ಥಿಕವಾಗಿ ಪ್ರಭಲರಾಗಿರದಿದ್ದರು ಸಾಂಸ್ಕೃತಿಕವಾಗಿ ಉನ್ನತವಾದ ಕಾರ್ಯಗಳನ್ನು ಮಾಡಿದ್ದಾರೆ. ಇವರ ಆದಾಯದ ಮೂಲವೆಂದರೆ ಭೂದಾನ ಮತ್ತು ಜಹಗೀರು ಗ್ರಾಮಗಳಿಂದ ಬಂದ ಸುಂಕವನ್ನು ಸಾಮಾಜಿಕ ಕಾರ್ಯಗಳಿಗೆ ವಿನಿಯೋಗಿಸಿಕೊಳ್ಳುತ್ತಿದ್ದರು. ಭೂಮಿಯ ಉತ್ಪನ್ನಗಳನ್ನು ಗಣನೆಗೆ ತೆಗೆದುಕೊಂಡು ತೆರಿಗೆಯನ್ನು ವಿಧಿಸುತ್ತಿದ್ದರು. ಬಳ್ಳಾರಿ, ಹೊಸಪೇಟೆ, ಕುರುಗೋಡು ಮುಂತಾದ ಪಟ್ಟಣಗಳು ಇವರ ಕಾಲದ ವ್ಯಾಪಾರ ಕೇಂದ್ರಗಳಾಗಿದ್ದವು.

ಇವರು ಸುಮಾರು ಮೂರುನೂರಾಇಪ್ಪತ್ತನಾಲ್ಕು ವರ್ಷಗಳ ಸುದೀರ್ಘ ಕಾಲ ಆಳ್ವಿಕೆ ನಡೆಸಿದ್ದಾರೆ. ಕರ್ನಾಟಕದ ಇತಿಹಾಸದಲ್ಲಿ ಅದರಲ್ಲಿಯೂ ಸ್ಥಳೀಯ ಅರಸರ ಇತಿಹಾಸದಲ್ಲಿ ಪ್ರಮುಖವಾಗಿ ದಾಖಲಾಗದೆ ಇರುವ ಹಂಡೆ ಅರಸರನ್ನು ಪ್ರಸ್ತುತ ಅದ್ಯಯನವು ಅವರ ಪ್ರಮುಖ ಸಾಂಸ್ಕೃತಿಕ ಕೊಡುಗೆಗಳನ್ನು ಇಲ್ಲಿ ಅಧಿಕೃತವಾಗಿ ಆಕರಗಳ ಮೂಲಕ ಕಟ್ಟಿಕೊಡುವ ಕೆಲಸವನ್ನು ಮಾಡಲಾಗಿದೆ. ಆದರೆ ಇವರ ಧಾರ್ಮಿಕ ಮತ್ತು ಸಾಮಾಜಿಕ ಕೊಡುಗೆಗಳನ್ನು ನೋಡಿದರೆ ಇತರೆ ಅರಸು ಮನೆತನಗಳಿಗಿಂತ ಈ ಅರಸು ಮನೆತನದ ಕೊಡುಗೆಗಳು ಭಿನ್ನವಾಗಿವೆ. ಇವರ ಉದಾರನೀತಿ, ಜನೋಪಕಾರಿ ಕಾರ್ಯಗಳಿಂದ, ಸರ್ವಧರ್ಮಗಳಿಗೆ ಆದ್ಯತೆ ನೀಡಿದ್ದು, ಮಠ-ಮಾನ್ಯಗಳಿಗೆ ದಾನ-ದತ್ತಿ ನೀಡಿದ್ದು, ಗುರುಪರಂಪರೆಗೆ ಭಕ್ತಿಪೂರ್ವಕವಾಗಿ ಗೌರವಿಸಿದ್ದು ಈ ಎಲ್ಲ ಗುಣಗಳಿಂದ ಹಂಡೆ ಅರಸರು ಚರಿತ್ರೆಯಲ್ಲಿ ಇಂದಿಗೂ ಪ್ರಸ್ತುತರೆನಿಸುತ್ತಾರೆ.

## ಫಲಿತಗಳು

೧. ಉಪೇಕ್ಷೆಗೆ ಒಳಗಾಗಿದ್ದ ಹಂಡೆ ಅರಸುಮನೆತನದ ಚರಿತ್ರೆಯನ್ನು ಶಾಸನಗಳ ಆಧಾರದಿಂದ ಕ್ರಮಬದ್ಧವಾಗಿ ಅಧ್ಯಯನಕ್ಕೊಳಪಡಿಸಲಾಗಿದೆ. ಇಲ್ಲಿ ಹಂಡೆ ಅರಸರ ಇತಿಹಾಸದ ಬೇರುಗಳು ಡಾ.ಎಂ.ಎಂ.ಕಲಬುರ್ಗಿಯವರು ಹೇಳುವಂತೆ ಮತ್ತು ಶಾಸನಗಳ ಆಧಾರದಿಂದ ಇವರ ಪೂರ್ವ ಪರಂಪರೆ ಬಾದಾಮಿ ಚಾಲುಕ್ಯರವರೆಗೂ ಇರುವುದನ್ನು ಕಂಡುಕೊಳ್ಳಲಾಗಿದೆ.

ಹಂಡೆ ಅರಸ ಮತ್ತು ಹಂಡೆ ವಜೀರ್ ಪದದ ಸಾಂದರ್ಭಿಕ ಅರ್ಥವನ್ನು ಶಾಸನಗಳ ಮೂಲಕ ಮತ್ತು ಮುಸ್ಲಿಂ ಅರಸರ ಕಾಲದ ಸಂದರ್ಭದ ಹಿನ್ನೆಲೆಯಲ್ಲಿ ಕಟ್ಟಿಕೊಡಲಾಗಿದೆ.

೨. ಹಂಡೆ ಅರಸು ಮನೆತನದ ಆಕರ ಸಾಮಗ್ರಿಗಳನ್ನು ಮತ್ತು ಇದುವರೆಗೂ ನಡೆದ ಅಧ್ಯಯನದ ಸಮಿಕ್ಷೆಯನ್ನು ಈ ಅರಸರ ಕಾಲದಲ್ಲಿ ರಚನೆಯಾದ ಸಾಹಿತ್ಯ ಸೃಷ್ಠಿಯನ್ನು ಮತ್ತು ಶಾಸನಗಳನ್ನು ಮುಖ್ಯವಾಹಿನಿಗೆ ತರಲಾಗಿದೆ.

೩. ಈಗಾಗಲೇ ಆಕರಗಳನ್ನು ಸಾಹಿತ್ಯ ಮತ್ತು ಸಾಹಿತ್ಯೇತರ ಆಕರಗಳೆಂದು ವರ್ಗೀಕರಿಸಿಕೊಂಡು ಅಧ್ಯಯನ ಮಾಡಲಾಗಿದ್ದು, ಸಾಹಿತ್ಯ ಆಕರಗಳಲ್ಲಿ ಬುಕ್ಕರಾಯ ಚರಿತೆ, ಅಹೋಬಲ ವಿರಚಿತ ವಿರೂಪಾಕ್ಷ ವಸಂತೋತ್ಸವ, ತರುಳ ಚರಪತಿ ವಿರಚಿತ ಗಂಗೆಗೌರಿ ಸಂವಾದ, ಭಕ್ತಿರಸಸೋನೆ, ಷಟಸ್ಥಲ ಶಿವಾಯಣ, ಶ್ರೀ ಶೈಲ ಪೀಠ ದರ್ಶನ, ಕರಿಬಸವ ಕಾವ್ಯ, ಹಂಡೆ ಮಂಡಲ ಚರಿತ್ರೆ, ಶ್ರೀ ಶೈಲ ಪಂಡಿತರಾಧ್ಯ ಚರಿತ್ರೆ, ರಸಿಕ ಮನೋರಂಜನ ವಿಲಾಸ, ಭಟಾಂಗಿನಿ ಸಾಹಿತ್ಯ ಮೊದಲಾದ ಕೃತಿಗಳನ್ನು ಅನುಲಕ್ಷಿಸಿ ಹಂಡೆ ಅರಸುಮನೆತನದ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಮಹತ್ವವನ್ನು ಕಂಡುಕೊಳ್ಳಲಾಗಿದೆ.

೪. ೧೪-೧೫ನೇ ಶತಮಾನದಲ್ಲಿ ಅಸ್ತಿತ್ವಕ್ಕೆ ಬಂದ ಅಂದಿನ ಪಾಳೆಯಗಾರರೆಲ್ಲರೂ ತಮ್ಮ ಅಸ್ತಿತ್ವವನ್ನು ದಾಖಲಿಕರಣಗೊಳಿಸುವ ಮೂಲಕ ತಾವು ಸ್ವತಂತ್ರ ರಾಜರಂತೆ ಕಾರ್ಯಗಳನ್ನು ಮಾಡಿದ್ದಾರೆ. ೧೨ನೇ ಶತಮಾನದ ಬಸವತತ್ವವನ್ನು ಅನುಸರಿಸಿಕೊಂಡು ಬಂದು ಸಮಾಜದಲ್ಲಿ ಎಲ್ಲರನ್ನು ಸಮಾನ ರೀತಿಯಿಂದ ಕಾಣುವ ಧರ್ಮಸಮನ್ವಯತೆಯನ್ನು ಈ ಅರಸರು ಸಹ ಪಾಲಿಸಿಕೊಂಡು ಬಂದಿದ್ದಾರೆ. ಉದಾಹರಣೆಗೆ ದಾಸೋಹ ಪರಂಪರೆ, ದಾನ ಪರಂಪರೆ ಮುಂತಾದವುಗಳು.

೫. ಹಂಡೆ ಅರಸುಮನೆತನದ ಬಹುಮಟ್ಟಿನ ವಿಷಯ ಕರ್ನಾಟಕ ಹಾಗೂ ಆಂಧ್ರದ ಗಡಿ ಭಾಗಗಳಲ್ಲಿ ದೊರೆತಿದ್ದು, ಈ ವಿಷಯವಾಗಿ 'ಹಂಡೆ ಅನಂತಪುರ ಕೈಫಿಯತ್ತು' ಮಹತ್ವದ ದಾಖಲೆ ಎನಿಸಿದೆ. ಇದಕ್ಕೆ ಪೂರಕವೆಂಬಂತೆ ಸಮಕಾಲೀನ ಕಾವ್ಯಗಳಾದ ಪುಲ್ಲಕವಿ ವಿರಚಿತ ಶ್ರೀಶೈಲ ಪಂಡಿತಾರಾಧ್ಯ ಚರಿತೆ, ಸಿರಿಪಿ ಆಂಜನೇಯಲು ವಿರಚಿತ ಕರಿಬಸವಸ್ವಾಮಿ ಕಾವ್ಯ, ಶ್ರೀಶೈಲ ಪೀಠದರ್ಶನ, ಭಟಾಂಗಿನಿ ಸಾಹಿತ್ಯ, ಸೊಬಗಿನ ಸೋನೆ, ಷಟಸ್ಥಲ ಶಿವಾಯಣ, ಸಿ.ಪಿ.ಬ್ರೌನ್ ಅವರ ವಾರ್ಸ್ ಆಫ್ ದಿ ರಾಜಾಸ್ ಹೀಗೆ ಹಲವು ಕಾವ್ಯ ಕೃತಿಗಳಲ್ಲಿ ಹಂಡೆ ಅರಸುಮನೆತನಕ್ಕೆ ಸಂಬಂಧಪಟ್ಟಂತೆ ಮಠಮಾನ್ಯಗಳಲ್ಲಿ ಇರುವ ದಾನಪತ್ರ, ತಾಮ್ರಪತ್ರಗಳ ಮೂಲಕ ಈ ಅರಸರ ಧಾರ್ಮಿಕ ಆಚರಣೆ ಮತ್ತು ಸಾಂಸ್ಕೃತಿಕ ಆಚರಣೆಗಳನ್ನು ಅಧ್ಯಯನಕ್ಕೊಳಪಡಿಸಲಾಗಿದೆ.

೬. ಹಂಡೆ ಅರಸುಮನೆತನದ ಹಂಡೆ ಹನುಮಪ್ಪನಾಯಕನ ಐದು ಜನ ಮಕ್ಕಳಾದ ಅಂಕುಶರಾಯ, ದ್ಯಾಮಪ್ಪನಾಯಕ, ನಿಚ್ಚಮದುವಣಿಗ ರಾಮಪ್ಪನಾಯಕ, ಹಿರೇ ಮಲ್ಲಪ್ಪ ನಾಯಕ, ಚಿಕ್ಕ ಮಲ್ಲಪ್ಪನಾಯಕ ಇವರನ್ನು ಕುರಿತು ಭಟಾಂಗಿನಿ ಸಾಹಿತ್ಯವು ಮಹಾಭಾರತದ ಪಾಂಡವರನ್ನು ಸಮೀಕರಿಸಿದೆ.

ಧರೆಗೆ ಧರ್ಮಜನಂಕುಶ

ಪರಬಲದೊಳ್ ಭೀಮದೇವ ಅರ್ಜುನರಾಮ

ಧುರಧೀರನು ನಕುಲ ಮಲ್ಲನು

ನೆರೆಗೆಲೆ ಸಹದೇವಾ ಚಿಕ್ಕಮಲ್ಲ ವಜೀರಾ...

ಈ ಐವರ ಗುಣಗಾನ ಮಾಡಿದ ಕುರುಗೋಡು ಮತ್ತು ಬಳ್ಳಾರಿ ಕೈಫಿಯತ್ತು ಅಂಕುಶರಾಯನನ್ನು ಬಹುಧರ್ಮಿಷ್ಠನೆಂತಲೂ, ದ್ಯಾಮಪ್ಪನಾಯಕನನ್ನು ಬಹುಪರಾಕ್ರಮಿ ಎಂತಲೂ, ನಿಚ್ಚಮದುವಣಿಗ ರಾಮಪ್ಪನಾಯಕನನ್ನು ಬಹುಭೋಗಿ ಎಂದೂ, ಹಿರೇಮಲ್ಲಪ್ಪ ಮತ್ತು ಚಿಕ್ಕಮಲ್ಲಪ್ಪನಾಯಕರನ್ನು ನಕುಲ–ಸಹದೇವರಂತೆ ಪ್ರಸಿದ್ಧ ಪುರುಷರೆಂದು ವರ್ಣಿಸುತ್ತದೆ. ಹೀಗೆ ಮೇಲಿನ ಐದು ಜನ ಅರಸರು ಶೂರರು, ಅಂಕುಶದಂತೆ ಆನೆಗಳನ್ನು ಪಳಗಿಸಿದವರು, ವೈರಿಗಳನ್ನು ಅಂಕುಶದಲ್ಲಿ ಹಿಡಿದಿರುವ ಈತನು ಬಲದಲ್ಲಿ ಭೀಮದೇವ–ಅರ್ಜುನನಂತೆ ಪರಾಕ್ರಮವನ್ನು ಉಳ್ಳವನಾಗಿದ್ದಾನೆ ಎಂದು ಪುರಾಣಪಾತ್ರದ ಪ್ರತೀಕವಾಗಿ ಮತ್ತು ಮಹಾಭಾರತದ ಪಾಂಡವರಿಗೆ ಸಮೀಕರಿಸಿ ಹೊಗಳಿದ ಸ್ತುತಿಯು ಕಂಡುಬರುತ್ತದೆ.

೭. ಹಂಡೆ ಅರಸುಮನೆತನದ ಮೂಲ ಪ್ರದೇಶವಾದ ಮುತ್ತಗಿಯಿಂದ ಹಿಡಿದು ಬಳ್ಳಾರಿ ಪ್ರದೇಶದ ಸುತ್ತಮುತ್ತಲಿನ ಭಾಗಗಳು ಹಾಗೂ ಆಂಧ್ರದ ಗಡಿಭಾಗಗಳಾದ ಅನಂತಪುರ, ಧರ್ಮಾವರ, ನಿಡುಮಾಮಿಡಿ, ನಂದ್ಯಾಲ ಮುಂತಾದ ಪ್ರದೇಶಗಳಲ್ಲಿ ಹಂಡೆ ಬಾಲದ ಹನುಮಪ್ಪನಾಯಕ ಮತ್ತು ಆತನ ಮಕ್ಕಳು ಆಳ್ವಿಕೆ ನಡೆಸಿದ ಮಾಹಿತಿ ದೊರಕುತ್ತದೆ.

೮. ಹಂಡೆ ಅರಸುಮನೆತನದವರು ಧಾರ್ಮಿಕ ಮನೋಭಾವವುಳ್ಳವರು. ಇವರು ವೀರಶೈವ ಮತ್ತು ವೈದಿಕ ಪೀಠಗಳಲ್ಲಿ ಅವರಿರಿಸಿದ ಭಕ್ತಿ, ಶ್ರದ್ಧೆ ಅನುಪಮವಾದುದು. ೧೫– ೧೬ನೆಯ ಶತಮಾನದಲ್ಲಿ ಅನೇಕ ಮಾಂಡಳಿಕರು, ಸಾಮಂತ ಅರಸರು ಹಾಗೂ ಪಾಳೆಯಗಾರರು ಆಡಳಿತ ನಿರ್ವಹಿಸುವಾಗ ರಾಜ್ಯ ವಿಸ್ತರಣೆಗೆ ತೊಡಗಿದರು. ಆದರೆ ಹಂಡೆ ಅರಸರು ರಾಜ್ಯ ವಿಸ್ತರಣೆ ಬಗ್ಗೆ ಆಸಕ್ತಿ ಹೊಂದದೆ ಜನಕಲ್ಯಾಣಕ್ಕಾಗಿ ಮಠ– ಮಾನ್ಯಗಳಿಗೆ ದಾನ–ದತ್ತಿ ನೀಡುವ ಮೂಲಕ ಸಾಮಾಜಿಕ ಕಾರ್ಯಗಳಿಗೆ ತಮ್ಮನ್ನು

ತೊಡಗಿಸಿಕೊಂಡವರು. ಇವರ ಕಾಲದಲ್ಲಿ ಅನೇಕ ಕಲಾತ್ಮಕ ವಾಸ್ತುಗಳು ನಿರ್ಮಾಣವಾದವು. ಅವುಗಳಲ್ಲಿ ಸರೋವರ, ಹೊಂಡಗಳು, ಕೆರೆ–ಬಾವಿಗಳು, ತಟಾಕ–ಕಾಲುವೆಗಳು, ಬುರುಜುಗಳು, ಒಡ್ಡುಗಳು ನಿರ್ಮಿಸುವ ಮೂಲಕ ಹಂಡೆ ಅರಸರು ಕೃಷಿ ವ್ಯವಸ್ಥೆಗೆ ಹೆಚ್ಚಿನ ಆದ್ಯತೆ ಕೊಟ್ಟಿರುವುದನ್ನು ಕಂಡುಕೊಳ್ಳಲಾಗಿದೆ.

೯. ಹಂಡೆ ಅರಸರ ಆಡಳಿತದ ಅನುಕೂಲಕ್ಕೆ ಆರ್ಥಿಕತೆಯು ಬೆನ್ನೆಲುಬಾಗಿತ್ತು. ಹಂಡೆ ಹನುಮಪ್ಪನಾಯಕ, ಅಂಕುಶರಾಯ, ಹಿರೇ ರಾಮಪ್ಪನಾಯಕರು ತಮ್ಮ ಹಿರಿಯರಿಗೆ ಪುಣ್ಯವಾಗಲೆಂದು ಅನೇಕ ಜಹಗೀರು ಗ್ರಾಮಗಳನ್ನು ಮತ್ತು ಭೂಮಿಯನ್ನು ದಾನವಾಗಿ ನೀಡುತ್ತಿದ್ದರು. ಭೂದಾನ ಮಾಡಿದ ನಂತರ ಆ ದಾನದಿಂದ ಬಂದ ಕಂದಾಯವನ್ನು ಸಾಮಾಜಿಕ ಕಾರ್ಯಗಳಿಗೆ ಬಳಸುತ್ತಿದ್ದರು. ತೂಬುಗಳ ನಿರ್ಮಾಣ ಅಂದರೆ ಕೆರೆ ಕಟ್ಟಿಸಿದ ನಂತರ ಕಟ್ಟೆ ಒಡೆದುಹೋಗದಂತೆ ಅವುಗಳ ನಿರ್ಮಾಣ ಕಾರ್ಯಗಳಿಗೆ ಹಣವನ್ನು ವ್ಯಯಿಸುತ್ತಿದ್ದರು. ಈ ದೃಷ್ಟಿಯಿಂದ ಹಂಡೆ ಅರಸರು ಹೆಚ್ಚಾಗಿ ಭೂಮಿಯನ್ನು ದಾನ ಮಾಡುತ್ತಿದ್ದರು. ಇವರ ಕಾಲದಲ್ಲಿ ವಾಣಿಜ್ಯ ಮಾರುಕಟ್ಟೆ ಕೇಂದ್ರಗಳೆಂದರೆ ಹಂಪಿ, ಬಳ್ಳಾರಿ, ಕುರುಗೋಡು, ಸಂಗನಕಲ್ಲು ಮುಂತಾದ ಕಡೆ ಜಾತ್ರೆಯ ಸಂದರ್ಭದಲ್ಲಿ ಜಾನುವಾರುಗಳ ವ್ಯಾಪಾರ ನಡೆಯುತ್ತಿತ್ತು. ಹಂಡೆ ಹನುಮಪ್ಪನಾಯಕನು ಇದರಲ್ಲಿ ಭಾಗಿಯಾಗಿದ್ದರ ಉಲ್ಲೇಖಗಳು ಕಂಡುಬರುತ್ತವೆ. ಹಂಡೆ ದ್ಯಾಮಪ್ಪನಾಯಕನು ಹಂಪೆಯಲ್ಲಿ ನಡೆದ ವಿರೂಪಾಕ್ಷ ವಸಂತೋತ್ಸವದಲ್ಲಿ ಭಾಗಿಯಾದ ಉದಾಹರಣೆಗಳು ಕಂಡುಬರುತ್ತವೆ.

೧೦. ಹಂಡೆ ಅರಸುಮನೆತನದ ಮೇಲೆ ಬೆಳಕು ಚೆಲ್ಲುವಲ್ಲಿ ಅವರ ಶಾಸನಗಳು ಮತ್ತು ಸಾಹಿತ್ಯ ಕೃತಿಗಳು ಪ್ರಮುಖ ಆಧಾರವಾಗಿ ನಿಂತಿವೆ. ಶಾಸನಗಳಲ್ಲಿ ತಮ್ಮ ವಂಶಜರಿಗೆ ಸುಕೃತವಾಗಲೆಂದು ದಾನ ಕೊಟ್ಟ ವಿವರವು ಕಂಡುಬರುತ್ತದೆ. ದೇವರ ಮೇಲೆ ಮತ್ತು ಗುರುಗಳ ಮೇಲೆ ಇರುವ ದೈವಶ್ರದ್ಧೆ ಹಾಗೂ ಧಾರ್ಮಿಕ ಅಭಿವೃದ್ಧಿ ಕಾರ್ಯಗಳನ್ನು ಶಾಸನಗಳಿಂದ ಕಂಡುಕೊಳ್ಳಲಾಗಿದೆ.

೧೧. ಹಂಡೆ ಅರಸರ ಆಡಳಿತ ವ್ಯವಸ್ಥೆ, ಧಾರ್ಮಿಕ ವ್ಯವಸ್ಥೆ, ಸಾಮಾಜಿಕ ವ್ಯವಸ್ಥೆ ಹಾಗೂ ಆರ್ಥಿಕ ವ್ಯವಸ್ಥೆ ಇತಂಹ ಹಲವಾರು ಅಂಶಗಳು ಈ ಮಹಾಪ್ರಬಂಧದ ಮೂಲಕ ಬೆಳಕಿಗೆ ತರಲಾಗಿದೆ.

೧೨. ೧೬ನೇ ಶತಮಾನದಲ್ಲಿ ಹಂಡೆ ಹನುಮಪ್ಪನಾಯಕನಿಂದ ಆರಂಭವಾದ ಇವರ ಗುರು ಪರಂಪರೆಯು ನಿಡುಮಾಮಿಡಿ ಮಠ, ಗದುಗಿನ ತೋಂಟದಾರ್ಯ ಮಠ ಮತ್ತು ಹೊಸಪೇಟೆ–ಬಳ್ಳಾರಿಯ ಕೊಟ್ಟೂರ ಸ್ವಾಮಿ ಮಠಗಳಿಗೆ ಅನನ್ಯ ಭಕ್ತಿಯಿಂದ ನಡೆದುಕೊಂಡು

ಬಂದ ಪರಂಪರೆಯನ್ನು ಹೊಂದಿದ್ದಾರೆ. ಇವರ ರಾಜ್ಯ ಲಾಂಛನವು ಶ್ರೀ ಸಿದ್ಧರಾಮೇಶ್ವರ ಎಂದು ದಾಖಲಾಗಿದೆ.

೧೩. ಹಂಡೆ ಹನುಮಪ್ಪನಾಯಕನು ಲಲಿತಕಲೆಗಳಲ್ಲಿ ತುಂಬ ಆಸಕ್ತಿಯನ್ನು ಹೊಂದಿದ್ದು ಕೆಂಚನಗುಡ್ಡದಲ್ಲಿ ಗಂಗಾಧರೇಶ್ವರ ದೇವಾಸ್ಥನ ನಿರ್ಮಾಣಕ್ಕೆ ಪ್ರೋತ್ಸಾಹಿಸಿ ಮತ್ತು ಅನಂತಪುರದಲ್ಲಿ ರಾಣಿ ಮಹಲ್‌ನ್ನು ವರ್ಣಚಿತ್ರಗಳಿಂದ ಅಲಂಕರಿಸಿದ್ದಾನೆ. ಹಾಗೆಯೇ ಅನಂತಪುರದ ಅರಮನೆ ಕಲಾವಿನ್ಯಾಸ, ಲೇಪಾಕ್ಷಿಯ ವೀರಭದ್ರದೇವರ ಪ್ರಾಣ ಪ್ರತಿಷ್ಠಾಪನೆ ಮತ್ತು ಬಿತ್ತಿಚಿತ್ರ ಶಿಲ್ಪಕಲಾ ಕೃತಿಗಳನ್ನು ಕಲಾವಿದರಿಂದ ಅಲಂಕೃತಗೊಳಿಸಿ ತನ್ನ ಕಲಾಪ್ರೇಮವನ್ನು ಅಮರಗೊಳಿಸಿದ್ದಾನೆ.

೧೪. ಈ ಅರಸರು ಆಂದ್ರ ಪ್ರದೇಶದಲ್ಲಿ ಹೆಚ್ಚಾಗಿ ಆಡಳಿತವನ್ನು ನೆಡೆಸಿರುವುದು ಮತ್ತು ಇವರ ಬಹುಪಾಲು ಸಾಹಿತ್ಯ ತೆಲುಗಿನಲ್ಲಿ ರಚನೆಯಾಗಿರುವುದರಿಂದ ಬಹುಶಃ ಇವರ ಅಧ್ಯಯನಕ್ಕೆ ಈ ಅಂಶವು ಒಂದು ಕಾರಣವಾಗಿರಬಹುದು.

೧೫. ವಿಜಯನಗರ ಅವನತಿಯ ಸಂದರ್ಭದಲ್ಲಿ ಅದರ ರಕ್ಷಣೆಗಾಗಿ ನಿರಂತರವಾಗಿ ನಿಂತವರು ಈ ಹಂಡೆ ಅರಸರು ಎಂದರೆ ತಪ್ಪಾಗಲಾರದು.

# ಅನುಬಂಧಗಳು

೧. ಶಾಸನಗಳು

೨. ವಂಶಾವಳಿ

೩. ವಕ್ತೃಗಳ ವಿವರ

೪. ಛಾಯಾಚಿತ್ರಗಳು

೫. ಪರಾಮರ್ಶನ ಗ್ರಂಥಗಳು

೧

# ಶಾಸನಗಳು

### ೧. ಬೇವಿನಹಳ್ಳಿ(ಚಿತ್ರದುರ್ಗ ಜಿಲ್ಲೆ)ಕ್ರಿ.ಶ.೯೬೮

ಕನ್ನಡ ಭಾಷೆ ಮತ್ತು ಲಿಪಿಯಲ್ಲಿರುವ ಶಾಸನ. ಕಾಲ ಶಕ ೮೯೦ ಪ್ರಭವ ಸಂವತ್ಸರ ಪುಷ್ಯಮಾಸ ಉತ್ತರಾಯಣ ಸಂಕ್ರಾಂತಿಯಾಗಿದ್ದು, ಇದು ಕ್ರಿ.ಶ.೨-೧-೯೬೮ ಗುರುವಾರಕ್ಕೆ ಸರಿಹೊಂದುತ್ತದೆ. ಮಾನ್ಯಖೇಟದಿಂದ ಖೊಟ್ಟಿಗದೇವನು ರಾಜ್ಯಭಾರ ಮಾಡುತ್ತಿರುವಾಗ ಶೂದ್ರಕಾಂಕನು ಮಹಾಸಾಮಂತನಾಗಿದ್ದನು. ಸೂದ್ರಕಾಂಕನ ಮಗ ಪಂದಿಗನ ಪತ್ನಿ ಜಕ್ಕಿಸುಂದರಿ ಈತನ ಪತ್ನಿ ಜಕ್ಕಿಸುಂದರಿಯು ಕಾಕಂಬಾಳಿನಲ್ಲಿ ಬಸದಿಯನ್ನು ಮಾಡಿಸಿದಳು. ಮಹಾಸಾಮಾಂತನಾಗಿ ಕದಂಬಳಿಗೆ ೧೦೦೦ ವನ್ನು ಪಂದಿಗನು ಆಳುತ್ತಿದ್ದನು. ಈತ ಜಕ್ಕಿಸುಂದರಿಯು ಮಾಡಿಸಿದ ಬಸದಿಗೆ ಮದಲೂರು ಮಳಗವಾಡಿಗಳನ್ನು ದಾನ ಮಾಡಿದನು. ಅಷ್ಟೋಪವಾಸದ ಭಟಾರರ ಶಿಷ್ಯ ರಾಮಚಂದ್ರ ಭಟಾರರು ಈ ದಾನವನ್ನು ಸ್ವೀಕರಿಸಿದರು. ಎರಡು ಊರುಗಳಿಗೆ ಸಿದ್ಧಾಯ ೫೦ ಗದ್ಯಾಣಗಳನ್ನು ಮಾಡಿ ಕೊಟ್ಟರು. ಜೊತೆಗೆ ಅವರು ಆಳುವ ಎಲ್ಲ ಬಾಡಗಳಲ್ಲೂ ಮೇಲಾಳ್ಕೆ ಕಿರುದೆರೆ ಇಲ್ಲವೆಂದು ತಿಳಿಸಿದರು. ಇದಕ್ಕೆ ಸಾಕ್ಷಿಯಾಗಿ ಹಲವು ಮಹಾಜನರು ಪಾಲ್ಗೊಂಡಿದ್ದರು. ಗೊಗ್ಗಿಯಪುರದ ಭಾಳಚನ್ದ್ರ ಭಟಾರರು ಪರತ್ರದೇವರ ಮಠದ ಖೇಹಾರ ಶಕ್ತಿಗಳು ಬಸದಿಯ ಗುಣಚನ್ದ್ರ ಕೀರ್ತಯ್ಯಗಳು ಐವತ್ತೆಂಟು ಅಗ್ರಹಾರದವರು ಪಂಚಮಠಗಳವರು ಇದಕ್ಕೆ ಸಾಕ್ಷಿಯಾಗಿದ್ದರು. ಶೂದ್ರಕನ ವಂಶಾವಳಿಯಿದೆ. ಈ ಶಾಸನವನ್ನು ಶ್ರೀ ಕುಮಾರಕೀರ್ತಿ ದೇವರಗುಡ್ಡ ಸುಬಗ ಎಂಬವನು ಬರೆದನು.

೧. ಸ್ವಸ್ತಿ [॥] ನಿತ್ಯವರಿಷದೇವ ಶ್ರೀ ಪ್ರಿಥ್ವೀವಲ್ಲಭ ಮಹಾರಾಜಾಧಿರಾಜಪರಮೇ

೨. ಶ್ವರ ಪರಮಭಟ್ಟಾರಕ । ಚಲದಂಕಕಾರಂ ಶ್ರೀಮತ್ ಕೊಟ್ಟಿಗದೇವನ। ಸಮು

೩. ದ್ರರಪರ್ಯ್ಯನ್ತಂ ಪ್ರಿಥ್ವೀರಾಜ್ಯಂಗೆಯ್ಯುತ್ತುಂ ಮಾನ್ಯಖೇಟದೊಳಿರೆ।ಚಾಳುಕ್ಯವಂಶಾವಳಿಯೊಳ್।ಕಂ।

೪. ನಗಳ್ದಿಕ್........ನುದಗ್ರಂಗಗಣಿತಗುಣಗಣವಿಭಾಸಿ(ಡಿ) ಮಂಗಳರಾಯಂ

೫. ಮಗನ........ತನಯಂ ಜಗದೊಳತಿತ್ಯಾಗಿ ವಿಕ್ರಮಾದಿತ್ಯನೃಪ।ವೃತ್ತ।

೬. ಆ ವಿಭುಗಾತ್ಮಜಂ ನೆರೆಯೆ ಪುಟ್ಟಡೆ ಪುಟ್ಟಿದ ಪಿಳ್ಳಿಮಯ್ಯನನ್ತಾವಸುಧಾಧಿ

೭. ಪಂಗೆ ತನಯಂ ಕಲಿಕೊಂಕಣದೇವ ........ ಸುಹೃದ್ಭಾವನವಂಗೆ ಕೀರ್ತ್ತಿಯುತಂ

೮. ನಗ್ರಜನಾತನ ಸೂನು ದಾನಿ ತಾಂ ರೇವಣನಾತನಾತನ ಮಗಂನೆಲ್ಲಂ ಸ

೯. ಲೆರಾಜಭೂಭುಜಂ । ಕನ್ದ । ಆತಂಗೆ ಬಿಕ್ಕಿಯಣ್ಣಂಮಾತೆ[ಗೆ] ಸತ್ಪುತ್ರನಾ

೧೦. ಸುಪುತ್ತಂಗೆ ಸುತಂ ನೂತಗುಣಂ ಗೊಗ್ಗಿ ಗೊಗ್ಗಿಗವೀತಂ ಶ್ರೀಸೂದ್ರಕಾಂಕನಾತಂ

೧೧. ಗೆಮಗಂ ॥ ಸಂದಮಹಾಸಾಮನ್ತಂಮ[ಪ]ನ್ದಿಗನಾತ್ತಿತ್ತು ಮೀರಿದುವೀ ಜಗದೊಳ್ಸಂ

೧೨. ಕ್ರನ್ದನನನ್ದನ ಸದೃಶಂನಿನ್ದಂ ನಿಜರಾಜ್ಯಪದವಿಯೊಳ್ಸುಖದಿನ್ದಂ ॥

೧೩. ಆತನ ಸತಿ ಸಕಲ ಜಗನ್ನೂತೆಗುಣವಂತೆ ಜಕ್ಕಿಸುನ್ದರಿ ನೆಗಳ್ದಾ

೧೪. ಖ್ಯಾತಿಯ ಕಾಕಂಬಾರೊಳ್ಮಾತೆಯೊಳೊಪ್ಪಸೆಯೆ ಬಸದಿಯಂ ಮಾಡಿಸಿದಳ್ ।

೧೫. ಅನ್ತು ಸಮಸ್ತಗುಣಗಣಾಳಂಕ್ರಿತೆ ಸಮ್ಯಕ್‌ಧವಳೆ ಸುಜನವೆಡಂಗಿ

೧೬. ಸಹಜ ಸರಸ್ವತಿ ವಿಳಾಸ ವಿದ್ಯಾಗಿರಿ ಶ್ರೀಮತ್ ಜಕ್ಕಿಸುಂನ್ದರಿಯರ್ಮ್ಮಾಡಿ

೧೭. ಸಿದ ಬಸದಿಗೆ। ಸ್ವಸ್ತಿ ಸಮಧಿಗತ ಪಂಮಹಾಶಬ್ದ ಮಹಾಸಾಮನ್ತ

೧೮. ಚಾಳುಕ್ಯಸರ್ವ್ವಜ್ಞಂ ಗುಣರತ್ನಾಕರಂ ಸತ್ಯಕಾನೀನಂ ಪತಿಹಿತಪವನ

೧೯. ಜಂ, ಪರಬಲದಣುವಂ ದ್ರೋಹರ ಸೂಲಂ ಮದಕರಿಗಂಡ ಶ್ರೀಮತ್

೨೦. ಪನ್ದಿಗಂಕದಂಬಳಿಗೆ ಸಾಯಿರಮುಮಂ ಸುಖಸಂಕಥಾವಿನೋದ

೨೧. ದಿನ್ದಂ ಮಾಳುತ್ತವಿಳ್ದು ಸಕವರಿಷ ೮೯೦ ನೆಯ ಪ್ರಭವಸಂವತ್ಸ

೨೨. ರದ ಪುಷ್ಯಮಾಸದುತ್ತರಾಯಣಸಂಕ್ರಾನ್ತಿಯನ್ದು । ಕವುಳಿಗೆ............. ೩

೨೩. ಯಾಚಾರ್ಯ್ಯರಷ್ಟಷ್ಟೋಪವಾಸದ ಭಟಾರರ ಶಿಷ್ಯರ್ ರಾಮಚನ್ದ್ರ ಭಟ್ಟಾ

೨೪. ರರ್ಗ್ಗೆ ಮದಲೂರು ಮಳಗವಾಡಿಯಮಂ ಕಾಲಂ ಕರ್ಚ್ಚಿ ಎರಡೂರ್ಗ್ಗೆ

೨೫. ಸಿದ್ದಾಯಮಯ್ವತ್ತು ಗದ್ಯಾಣಂ ಮಾಡಿಕೊಟ್ಟರವು ಮೊದಲಾಗವರಾಳ್ವ ಬಾಡಂಗ

೨೬. ಳೊಳೆಲ್ಲಂ ಮೇಲಾಳ್ಕೆಯುಂ ಕಿರುದೆರೆಯುಮಿಲ್ಲ ಇಂತಿದಕ್ಕೆ ಕಾಕಂಬಾರ ಕಂಭ

೨೭. ಯ್ಯನುಂ ಅಸಾಗೊರಕನ್ನನುಂಪೊಸವೂರಬೇದಮ್ಮ ನುಂಕನ್ನರನುಂ ಕಳ್ಳವುಣೆಸೆಯ

೨೮. ರಟ್ಟನು ಬಿಕ್ಕಿಯು । ಕೆರೆಯೂರ ಜಾದಿಯೂರ ಕೊಡಂಗನೂರ ಬಾಡದಮಹಾಜನವುಂ

೨೯. ಗೊಗ್ಗಿಯಪುರದ ಬಾಳಚನ್ದ್ರ ಭಟಾರರುಂ ಪರತ್ರದೇವರ ಮಟದ ಖೇಹಾರಶಕ್ತಿಗ

೩೦. ಳ. . ಪೆ............. .ಬಸದಿಯ ಗುಣಚನ್ದ್ರ ಕೀರ್ತ್ತಯ್ಯಂಗಳುಂ ಸೆಂಬನೂರ ನಾಗಣನ್ದ

೩೧. ಪಿರಿಯಯ್ಯಂಗಳುಂ ದುರ್ಮ್ಮೆಯ ನಾಗದೇವಭಟಾರರುಂ ಏಂನು ಸಾಯಿರನಾಳುಮಯ್ಯ

೩೨. ತ್ತೆಣ್ಣಗ್ರಹಾರಮು ಪಂಚಮಟಸ್ಥಾನಮುಂಸಾಕ್ಷಿ । ಈ ಶ್ರೀಧಂರ್ಮ್ಮಮಂನಳಿಯಿಸಿ

೩೩. ಧಾತಂ ತುಳಾಪುರುಷವಿಳ್ದ ಅಶ್ವಮೇಧಂಗೆಯ ಫಲಮನೆಯ್ದುವಂ । ನೀಧರ್ಮ್ಮಮಂ ನ

೩೪. ಡೆಯಿಸದೆ ಕಿಡಿಸಿಕೊಣ್ಣಾತನುಜಯ್ಯಾ್ರದೊಳ್ ರಿಷಿಯರಂ ಪ್ರಯಾಗದೊಳ್ ಬ್ರಾ

೩೫. ಹ್ಮಣರಂ ವಾರಣಾಸಿಯೊಳ್ ಕವಿಲೆಯನಿರಿದ ದೋಷಮನೆಯ್ದುವಂ। ಶ್ಲೋಕಃ ಸಾ

೩೬. ಮಾನ್ಯೋಯಂ ಧಮ್ಮಸೇತುರ್ನ್ನೃಪಾಣಾಂ ಕಾಳೇಕಾಳೇ ಪಾಳನೀಯೋ ಭವದ್ಭಿಃ ಸರ್ವ್ವಾನೇತಾಂ

೩೭. ಭಾವಿನಿಳ್ಪಾರ್ತ್ಥಿವೇನ್ದ್ರಾನ್ ಭೂಯೋ ಭೂಯೋ ಯಾಚತೇ ರಾಮಭದ್ರಃ । ಸ್ವದತ್ತಂ ಪರ

೩೮. ದತ್ತಂ ವಾಯೋ ಹರೇತಿ ವಸುಂಧರಾಂ ಷಷ್ಟಿಂ ವರಿಷ ಸಹಶ್ರಾಣಿ ವಿಷ್ಟಾಯಾಂ ಜಾ.

೩೯. ಯತೇ ಕ್ರಿಮಿಃ । ಶ್ರೀ ಕುಮಾರಕೀರ್ತ್ತಿ ದೇವರಗುಡ್ಡಂ ಸುಬಗಂ ಬರೆದಂ ಮಂಗ

೪೦. ಳಂ ಮಹಾ ಶ್ರೀ ಕಲ್ಲಿನ ಮೇಲ್ಭಾಗದಲ್ಲಿ ನಂತರ ಬರೆದಿರುವ ಸಾಲುಗಳು

೪೧. ಸ್ವಸ್ತಿ ಶ್ರೀಮತುಬ............ . .ಯ ಬಸದಿಗೆ

೪೨. ಬಿಳ್ದೂರುವಿದ್ವಂಗಿಬಿಳ್ವಾಯುಕೊದಲೂರು ಮಂಗಳ। —

**೨. ಚರ್ದ(ನಲ್ಗೊಂಡ–ಆಂಧ್ರಪ್ರದೇಶ) ಕ್ರಿ.ಶ.೧೦೮೧**

ಆಂಧ್ರಪ್ರದೇಶದ ನಲ್ಗೊಂಡ ಜಿಲ್ಲೆಯ ನಲ್ಗೊಂಡ ತಾಲೂಕಿನ ಚರ್ದ ಎಂಬ ಗ್ರಾಮದಲ್ಲಿ ಈ ಶಾಸನ ದೊರೆತಿದೆ. ಇದರಲ್ಲಿ ಚಾಲುಕ್ಯ ವಿಕ್ರಮ ಕಾಲ ೬ ದುರ್ಮತಿ ಸಂವತ್ಸರ, ಪೌಷ್ಯ ಬ ೬ ಶುಕ್ರವಾರ, ಉತ್ತರಾಯಣಸಂಕ್ರಾಂತಿ ಎಂದು ತೇದಿ ಇದೆ. ಅದು ಕ್ರಿ.ಶ.೧೦೮೧, ಡಿಸೆಂಬರ್ ೨೪, ಶುಕ್ರವಾರಕ್ಕೆ ಸರಿಹೊಂದುತ್ತದೆ.

**ಮೊದಲನೆಯ ಮುಖ:**

೧. ಸ್ವಸ್ತಿ ಶ್ರೀ ವಸುಧೈಕ

೨. ವಲ್ಲಭ ಮಹಾರಾಜಾಧಿ

೩. ರಾಜಂ ತ್ರಲೋಕಸ್ತುತ್ಯ ಜ

೪. ಗದೇಕಮಲ್ಲ ತನುಜಂ

೫. ತ್ರೈಲೋಕ್ಯಮಲ್ಲಂ ಪ್ರತಾ

೬. ಪಾಸ್ತಾರಾತಿ ನೃಪಾಳ [ನಾ]

೭. ತನ ಸುತಂ ವಿಕ್ರಾಂತ ಲ

೬೧. ವನಮಲ್ಲದೇವ ಪಾದಾರವಿಂ

೬೨. ದಷಟ್ಚರಣಂ ನಾಮಾದಿ ಸ

೬೩. ಮಸ್ತ ಪ್ರಸಸ್ತಿ ಸಹಿತಂ ಶ್ರೀ

೬೪. ಮನ್ಮಹಾಮಣ್ಡಳೇಶ್ವರಂ ಕು

೬೫. ಮಾರಂ ಕಾಮರಸಂ ಕೊಳ್ಳಿಪಾ

೬೬. ಕೆ ಯೆಚ್ಛಾಸಿರದ ಮನ್ನೆಯ ಸಾ

೬೭. ಮಂತಿಕ[ಮೆಂಬೀ] ಚಕ್ರವ

೮. ಲಕ್ಷ್ಮೀಕರೇಣುಸ್ತಂಭಂ ಭುವನ
೯. ತ್ರಯೈಕತಿಳಕಂ ಚಾಳು
೧೦. ಕ್ಯಚಕ್ರೇಶ್ವರಂ ॥ ಅನವದ್ಯ
೧೧. ವೀರ ಸಿಂಹಾಸನಪತಿ ವಿಜ
೧೨. ಯಶ್ರೀಕಾಂತಾವಧೂಕಾಂತನು
೧೩. ರ್ವ್ವೀವಿನುತ ಚಳುಕ್ಯವಂಶಾಂ
೧೪. ಬರಕುವಳಯಮಿತ್ರಂ
೧೫. ಪ್ರತಾಪಾನುರಾಗಾವನತೋರ್ವ್ವೀ
೧೬. ಪಾಳ ಮೌಳಿಸ್ಥಗಿಯತ ಪದಯು
೧೭. ಗ ಲಿಳೆಯ ಪಾಳಿಸುತ್ತಿರ್ದ್ದನು
೧೮. ಧನ್ವನ್ಮೇಖಳಾಳಂಕ್ರಿತ ವಸು
೧೯. ಮತಿಯಂ[೦] ವಿಕ್ರಮಾದಿತ್ಯದೇವ[೦]
೨೦. ಸ್ವಸ್ತಿ ಸಮಸ್ತ ಭುವನಾಶ್ರಯ
೨೧. ಶ್ರೀ ಪ್ರಿಥ್ವೀವಲ್ಲಭ ಮಹಾರಾಜಾ
೨೨. ಧಿರಾಜ ಪರಮೇಶ್ವರ ಪರಮ
೨೩. ಭಟ್ಟಾರಕಂ ಶತ್ಯಾಶ್ರಯಕುಳತಿ
೨೪. ಳಕಂ ಚಾಳುಕ್ಯಾಭರಣಂ ಶ್ರೀ
೨೫. ಮತ್ರಿಭುವನಮಲ್ಲದೇವರ
೨೬. ವಿಜಯರಾಜ್ಯಮುತ್ತರೋ
೨೭. ತ್ತರಾಭಿವ್ರದ್ಧಿ ಪ್ರವರ್ದ್ಧಮಾನ

**ಎರಡನೆಯ ಮುಖ**

೨೮. ಮಾಚಂದ್ರಾರ್ಕ್ಕತಾರಂಬರಂ ಸ
೨೯. ಲುತ್ತಮಿರೆ ತತ್ಪಾದಪ
೩೦. ದ್ಮೋಪ ಜೀವಿ ॥ ಸ್ವಸ್ತಿ ಶ್ರೀ [ವಿ]

೬೮. ತ್ರಿಯು ದಯೆ [ಯಿಂ] ತಾಂಬ್ರಶಾಸ
೬೯. ನಸಹಿತಂಮಾಗೆ ಪಡೆದು ರಾ
೭೦. ಜಧಾನಿ ಕೊಳ್ಳಿಪಾಕೆಯೊಳ್ಸುಖ
೭೧. ಸಂಕಥಾ ವಿನೋದದಿಂ ರಾಜ್ಯಂಗೆಯ್ಯು
೭೨. ತ್ತಮಿರ್ದ್ದು ಶ್ರೀಮಚ್ಚಾಳುಕ್ಯವಿಕ್ರ
೭೩. ಮಕಾಲದ ೬ನೆಯ ದುರ್ಮ್ಮತಿ
೭೪. ಸಂವತ್ಸರದ ಪೌಷ್ಯ ಬಹುಳ[೬]
೭೫. ಶುಕ್ರವಾರದದಿನುತ್ತರಾಯ
೭೬. ಣ ಸಂಕ್ರಾಂತಿ ಮಹಾಪರ್ವ್ವ ನಿಮಿ
೭೭. ತ್ತದಂದು ಜೆಡೆಯ ಮಲ್ಲೇಶ್ವರ
೭೮. ದೇವರ್ಗ್ಗೆ ಖಣ್ಡ ಸ್ಪುಟಿತ ನ
೭೯. ವಸುಧಾಕಮ್ಮಕ್ಕಮಂಗಭೋಗ
೮೦. ಕ್ಕಂ ರಂಗಭೋಗಕ್ಕಂ ತಪೋಧನ
೮೧. ರ್ಗ್ಗಂ ವಿದ್ಯಾರ್ತ್ಥಿಗಳ್ಗಂ ತ್ರಭೋಗಾಭ್ಯಂ
೮೨. ತರಸಿದ್ಧಿಯಿಂ ಸರ್ವ್ವ ನಮಸ್ಯಂ ಕಾ
೮೩. ಡಿಮಾನುಗಲಂ ಧಾರಾಪೂರ್ವ್ವಕ
೮೪. ಮಾಗೆ ಕೊಟ್ಟರದರ ಚತುಸ್ಸೀ
೮೫. ಮಾ ಗ್ರಾಮಂಗಳು ಮೂಡಲು ಪಲ್ಲೇ
೮೬. ರು ತೆಂಕಲು ವೇಮುಲು ಪಡುವ
೮೭. ಲು ಮೊಗಲಿಪಾಕ ಬಡಗಲು ನೇ
೮೮. ತ್ರ ಕಲ್ಲು ॥ ಈ ಧರ್ಮ್ಮಮಂ ತಪ್ಪದೆ [ಬ]
೮೯. ತಿ ಪಾ(ಳಿ*)ಸಿದವರ್ಗ್ಗೆ ಗಂಗೆಯ [ಮಿಂದ]
೯೦. ರಯೊಳ್ಪಣ್ದಯಿಟ್ಟುಪುರುನ್ವಂದ್ರ

೩೧. ದೇಂಗೀಷು ಪಣ್ಣನೃಪಾನಾ

೩೨. ತಗಾತ್ಮಜಂ ವೈರಿ ವೀರ [ – ]

೩೩. ಮಾ. ಚಳವಜ್ರ ಗಣ್ಡ[ಪ]

೩೪. –[ನೃ]ಪಂ ತನ್ನ, ನಂಕ .

೩೫. ದ್ವ[ಷ] ದ್ಧಸ್ತಿವ್ಯೂಹಮ್ಯ

೩೬. ಗಾರಿ ಪಣ್ಣ ಮಹಿಪಂ......ಶೌ

೩೭. ರ್ಯ [ಸ್ಫುರದ್ಧ]ಸ್ತಾ

೩೮. ತ ನಿಶಾತಖಡ್ಗ ಸಲಿ

೩೯. ಲಾಂತರ್ಮ್ಮಗ್ನ ವಿದ್ವಡ್ಬಲಂ

೪೦. ಅಲಘು ಪರಾಕ್ರಮ್ಯೆ

೪೧. ಕ ನಿಧಿ ದುರ್ಜ್ಜಯ ವಂಶ

೪೨. ಮಣಿಪ್ರದೀಪ ನುಜ್ವ

೪೩. ಳತರಕೀರ್ತ್ತಿ ಮಣ್ಡಳಿಕ

೪೪. ವೀರ ಶಿಖಾಮಣಿ ಕಾಮ

೪೫. ಭೂಪನುತ್ಕಳಲಯಕೇ[ತುಂ]

೪೬. ಕೇರಳ ಕುಂಜರ ಮೃಗಾಧಿ

೪೭. ಪಂ [ಕಳಿಂಗ] ಭೂಮಿ ಭೃದ್ಭ

೪೮. ಳ ವಿಳಯಜ್ವರಂ ದ್ರ

೪೯. ವಿಡ ದರ್ಪ್ಪಹರಂ ಮಗ

೫೦. ದಾಭ್ರ ಮಾರುತಂ ॥ ಸ್ವ

೫೧. ಸ್ತಿ ಸಮಧಿಗತ ಪಂಚ

೫೨. ಮಹಾಶಬ್ದ ಮಹಾಮ

೫೩. ಣ್ಡಳೇಶ್ವರಂ ಕೊಳ್ಳಿಪಾಕ

೫೪. ಪುರವರೇಶ್ವರಂ ದುರ್ಜ್ಜ

೫೫. ಯ ಕುಲ ಕುಲ ಜ

**ನಾಲ್ಕನೆಯ ಮುಖ**

೯೧. ದ್ವಾನಂಗಾ, ಅಶ್ವಮೇಧಯಾಗಂ

೯೨. ಗೆಯ್ದ ಫಲಮಕ್ಕುಮಿದಂ

೯೩. ಅಡಿಸಿದವರ್ಗ್ಗೆ ಕುರು

೯೪. ಕ್ಷೇತ್ರ ದೂಳ್ಬ್ರಾಹ್ಮಣರಂ

೯೫. ವಾರಣಾಸಿಯೊ

೯೬. ಳ್ಕವಿಲೆಯ ಶ್ರೀಪರ್ವ್ವತ

೯೭. ದೊಳ್ತಪೋಧನರಂ ಕೊ

೯೮. ಂದ ಪಾಪಮಕ್ಕು ॥

೯೯. ಸ್ವದತ್ತಾ ಪರದತ್ತಾಂ

೧೦೦. ವಾಯೋಹರೇತ ವಸು

೧೦೧. ನ್ಧರಾಂ ಷಷ್ಟಿರ್ವ್ವರ್ಷ ಸಹ

೧೦೨. ಶ್ರಾಣಿ ವಿಷ್ಠಾಯಾಂ ಜಾ

೧೦೩. ಯತೇ ಕ್ರಿಮಿ ॥ ಬಹು

೧೦೪. ಭಿರ್ವ್ವಸುಧಾ ದತ್ತಾಬ

೧೦೫. ದತ್ತಾ ಬಹುಭಿಶಾ ್ಚನು

೧೦೬. ಪಾಲಿಶಾ ಯಸ್ಯಯಸ್ಯ

೧೦೭. ಯದಾ ಭೂಮಿಸ್ತಸ್ಯ ತ

೧೦೮. ಸ್ಯ ತದಾ ಫಲಂ ॥ಸಾ

೧೦೯. ಮಾನ್ಯೋಯಂ ಧರ್ಮ್ಮ ಸೇ

೧೧೦. ತು ನ್ರಿಪ್ರಾಣಾಂ ಕಾಲೇ ಕಾ

೧೧೧.ಲೇ ಪಲನೀಯೋ ಭವ

೧೧೨. ದ್ಭಃ ಸರ್ವ್ವನೇತಾನ್ಬಾವಿನ

೧೧೩. ಪಾರ್ತ್ಥಿವೇಂದ್ರಾನ್ನು

೪೬. ಡ............ . .ಮ

೪೭. ವೇದ್ರ ಮಲ್ಲಿಕಾ ವಲ್ಲ

**ಮೂರನೇ ಮುಖ**

೪೮. ಭಂ ಜಯಾಂಗನಾವಲ್ಲಭ[ಬೀ]

೪೯. ಮನಸಿಂಗಂ ಸಾಹಸೋತ್ತುಂಗ[ಂ]

೬೦. ಗಣ್ಡರಾಭರಣಂ ಶ್ರೀಮತ್ತ್ರಿಭು

೧೧೪. ಯೋ ಭೂಯೋ ಯಾಚ

೧೧೫. ತೇ ರಾಮಭದ್ರಃ ॥ ನಮಿಷಂ

೧೧೬. ವಿಷಮಿತ್ಯಾಹುರ್ದ್ದೇವ

೧೧೭. ವಸ್ವ ವಿಷಮುಚ್ಯತೇ

೧೧೮. ವಿಷಮೇಕಾಕಿನಂ

೧೧೯. ಹಂತಿ ದೇವಸ್ವಂ ಪುತ್ರ

**೩. ಕೊಲನುಪಾಕ (ಭುವನಗಿರಿ ತಾಲೂಕು-ಆಂಧ್ರಪ್ರದೇಶ) ಕ್ರಿ.ಶ.೧೦೮೧**

ಕ್ರಿ.ಶ. ೧೦೮೧ ಚರ್ದ ಶಾಸನಪಾಠವೇ ಯಥಾವತ್ತಾಗಿ ಇದರಲ್ಲಿದೆ. ಚರ್ದ ಶಾಸನದಲ್ಲಿ ಕಾಳಾಮುಖ ಯತಿ ಶ್ರೀಕಂಠಪಂಡಿತನ ವಿವರಗಳು ಹಾಗೂ ಶಾಸನವನ್ನು ಬರೆದವನ ಹೆಸರುಗಳು ಬಿಟ್ಟು ಹೋಗಿವೆ. ಇದರಲ್ಲಿ ಚಾಲುಕ್ಯ ವಿಕ್ರಮ ಕಾಲ ೬. ದುರ್ಮತಿ ಸಂವತ್ಸರ. ಪೌಷ್ಯ ಬ ೬ ಶುಕ್ರವಾರ, ಉತ್ತರಾಯಣ ಸಂಕ್ರಾನ್ತಿ ಎಂದು ತೇದಿ ಇದ್ದು, ಅದು ಕ್ರಿ.ಶ.೧೦೮೧ ಡಿಸೆಂಬರ್ ೨೪ ಶುಕ್ರವಾರಕ್ಕೆ ಸರಿಹೊಂದುತ್ತದೆ. ಇದರಲ್ಲಿ ಚಲುಕ್ಯ ದೊರೆ ತ್ರಿಭುವನಮಲ್ಲದೇವ(೬ನೇ ವಿಕ್ರಮಾದಿತ್ಯ)ಹಾಗೂ ಅವನ ಮಹಾಮಂಡಳೇಶ್ವರನಾದ ಕಾಮರಸನು ದೊರೆಯಿಂದ ತಾಮ್ರಶಾಸನದ ಮೂಲಕ ಕೊಳ್ಳಿಪಾಕೆ ೭೦೦೦ ಅನ್ನು ಪಡೆದು ರಾಜಧಾನಿ ಕೊಲ್ಲಿಪಾಕೆಯಿಂದ ಆಳುತ್ತಿದ್ದುದನ್ನು ಹೇಳಿದೆ. ಇದರಲ್ಲಿ ಕಾಮರಸನ ವಂಶಾವಳಿಯಿದೆ. ದುರ್ಜಯವಂಶದ ಪಂಡ, ಪಂಡನ ಮಗ ಗಂಡ, ಗಂಡನ ಮಗ ಪಂಡನೃಪ. ಈ ಪಂಡನೃಪನ ಮಗನೇ ಕಾಮರಸ. ಸಮುದ್ರತೀರದಲ್ಲಿ ಆಳುತ್ತಿದ್ದ ದುರ್ಜಯ ವಂಶದವರೆಂದೇ ತಮ್ಮನ್ನು ಕರೆದುಕೊಳ್ಳುವ ಪರಿಚ್ಛೇಧೀ ದೊರೆಗಳ ವಂಶದಲ್ಲೂ ಇಂತಹ ಹೆಸರುಗಳೇ ಕಂಡುಬರುತ್ತವೆ. ಹಾಗೂ ಅವರು ತಮ್ಮನ್ನು ಕೊಲ್ಲಿಪಾಕೆ ೭೦೦೦ ದ ದೊರೆಗಳೆಂದೇ ಹೇಳಿಕೊಳ್ಳುತ್ತಾರೆ. ಪ್ರಸ್ತುತ ಶಾಸನದಲ್ಲಿ ಭುಜಂಗಾವಳಿ ಶಾಖೆಗೆ ಸೇರಿದ ಕಾಳಾಮುಖ ಶೈವ ಗುರು ಗೋಕರ್ಣರಾಸಿಪಂಡಿತನ ಶಿಷ್ಯ ಈಶಾನಶಕ್ತಿ ಪಂಡಿತಃ ಅವನ ಶಿಷ್ಯ ಶ್ರೀಕಂಠಪಂಡಿತದೇವರಿಗೆ ಕಾಮರಸನು ಮಾನುಗಲು ಎಂಬ ಗ್ರಾಮವನ್ನು ಸರ್ವಮಾನ್ಯವಾಗಿ (ಜ)ಚಡೆಯ ಮಲ್ಲೇಶ್ವರದೇವರ ಸೇವೆಗೆಂದು ದತ್ತಿಯಾಗಿ ನೀಡಿದುದನ್ನು ದಾಖಲಿಸಿದೆ. ಶ್ರೀಕಂಠಪಂಡಿತದೇವನು ತರ್ಕ ಹಾಗೂ ವ್ಯಾಕರಣದಲ್ಲಿ ಮಹಾಪಂಡಿತನಾಗಿದ್ದನೆಂದೂ ಇಲ್ಲಿ ಹೇಳಿದೆ. ಈ ಶಾಸನದಲ್ಲಿ ಭಟ್ಟೋಪಾಧ್ಯಾಯ ಎಂಬವನು ಬರೆದಿದ್ದಾನೆ.

**ಮೊದಲನೆಯ ಮುಖ**

೧. [ಸ್ವ]ಸ್ತಿ ಶ್ರೀ ವಸುಧೈಕ ವಲ್ಲಭ

೨. ಮಹಾರಾಜಾಧಿರಾಜಂ ತ್ರೈಳೋಕಸ್ತು

೩. ತ್ಯಂ ಜಗದೇಕಮಲ್ಲ ತನುಜಂ

**ಮೂರನೆಯ ಮುಖ**

೬೭. ತಾಂಬ್ರಶಾಸನ ಸಹಿತಮಾಗೆ ಪ

೬೮. ಡೆದು ರಾಜಧಾನಿ ಕೊಳ್ಳಿಪಾಕೆಯ

೪. ತ್ರೈಲೋಕ್ಯಮಲ್ಲಂ ಪ್ರತಾಪಾನ್ತಾ
೫. ರಾತಿ ನೃಪಾಳನಾತನ ಸುತಂ
೬. ವಿಕ್ರಾನ್ತ ಲಕ್ಷ್ಮೀಕರೇಣು ಸ್ತಂ
೭. ಭಂ ಭುವನತ್ರಯೈಕತಿ
೮. ಳಕಂ ಚಾಳುಕ್ಯಚಕ್ರೇಶ್ವರಂ॥
೯. ಅನವದ್ಯ ವೀರಸಿಂಹಾಸನ
೧೦. ಪತಿ ವಿಜಯಶ್ರೀ ವಧೂ
೧೧. ಕಾನ್ತನುರ್ವ್ವೀ ವಿನುತಂ ಚಾಳುಕ್ಯ
೧೨. ವಂಶಾಂಬರ ಕುವಳಯ ಮಿ
೧೩. ತ್ರಂ ಪ್ರತಾಪಾನುರಾಗಾವನ
೧೪. ತೋರ್ವ್ವೀಪಾಳ ಮೌಳಿಸ್ಥಗಿತ ಪ
೧೫. ದಯುಗಂ ಲೀಳೆಯಿಂ ಪಾಳಿಸು
೧೬. ತ್ತಿರ್ದ್ದನುಧನ್ವನ್ಮೇಖಳಾಳಂಕೃತ ವ
೧೭. ಸುಮತಿಯಂ ವಿಕ್ರಮಾದಿತ್ಯ
೧೮. ದೇವಂ॥ ಸ್ವಸ್ತಿ ಸಮಸ್ತ ಭುವನಾಶ್ರ
೧೯. ಯ ಶ್ರೀ ಪ್ರಿಥ್ವೀವಲ್ಲಭ ಮಹಾ
೨೦. ರಾಜಾಧಿರಾಜ ಪರಮೇಶ್ವರಂ ಪ
೨೧. ರಮಭಟ್ಟಾರಕಂ ಸತ್ಯಾಶ್ರಯ
೨೨. ಕುಳತಿಳಕಂ ಚಾಳುಕ್ಯಾಭ
೨೩. ರಣಂ ಶ್ರೀಮತ್ತ್ರಿಭುವನಮ
೨೪. ಲ್ಲದೇವರ ವಿಜಯರಾಜ್ಯಮು
೨೫. ತ್ತರೋತ್ತರಾಭಿವೃದ್ಧಿ ಪ್ರವರ್ದ್ಧಮಾ
೨೬. ನಮಾಚಂದ್ರಾರ್ಕ್ಕತಾರಂಬರಂ ಸ
೨೭. ಲುತ್ತಮಿರೆ ತತ್ಪಾದಪದ್ಮೋಪ ಜೀ
೬೯. ಳ್ಸುಖಸಂಕಥಾ ವಿನೋದದಿಂ
೭೦. ರಾಜ್ಯಂಗೆಯ್ಯುತ್ತಮಿರ್ದ್ದು ಶ್ರೀ
೭೧. ಮಚಾ ಳುಕ್ಯವಿಕ್ರಮ ಕಾ
೭೨. ಲ ೬ನೆಯ ದುರ್ಮ್ಮತಿ ಸಂವ
೭೩. ತ್ಸರದ ಪೌಷ್ಯ ಬ ೬ ಶುಕ್ರವಾ
೭೪. ರದಂದಿನುತ್ತರಾಯಣ ಸಂಕ್ರಾ
೭೫. ನ್ತಿ ಮಹಾಪರ್ವ್ವ ನಿಮಿತ್ತದಂದು
೭೬. ಸ್ವಸ್ತಿ ಸಮಸ್ತಭುವನ ಸಂಸ್ತೂ
೭೭. ಯಮಾನ ವಿಜ್ಞಾನ ದೇವಾನ್ವ
೭೮. ಯ ಸರಸ್ಸರೋಜಾಯ ಮಾ
೭೯. ನ ಸಮಸ್ತ ಶಾಸ್ತ್ರಕುಶಳ ಶ್ರೀ ಗೋ
೮೦. ಕರ್ಣ್ಣರಾಶಿಪಣ್ಣಿತದೇವರ ಶಿಷ್ಯ
೮೧. ರನೇಕ ಶಾಸ್ತ್ರ ಪಾರಾವಾರ ಪಾ
೮೨. ರಂಗಮ ಶ್ರೀಮದೀಶಾನಶಕ್ತಿಪ
೮೩. ಣ್ಡಿತದೇವರ ಶಿಷ್ಯರು ॥ ಕಾರು
೮೪. ಣ್ಯಕ್ಕೆ ನಿವಾಸಮಿಂದ್ರಿಯ ಜ
೮೫. ಯಕ್ಕಾಸ್ಥಾನಮುರ್ವ್ವೀನುತಾಚಾರ
೮೬. ಕ್ಕಾಶ್ರಯವೊಳ್ಪಿನಿಪ್ಪಡೆ
೮೭. ಯಶಃ ಶ್ರೀವಲ್ಲಭಂ ಸೂಕ್ತ್ಯ
೮೮. ಳಂಕಾರಂ ಕ್ಷಾನ್ತಿಸುಧಾ ನಿಧಾನ
೮೯. ಕಳಶಂ ವಿಜ್ಞಾನ ದೇವಾನ್ವಯಾಧಾರ
೯೦. ತಾರ್ಕ್ಕಿಕ ಶಾಬ್ದಿಕೈಕ ತಿಳ
೯೧. ಕಂ ಶ್ರೀಕಣ್ಠಯೋಗಿಶ್ವರ ॥
೯೨. ಭುಜಂಗವಳಿ ಭೂಷಣರಪ್ಪ
೯೩. ಶ್ರೀಕಣ್ಠಪಣ್ಡಿತದೇವರ

೨೮. ವಿ ॥ ಸ್ವಸ್ತಿ ಶ್ರೀ ವಿಜು ಗೀಷು ಪಣ್ಡ
೨೯. ನೃಪನಾತಂಗಾತ್ಮಜಂ ವೈರಿ ವೀರ
೩೦. ಸ್ತೋಮಾಚಳ ವಜ್ರ ಗಣ್ಣಪ ನೃ
೩೧. ಪಂ ತನ್ನಂದನಂ ವಿದ್ವಿಷದ್ಧಸ್ತಿಮ್ಯಾ
೩೨. ಹ ಮೃಗಾರಿ ಪಣ್ಡ ಮಹಿ ಎರಡನೆಯ ಮುಖ
೩೩. ಪಂ ತತ್ಸೂನು ಶೌರ್ಯ ಸ್ಪು
೩೪. ರದ್ಧಸ್ತೋತ್ಖಾತ ನಿಶಾತ ಖ
೩೫. ಳ್ಗ ಸಲೀಲಾನ್ತರ್ಮ್ಮಗ್ನ ವಿದ್ವಿ
೩೬. ಢ್ಬಲಂ॥ ಅಲಘುಪರಾ
೩೭. ಕ್ರಮೈಕನಿಧಿ ದುರ್ಜ್ಜ
೩೮. ಯವಂಶಮಣಿಪ್ರದೀ
೩೯. ಪನುಜ್ವಳತರ ಕೀರ್ತಿ ಮ
೪೦. ಣ್ಡಳಿಕ ವೀರಶಿಖಾ
೪೧. ಮಣಿ ಕಾಮಭೂಪನು
೪೨. ತ್ಕಳ ಲಯಕೇತು ಕೇರಳ
೪೩. [ಕುಂಜರ] ಮೃಗಾದಿ ಕಳಿಂ
೪೪. ಗ ಭೂಮಿ ಭೃದ್ಧಳ ವಿ
೪೫. ಳಯಜ್ವರಂ ದ್ರವಿಳದರ್ಪ್ಪ
೪೬. ಹರಂ ಮಗದಾಭ್ರ ಮಾರು
೪೭. ತ॥ ಸ್ವಸ್ತಿ ಸಮಧಿಗತ ಪಂ
೪೮. ಚ ಮಹಾಶಬ್ದ ಮಹಾ
೪೯. ಮಣ್ಡಳೇಶ್ವರಂ ಕೊಲ್ಲಿಪಾ
೫೦. ಕಾಪುರವರೇಶ್ವರಂ ದುರ್ಜ್ಜ
೫೧. ಯ ಕುಳ ಕುಮುದಚಂ
೯೪. ಪಾದ ಪ್ರಕ್ಷಾಳನಂ ಗೆಯ್ದು
೯೫. ಚಡೆಯ ಮಲ್ಲೇಶ್ವರದೇವರ್ಗ್ಗೆ
೯೬. ಖಣ್ಡಸ್ಪುಟಿತ ನವಸುಧಾ
೯೭. ಕರ್ಮ್ಮಕ್ಕಮಂಗಭೋಗಕ್ಕಂ ರಂ
೯೮. ಗಭೋಗಕ್ಕಂ ತಪೋಧನರ್ಗ್ಗೆ ವಿದ್ಯಾ

**ನಾಲ್ಕನೆಯ ಮುಖ**

೯೯. [ರ್ತ್ಥಿ] ಗಳ್ಗಂ ತ್ರಿಭೋಗಾಭ್ಯ[ನ್ತ]
೧೦೦.ತ ಸಿದ್ದಿಯಂ ಸರ್ವ[ನ]
೧೦೧.ಮಸ್ಯ[ಂ] ಕಾಡಿ [ಮಾನು]
೧೦೨.ಗಲಂ ಧಾರಾಪೂರ್ವ್ವಕಮಾ
೧೦೩.[ಗಿ]ಕೊಟ್ಟ ಅದರ ಸೀಮಾ
೧೦೪.ಗ್ರಾಮಂಗಳು ಮೂಡಲು
೧೦೫.ಪಲ್ಲೇರು ತಂಕಲು ವೇಮು
೧೦೬.ಲು ಪಡುವಲು ಮೊಗಲಿ
೧೦೭.ಪಾಕೆ ಬಡಗಲು ನೇತ್ರಕ
೧೦೮.ಲ್ಲು ಯೀಧರ್ಮ್ಮಮಂ ರಕ್ಷಿ
೧೦೯.ಸುದೊರ್ಗ್ಗೆ ಗಂಗೆಯಂ ಮಿಂದು
೧೧೦.ಗೆಯಯೊಳ್ಪಿಂಡಮನಿ
೧೧೧.[ಳ್ಚ]ಪುರಿಶ್ಚಂದ್ರದೊಳ್ವಾನಂ
೧೧೨.ಗೊಳ್ವಶ್ವಮೇಧಯಾಗಂ ಗೆಯ್ದ
೧೧೩.ಫಲಮಕ್ಕು ಇದಂ ಕಿಳಿಸಿ
೧೧೪.ದೊರ್ಗ್ಗೆ ಬಾಣರಾಸಿಯೊಳ್ಕ
೧೧೫.ವಿಲೆಯುಂ ಕುರುಕ್ಷೇತ್ರದೊ
೧೧೬.ಳು ಬ್ರಾಹ್ಮಣರಂ ಶ್ರೀ ಪ
೧೧೭.ರ್ವ್ವತದೊಳ್ತಪೋಧನರಂ ಕೊನ್ದ

೫೨. ದ್ರಂ ವಿಭವ ಮಹೇಂದ್ರಂ
೫೩. ಮ[ಲ್ಲಿ]ಕಾವಲ್ಲಭಂ ಜಯಾಂ
೫೪. ಗನಾವಲ್ಲಭಂ ಭೀಮನ ಸಿಂ
೫೫. ಗಂ ಸಾಹಸೋತ್ತುಂಗಂ
೫೬. ಶ್ರೀಮತ್ತ್ರಿಭುವನ ಮ
೫೭. ಲ್ಲದೇವನ ಪಾದಾರವಿನ್ದ ಪಟ್ಟ
೫೮. ರಣಂ ಗಣ್ಡರಾಭರಣ ನಾ
೫೯. ಮಾದಿ ಸಮಸ್ತ ಪ್ರಶಸ್ತಿ
೬೦. ಸಹಿತಂ ಕುಮಾರಂ
೬೧. ಶ್ರೀಮನ್ಮಹಾಮಣ್ಡ.
೬೨. ಳೇಶ್ವರಂ ಕಾಮರಸರು
೬೩. ಕೊಲ್ಲಿಪಾಕಯೇಲ್ಪಾ
೬೪. ಸಿರದ ಮನ್ನೆಯ ಸಾ
೬೫. ಮನ್ತಿಕಮಿವಂ ಚಕ್ರ
೬೬. ವರ್ತಿಯ ದಯಿಯಿಂ

೧೧೮.ಪಾಪ ॥ ಸ್ವದತ್ತಾಂ ಪರ
೧೧೯.ದತ್ತಾಂ ವಾ ಯೋ ಹರೇತ ವಸು
೧೨೦.ನ್ಧರಾಂ ಷಷ್ಟಿವರ್ಷಸಹ
೧೨೧.ಸ್ರಾಣಿ ವಿಷ್ಠಾಯಾಂ ಜಾ
೧೨೨.ಯತೇ ಕ್ರಿಮಿ: ॥ ಬಹು
೧೨೩.ಭಿರ್ವ್ವಸುಧಾ ದತ್ತಾ ಬಹು
೧೨೪.ಭಿಶ್ಚಾನುಪಾಲಿತಾ ಯ
೧೨೫.ಸ್ಯ ಯಸ್ಯ ಯದಾ ಭೂ
೧೨೬.ಮಿಸ್ತ್ಯ ತಸ್ಯ ತದಾಫ
೧೨೭.ಲಂ ॥ ಸಾಮಾನ್ಯೋಂ ಥ
೧೨೮.ರ್ಮ್ಮಸೇತರ್ನ್ನೃಪಾಣಾಂ ಕಾಲೇ
೧೨೯.ಕಾಲೇ ಪಾಲನೀಯೋ ಭ
೧೩೦.ವದ್ಭಿ: ಸರ್ವ್ವಾನೇತಾನ್ಭಾವಿನಃ
೧೩೧.ಪಾರ್ತ್ಥಿವೇಂದ್ರಾನ್ಭೂಯೋ
೧೩೨.ಭೂಯೋ ಯಾಚತೇ ರಾಮ
೧೩೩.ಭದ್ರಃ॥ ಮಾಧವಭ
೧೩೪.ಟ್ಟೋಪಾಧ್ಯಾಯರ ಬರೆಪಂ

**೪. ಗಬ್ಬೂರು ಕ್ರಿ.ಶ.೧೦೮೪**

ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕಿನ ಗಬ್ಬೂರು ಊರ ಹೊರಗೆ ಹಂಪಯ್ಯನ ಬಾವಿಯ ಬಳಿಯ ದೇವಾಲಯದ ಬಲಗಡೆಗೆ ಇರುವ ಕಲ್ಲಿನ ಮೇಲಿನದು. ಶಾಸನೋಕ್ತ ಕಾಲವು ಚಾಳುಕ್ಯ ವಿಕ್ರಮ ವರ್ಷದ ೯ ನೆಯ ರಕ್ತಾಕ್ಷಿ ಆಷಾಡ ಬ.೧ ಶುಕ್ರವಾರದ ದಿನವಾಗಿದ್ದು, ಇದು ಕ್ರಿ.ಶ.೨೧.೦೬.೧೦೮೪ ರ ಶುಕ್ರವಾರಕ್ಕೆ ಸರಿ ಹೊಂದುತ್ತದೆ. ಚಾಳುಕ್ಯ ತ್ರಿಭುವನಮಲ್ಲನು ರಾಜ್ಯಭಾರ ಮಾಡುತ್ತಿದ್ದಾಗ ಅವನ ಸಾಮಂತನಾಗಿ ಚಂದ್ರರಸನಿರುತ್ತಾನೆ. ಇವನನ್ನು ಮಾಹಿಷ್ಮತೀ ಪುರವರೇಶ್ವರ, ಪ್ರತಾಪ ಲಂಕೇಶ್ವರ, ಪ್ರಳಯ ಭೈರವ ಮುಂತಾದ ವಿಶೇಷಣಗಳಿಂದ ಹೊಗಳಲಾಗಿದೆ. ಇವನ ತಮ್ಮ ಅಣ್ಣಲದೇವ. ಈ ಅಣ್ಣತಮ್ಮಂದಿರಿಬ್ಬರೂ ಕೂಡಿ ಮಹಾಸಾಮಂತ ಬಸವದೇವನ ಬಿನ್ನಪದಂತೆ ಧರ್ಮಕಾರ್ಯತತ್ಪರರಾಗಿ ಜಿನದೇವರ ಅರ್ಚನೆಗಾಗಿ ಗೊಬ್ಬೂರ ಮೂಲಿಗರು ಮಹಾಜನರು ಮುದುಗುಂದೂರಿನ ಮೂಲಿಗದೆರೆ ಮತ್ತು ಬೆಳೆದೆರೆಯನ್ನು ದಾನ ಬಿಟ್ಟಂತೆ ಉಲ್ಲೇಖಿಸುತ್ತದೆ.

೧. @ ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪ್ರಿಥ್ವೀವಲ್ಲಭ ಮಹಾರಾಜಾಧಿರಾಜ.

೨. ಪರಮೇಶ್ವರ ಪರಮ ಭಟ್ಟಾರಕಂ ಸತ್ಯಾಶ್ರಯ ಕುಳತಿಳಕಂ ಚಾಳು

೩. ಕ್ಯಭರಣಂ ಶ್ರೀಮತ್ರಿಭುವನಮಲ್ಲದೇವರ ವಿಜಯರಾಜ್ಯಮುತ್ತರೋ

೪. ತ್ತರಾಭಿವೃದ್ಧಿ ಪ್ರವರ್ಧಮಾನಮಾ ಚಂದ್ರಾರ್ಕ್ಕ ತಾರಂಬರಂ ಸಲುತ್ತಿರೆ। ತ

೫. ತ್ಪಾದ ಪದ್ಮೋಪಜೀವಿ ಸಮಧಿಗತ ಪಂಚಮಹಾಶಬ್ದ ಮಹಾಸಾ

೬. ಮನ್ತ ವಾದಿ ಜನಮನ ವಸಂತಂ ಮಾಹಿಷ್ಮತೀ ಪುರವರೇಶ್ವರಂ ಪ್ರತಾಪ [ಲಂ]

೭. ಕೇಶ್ವರಂ ದಶದಿಶಾದಿ ವರ ಧವಳಿತ ಕೀರ್ತ್ತಿಪ್ರಭಾವಂ ಬಂಟರ ಭಾವನುದ್ಯತ ಪ್ರ[ಳ]

೮. ಯ ಭೈರವಂ ಪರಾಕ್ರಮ ಕಂಠೀರವಂ ಸಾಹಸ ವೈನತೇಯಂ ಶೌಚ ಗಾಂಗೇಯನು

೯. [ಭ]ಯ ಬಳಸುಭಟ ಮುಖದರ್ಪ್ಪಣಮ ಶರಣಾರ್ತ್ಥಿ ಸಂತರ್ಪ್ಪಣಂ ಸಿಡಿಲ ಮಾರ್ಕ್ಕೊಳ್ವಂ

೧೦. ಮೊನೆಗೆ ಮುಂಕೊಳ್ವಂ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮಚ್ಚಂದರಸರ್ ॥

೧೧. ವೃ ॥ ಎಳೆನಿರ್ದ್ರಾಯಾಧ್ಯಮಾತ್ಮಾರ್ಜ್ಜಿತ ವಿಭವ ಮನಚ್ಛೇಧ್ಯಮುಗ್ರ ಪ್ರತಾಪಂ.

೧೨. ಬಳವದ್ದುರ್ಬ್ಭೇದಮುದ್ಯದ್ವಿತರಣ ಗುಣಮಾತ್ಮೀಯ ನಿರ್ವ್ಯೂದ್ಯಮಪ್ರಸ್ಖಳಿತಾಳಾ

೧೩. ಪಂ ಮನೋದ್ಯಂ ಶಶಿವಿಶದಯಶಂ ಗದ್ಯ ಪದ್ಯೋಚ್ಚಾರನ್ಮಂಗಳ ವಾಚಾಳಾನುವಾದ್ಯಂ ಬಗೆವೂ

೧೪. ಡೆನಿಸಿದಂ ಶೌಚ ಗಾಂಗೇಯ ಭೂಪಂ ॥ ಪುರಹರಲೋಚನಾಗ್ನಿ ಶಿಖೆಗೆಣ್ಪೆರಲಗ್ಗಳ

೧೫. ಮಾಗಿ ತಿಬ್ಬಮಚ್ಚರಿಪ ಸಿಡಿಲ್ಗೆ ಕಣ್ಪರಿಯದಾಂತಿರೆವಲ್ಲಿ ಪಳಂಚಿಸಿದ ಪೊಂಜು.

೧೬. ರಿಗೆಯ ಕೌಳ ಕೂರ್ಮ್ಮೊನೆಯನುಣ್ಗಿರಿ ವಿಕ್ರಮಗರ್ವ್ವ ಗನ್ಧಸಿನ್ದುರ ಮದರೇಖೆ.

೧೭. ಯೊಳ್ದೊರೆಗೆ ವನ್ದು ಪಂದಿಗನಂಕಕಾರನಾ ॥ ಕಂ ॥ ತದನುಜನಜೇನಸಹ್ಯ

೧೮. ನ್ಮದ ಮಥನಂ ನೃಪಕುಮಾರ ಚೂಡಾಮಣಿ ಬೀರದಕಣಿ ವಿತರಣದಾಗರಮು

೧೯. ದಾತ್ತ ಕೀರ್ತ್ತಿ ಪ್ರಭಾವನಣ್ಣಲದೇವ ॥ ವ ॥ ಆ ಮಹಾನುಭಾವರಿರ್ಬ್ಬರುಂ ನಿಜಾನ್ವ

೨೦. ಯ. ಲಕ್ಷ್ಮಿಯನಳಂಕರಿಸಿ ಸುಖಸಂಕಥಾ ವಿನೋದದಿಂ ರಾಜ್ಯಂಗೆಯುತ್ತಮಿಳ್ದು

೨೧. ಸಮಧಿಗತ ಪಂಚಮಹಾಶಬ್ದ ಮಹಾಸಾಮನ್ತ ವಿಜಯಲಕ್ಷ್ಮೀಕಾಂತಂ ಗಿರಿಗೋ

೨೨. ಟೆಮಲ್ಲಂ ಶಿತರಣ[ಗಂಡ] .ಮರಳಂ ಮಂಗಿಯ ಮರುಳ .. [ನಾ]

೨೩. ಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮದಯ್ಯಣ ಕೊಂಬಳಿ ಪಲ್ಲವದೇವ

೨೪. .ಳ್ದರಸರ ಬಿನ್ನಪಂ ಧರ್ಮ್ಮಕಾರ್ಯ ತಾತ್ಪರ್ಯ್ಯರಾಗಿ ಶ್ರೀಮಚ್ಚಾಳುಕ್ಯ ವಿಕ್ರ

೨೫. ಮ ವರ್ಷದ ೯ನೆಯ ರಕ್ತಾಕ್ಷಿ ಸಂವತ್ಸರದಾಷಾಡ ಬಹುಳ ೧ ಶುಕ್ರವಾರದನ್ನು.

೨೬. ದ ಗ್ರಹಾರ ಪಿರಿ ಯ ಗೊಬ್ಬೂ ರ ಮೂಲಿಗೆ ಮಹಾಜನ ಪ್ರಮುಖರ್ಮುದಗುಂದೂ..

೨೭. ದರ ಮೂಲಿಗರ್ಗ್ಗೆ ಮೂಲಿಗದೆರೆಯುಮಂ ಬೆಳದೆರೆಯುಮಂ ಧಾರಾಪೂರ್ಬ್ಬಕಮ್ಮಾಡಿ ಚಂ.

೨೮. ರ್ಕ್ಕ ತಾರಂವರಂ ಬಿಟ್ಟ ॥ ಕನ್ದ ॥ ಪರಮ ಶ್ರೀ ಜಿನಪದ ಪಂಕರುಹಾರ್ಚ್ಚನೆಗೆನ್ದು ಬಿಟ್ಟ

೨೯. ವರುವಣಮಮಂ ಚನ್ದರಸ[ಕ್ಕ]ಧಿದೈವ ಜಿನೇಶ್ವರ ಭವನಕ್ಕಿನ ಶಶಾಂಕರುಳ್ಳನ್ನೆವರಂ॥ ಇನ್ತೀ

೩೦. ಧರ್ಮಮಂ ತಪ್ಪದೆ ಪ್ರತಿಪಾಳಿಸಿದವರ್ಗ್ಗೆ ವಾರಣಸಿ ಪ್ರಯಾಗೆ ಕುರುಕ್ಷೇತ್ರಮೆಂಬ ಪುಣ್ಯ ತೀರ್ಥಂ

೩೧. ಗಳೊಳ್ ಸಾಸಿರ್ವ್ವರ್ಚ್ಚತುರ್ವ್ವೇದ ಪಾರಗರಪ್ಪ ಬ್ರಾಹ್ಮಣರ್ಗ್ಗೆ ಸಾಸಿರ ಕವಿಲೆಯಕೋಡುಂ ಕೊಳಗಮಂ

೩೨. ................ ತಾರಂಮುದಿತೋದಿತ ಮಾಗಿ ಪಾಲಿಪರ ಪರಮ ಸುಖಾಸ್ಪದ ನಕ್ಕು ಪಾಪದಿ ನಳಿದ ದುರಾತ್ಮಕ ರೌರವಕ್ಕೆ ಗಳಗಳನಿಳಿಗುಂ.

**೫. ಗಬ್ಬೂರು ಕ್ರಿ.ಶ.೧೦೮೪**

ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕಿನ ಗಬ್ಬೂರ ಊರಿನ ಸೂಗೂರೇಶ್ವರ ಬೆಟ್ಟದ ದಾರಿಯಲ್ಲಿ ಬಿದ್ದಿರುವ ಶಾಸನದಲ್ಲಿನ ಉಲ್ಲೇಖಿತ ಕಾಲವು ಚಾಳುಕ್ಯ ವಿಕ್ರಮನ ೯ನೆಯ ವರ್ಷದ ರಕ್ತಾಕ್ಷಿ, ಆಶ್ವಯುಜದ ಪುಣ್ಣಮಿ. ಸೋಮವಾರ, ಸೋಮಗ್ರಹಣದ ದಿನವಾಗಿದ್ದು ಇದು ಕ್ರಿ.ಶ.೧೯-೯.೧೦೮೪ ಸೋಮವಾರಕ್ಕೆ ಸರಿ ಹೊಂದುತ್ತದೆ. ಅಂದು ಚಂದ್ರಗ್ರಹಣವಿತ್ತು. ಚಾಳುಕ್ಯ ತ್ರಿಭುವನಮಲ್ಲನು ರಾಜ್ಯಭಾರ ಮಾಡುತ್ತಿದ್ದಾಗ ಅವನ ಮಹಾಮಂಡಳೇಶ್ವರನಾಗಿ ಜೋಯಿಮಯ್ಯರಸನಿರುತ್ತಾನೆ. ಇವನನ್ನು ಶಾಸನದಲ್ಲಿ ಮದನಮಹೇಶ್ವರ, ಅಭಿನವ ಚಾರುದತ್ತ ಉಭಯಬಳ ರಣಾಚಾರ್ಯ ಮುಂತಾದ ವಿಶೇಷಣಗಳಿಂದ ಕರೆಯಲಾಗಿದೆ. ಇವನು ಎಡದೊರೆ ಎರಡು ಸಾವಿರ, ಕಲ್ಲಕೆಳಗೈನೂರು ಪ್ರಾಂತ್ಯಗಳನ್ನು ದುಷ್ಟನಿಗ್ರಹ ಶಿಷ್ಟಪಾಳನದಿಂದಾಳುತ್ತಿದ್ದ, ಇವನ ಮನೆವೆಗ್ಗಡೆ ಮತ್ತು ದಂಡನಾಯಕ ಕಲ್ಲಪ್ಪಯ್ಯ. ಈ ಕಲ್ಲಪ್ಪಯ್ಯನ ವಿನಂತಿಯ ಮೇರೆಗೆ ಗೊಬ್ಬೂರ ಕಲಿದೇವಸ್ವಾಮಿಯ ಪೂಜಾವಿಧಾನಕ್ಕೆ ದೇಗುಲದ ಖಣ್ಡಸ್ಫುಟಿತ ನವಕರ್ಮಕ್ಕೆಂದು ಮಹಾಮಂಡಳೇಶ್ವರ ಜೋಯಿಮರಸನು ಮುಗುಂದೂರು ೩೦೦ರ ಬಳಿಯ ಗ್ರಾಮವಾದ ಹಳ್ಳಿಸಿಂತೆಯನ್ನು ಧರ್ಮವಾಗಿ ಬಿಟ್ಟನು. ಮಹಾಸಾಮಂತನಾದ ಮಾಹಿಷ್ಮತೀ ಪುರವರೇಶ್ವರನಾದ, ಪ್ರಳಯಭೈರವ, ಸಾಹಸ ವೈನತೇಯ ಮುಂತಾದ ವಿಶೇಷಣಗಳನ್ನು ಪಡೆದಿದ್ದ ಚಂದರಸ ಮತ್ತು [ಕಂ]ಣಲದೇವನು ಸೇರಿ ಹಳ್ಳಿಸಿಂತೆಯ ಮಾನ್ಯದ ತೆರಿಗೆಯನ್ನೆಲ್ಲಾ ದೇವರಿಗೆ ಬಿಟ್ಟಿದ್ದನ್ನು ತಿಳಿಸುತ್ತದೆ. ಜಕ್ಕರಸನೆಂಬುವವನು ದೇವರ ನೈವೇದ್ಯಕ್ಕೆಂದು ಮೂರುವರೆ ಮತ್ತರು ನೆಲ ಬಿಡುತ್ತಾರೆ. ಪೂಜಾರಿಗಳಾಹಾರ ದಾನಕ್ಕೆ ದೇವರ ನಿತ್ಯಪೂಜೆಯ ಹೂವಿಗೆಂದು, ಹೊಲ, ತೋಟಗಳನ್ನು ಬಿಟ್ಟಿದ್ದಲ್ಲದೆ ಪಾದಮೂಲ ಪರಿಹಾರಕ್ಕೆ ನಿವೇಶನ, ನಂದಾದೀವಿಗೆಗೆ ಗಾಣವನ್ನು ಬಿಡುತ್ತಾನೆ.

೧. ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ತ್ರೈಲೋಕ್ಯ ನಗರಾರಂಭ ಮೂಳಸ್ತಂಭಾಯ ಶಂಭವೇ ॥ ಸ್ವಸ್ತಿ ಸಮಸ್ತ ಭುವನಾ.

೨. ಶ್ರಯ ಶ್ರೀ ಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕಂ ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಭರ

೩. ಣಂ ಶ್ರೀಮತ್ರಿಭುವನಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ಧಮಾನಮಾ ಚಂದ್ರರ್ಕ್ಕ ತಾರಂಬರಂ ಸಲು.

೪. ತ್ತಮಿರೆ ತತ್ಪಾದ ಪದ್ಮೋಪಜೀವಿ ಸಮಧಿಗತ ಪಂಚಮಹಾಶಬ್ದ ಮಹಾಮಣ್ಡಳೇಶ್ವರಸಹಿತ ಮಣ್ಡಳಿಕ ಮದನ ಮಹೇಶ್ವರಂ ಧಿ.

೫. ವಿಜ ಕುವಳಯ ಸುಧಾಕರಂ ವಿನಯ ರತ್ನಾಕರಂ ಸೆಣಸುವ ಮಣ್ಡಳಿಕ ತಲೆಯ ಕರವತ್ತನಭಿನವ ಚಾರುದತ್ತನೊಡ್ಡಗಣ್ಡಸ್ಥ

೬. ಳ ಬಳಸುವ ಮಣ್ಡಳಿಕರ ಮಣ್ಡೆಯ ಸೆಡೆವಂ ಮರೆವುಗೆ ಕಾವಂ ವಿಷಮ ತುರುಗಾರುಡ ಪ್ರೌಢರೇವಂತಂ ೭. ನಹಿತ ಕೃತಾಂನ್ತಂ ಶ್ರೀ ಮಲ್ಲಿಕಾರ್ಜುನದೇವ ಲಬ್ಧವರಪ್ರಸಾದನುಭಯಬಳ ರಣಾಚಾರ್ಯ್ಯನ ಚಳಿತ ಧೈರ್ಯ ಶ್ರೀಮತ್ರಿಭುವ

೮. ನಮಲ್ಲದೇವ ಷೇಷಣಗರುಡಂ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಂಣ್ಡಲೇಶ್ವರಂ ಜೋಯಿಮಯ್ಯರಸರು ॥ ಕಂ ॥ ಶ್ರೀ

೯. ಧರಣೀ ನಲಿದು ನರ್ತ್ತಿಸಿ ಪೇರುರದೊಳ್ ವಿಜಯಲಕ್ಷ್ಮೀ ಭುಜಪಂಜರದೊಳ್ ರಾರಾಜಿಸೆ ನೆಗಳ್ದಿಂಕದ ಬೀರಂ ಮಂಡಳಿಕ ಮಕುಟ ಭೂ

೧೦. ಬುಜಂ ಅರಿರಾಯರ ಬೇರಂ ಸಂಗರದೊಳಿಡಿದಡಸಿ ತರ್ಪ ವಿಕ್ರಮ ಚಕ್ರೇಶ್ವರನ ಕರಚಕ್ರಮೆನಿಸಿದ ನರಾತಿ ಚಕ್ರಕ್ಕೆ ಜೋಯಿಯೆರ

೧೧. ಕ್ಷಿತಿಪಾಲಂ ॥ ವ ॥ ಅನ್ತೆನಿಸಿದ ಜಗದಾಶ್ಚರ್ಯ್ಯ ಶೌರ್ಯ್ಯ ಕ್ರೀಡಾ ಚಮತ್ಕಾರಿತ ವೀರಚಕ್ರ ನೆನಿಸಿದ ಶ್ರೀಮನ್ಮಹಾ ಮಣ್ಡಳೇಶ್ವರ ಜೋಯಿಮರಸರೆ

೧೨. ಡದೋರೆಯಿಚ್ಚಾಯಿಸಿರಮುಂ ಕಲ್ಲಕೆಳಗಯ್ಯೂರುಮಂ ದುಷ್ಟನಿಗ್ರಹ ಶಿಷ್ಟಪ್ರತಿಪಾಳನದಿನಾಳುತ್ತಮಿರೆ ಶ್ರೀಮನ್ಮನೆವೆರ್ಗ್ಗಡೆ ದಣ್ಣನಾಯಕಂ ಕ.

೧೩. ಲ್ಲಪಯ್ಯಂಗಳ ಬಿನ್ನಪದಿಂ ಶ್ರೀಮಚ್ಚಾಳುಕ್ಯ ವಿಕ್ರಮ ವರ್ಷದ ೯ನೆಯ ರಕ್ತಾಕ್ಷಿ ಸಂವತ್ಸರ ದಾಶ್ವಯುಜದ ಪುಣ್ಣಮಿ ಸೋಮವಾರದಂ.

೧೪. ದಿನ ಸೋಮಗ್ರಹಣ ನಿಮಿತ್ತಂ ಶ್ರೀಮದಗ್ರಹಾರಂ ಪಿರಿಯಗೊಬ್ಬೂರ ಶ್ರೀ ಕಲಿದೇವಸ್ವಾಮಿ ದೇವರ್ಗ್ಗೆ ಪೂಜಾವಿಧಾನಕ್ಕಂ ದೇಗುಲದ ಖಣ್ಡ.

೧೫. ಸ್ಫುಟಿತ ನವಕರ್ಮ್ಮಕ್ಕಂ ಚಂದ್ರಾರ್ಕ್ಕ ತಾರಂಬರಂ ಸಲುವಂತಾಗಿ ಶ್ರೀಮನ್ಮಹಾಮಣ್ಡಳೇಶ್ವರಂ ಜೋಯಿಮರಸರ್ಮ್ಮದುಗುನ್ದೂರ್ ೩೦೦ರ

೧೬. ಬಳಿಯ ಬಾಡಂ ಹಳ್ಳಸಿಂತೆಯಂ ತ್ರಿಭೋಗಾಭ್ಯಾಂತರ ಸಿದ್ಧಿಯಿಂ ಸರ್ವ್ವ ನಮಸ್ಯವಾಗಿ ಬಿಟ್ಟರ್ಮ್ಮತ್ತಂ ॥ ಸಮಧಿಗತ ಪಂಚಮಹಾಶಬ್ದ ಮ

೧೭. ಹಾಸಾಮನ್ತ ವಂದಿಜನವನ ವಸಂತ ಮಾಹಿಷ್ಮತೀಪುರವರೇಶ್ವರಂ ಪ್ರತಾಪ ಲಂಕೇಶ್ವರಂ ದಶದಿಶಾವರಂ ಧವಳಿತ ಕೀರ್ತಿಪ್ರಭಾವಂ ಬಂಟರಭಾ

೧೮. ಮನುದ್ಧೃತ ಪ್ರಳಯ ಭೈರವಂ ಪರಾಕ್ರಮ ಕಣ್ಠೀರವಂ ಸಾಹಸ ವೈನತೇಯಂ ಶೌಚ ಗಾಂಗೇಯನಭಯ ಬಳಸುಭಟಮುಖ

೧೯. ದರ್ಪ್ಪಣಂ ಶರಣಾರ್ತ್ಥಿ ಸಂತರ್ಪ್ಪಣಂ ಸಿಡಿಲಮಾರ್ಕ್ಕೊಳ್ವಂ ಮೊನೆಗೆ ಮುಂಕೊಳ್ವಂ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಸಾಮಂನ್ತ ಚನ್ದರ

೨೦. ಸರು [ಕಂ]ಣಲದೇವನು ಹಳ್ಳಸಿಂತೆಯ ಮನ್ನೆಯ ಸಾಮ್ಯದ ತೆರೆಯಿಲ್ಲಮಂ ದೇವರ್ಗ್ಗೆ ಧಾರಾಪೂರ್ವಕ ಸರ್ವ್ವನಮಸ್ಯವಾಗಿ ಬಿಟ್ಟರು ॥

೨೧. ಕಂ ॥ ಶ್ರೀಮಜಾತಂ ಕಲಿದೇವಸ್ವಾಮಿ ಪದಾಂಭೋಜ ಚಂಚರೀಕಂ ದೃತವಕ್ಯಾಮೃತನಿಧಿ ನಿಜವಂಶ ಲಲಾಮಂ ಜಕ್ಕರಸನಮಳ ಗುಣಗಣಧಾಮಂ॥

೨೨. ಎನಿಸಿದ ಮಾನ್ತನದರಿವಿನ ವಿನಯದ ವಿಕ್ರಮದ ವಿಭವದೌದಾರ್ಯ್ಯದ ರೂಪಿನ ಸತ್ಯದ ಶೌಚದ ಪೆಂಪಿನ ಪೊಂಪುಳಿಗೆಕ್ಕ ಲಾವಣ್ಯಂ ಜಕ್ಕರಸಂ.

೨೩. ॥ ವ ॥ ಆ ಮಹಾನುಭಾವಂ ತಮ್ಮ ವೃತ್ತಿಯ ಕೆಯ್ಯೊಳಗೆ ಪಿರಿಯ ಕೋಲಲೂರಿಂ ಪಡುವ ಬೆಳ್ದೊಣೆಯ ಬಟ್ಟೆಯಿಂ ಬಡಗಣ ಸ್ಥಳದಲ್ಲಿ ದೇವರ ನಿ

೨೪. ವೇದ್ಯಕ್ಕೆ ಬಿಟ್ಟ ಕರಿನೆಲಂ ಮತ್ತರು ಮೂರುವರೆ ಪೂಜಾರಿಗಳಿಗಾಹಾರಕ್ಕೆ ಬಿಟ್ಟ ಕರಿಯ ಮತ್ತರೆರಡು ದೇವರ ನಿತ್ಯ ಪೂಜಾದಿ ಬಿಟ್ಟ

೨೫. ಪೂವಿನ ತೋಂಟಂ ಮತ್ತರೊಂದು ದೇವರ ಪಾದಮೂಲ ಪರಿವಾರಕ್ಕೆ ಬಿಟ್ಟ ನಿವೇಶನವೊಂದು ನಂದಾದೀವಿಗೆಗೆ ಬಿಟ್ಟ ಗಾಣ ಯೆಲೆಯ ಗಾಣಂ ನಾಲ್ಕು

೨೬. ಇಂತೀ ಧರ್ಮಮಂ ಪ್ರತಿಪಾಳಿಸಿದವರ್ಗ್ಗೆ ಬಾರಣಾಸಿ ಪ್ರಯಾಗೆ ಕುರುಕ್ಷೇತ್ರಮೆಂಬೀ ಪುಣ್ಯ ತೀರ್ತ್ಥಗಳೊಳ್ ಸಾಸಿರ ಲಿಂಗಮಂ

೨೭. ಪ್ರತಿಷ್ಠೆಯ್ದು ಸಾಸಿರ್ವ್ವರ್ವ್ವೇದ ಪಾರಗರಪ್ಪ ಬ್ರಾಹ್ಮಣರ್ಗ್ಗೆ ಸಾಸಿರ ಕವಿಲೆಯ ಕೋಡಂ ಕೊಳಗುಮಂ ಪಂಚರತ್ನದಿಂ ಕಟ್ಟಿಸಿಯುಭಯ ಮು

೨೮. ಖಿ ಗೊಬ್ಬ ಫಲಮಕ್ಕುಮೀ ಧರ್ಮ್ಮಮನ ಳಿದಂ ಗಾ ಪುಣ್ಯತೀರ್ತ್ಥಂಗಳೋಳನಿತು ಲಿಂಗಮುಮನಿತು ಬ್ರಾಹ್ಮಣರುಮುನಿತು ಕವಿಲೆಯು

೨೯. ಮನಳಿದ ಮಹಾಪಾತಕಮಕ್ಕುಂ ॥ ಕಂ ॥ ಇದನಾ ಚಂದ್ರಾರ್ಕ್ಕಂ ಕ್ರಮುದಿತೋದಿತಮಾಗೆ ಮಾಡಿದಂ ಪರಮ ಸುಖಾಸ್ಪ

೩೦. ದನಕ್ಕು ಪಾಪದಿನಳಿದ ದುರಾತ್ಮಂ ರೌರವಕ್ಕೆ ಗಳಗಳನಿಳಿಗುಂ ॥ ಗಂಗಾ ಸಾಗರ ಯಮನಾ ಸಂಗಮ ಬಾಣರಾಶಿ, ಗೆಯ ಯೀ

೩೧. ತೀತ್ಥಗಳೊಳಾತ್ಮಕುಳ ದ್ವಜಪುಂಗವ ಗೋಕುಳಮನಳಿದರಿಂತಿದನಳಿದರ್ ॥ ಅರಸರ್ಗ್ಗೆ ಸಿ. [ಚಂ]ದರಸರು ತಮ್ಮಾಳ್ವಿಕೆಯಿಂದು ದಾಯದ

೩೨. . . . .ತೆರೆಯೆಂದುರುವಣಮೆಂದು, ಬಳವಂದರ ಕಾಣಿಯನಿಕ್ಕೆ ಕಾಣವರ್ಚ್ಚಣ್ದಳೆ. . . ಸಾಮಾನ್ಯೋಯಂ ಧರ್ಮಸೇತು ನೃಪಾಣಂ

೩೩. . . . . . ನಿಯೋ ಭವದ್ಭಿಃ ಸರ್ಭರ್ಭಾನೇತಾನ್ಭಾವಿನರ್ರೂರ್ತ್ಥಿವೇನ್ತ್ರಾದ್ದನ್ ಭೂಯೋಯಾಚತೇ ರಾಮಭದ್ರಃ ಬಹುವಿರ್ವ್ವಸುಧಾ

೩೪. . . . . . . ಯಸ್ಯ ಯಸ್ಕ ಯದಾ ಭೂಮಿಸ್ತಸ್ಯ ತಸ್ಯ ತದಾಪಳಂ ॥ ಸ್ವದತ್ತಂ ಪರದತ್ತಂ ವಾ ಯೋ ಹರೇತಿ

೩೫. ವಸುಂಧರಾ ಷಷ್ಟಿರ್ವ್ವರಿಷ ಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ @ ಶ್ರೀಮತ್ ಸರಸ್ವತಿ ಮುಖದರ್ಪ್ಪಣ . . . .ವೋಜನ ಲಿಖಿತಂ ಮಂಗಳ ಮಹಾ

**೬. ನಗನೂರು(ಕರೀಂನಗರ–ಆಂಧ್ರಪ್ರದೇಶ) ಕ್ರಿ.ಶ.೧೧೧೨**

ಇದರಲ್ಲಿ ಶಕ ೧೦೩೫, ನಂದನ ಸಂವತ್ಸರ, ಪೌಷ್ಯ, ಶುದ್ಧ ೫, ಸೋಮವಾರ ಎಂದು ತೇದಿ ಇದೆ. ಕ್ರಿ.ಶ.೧೧೧೨, ಡಿಸೆಂಬರ್ ೨೫, ಬುಧವಾರಕ್ಕೆ(ಸೋಮವಾರವಲ್ಲ) ಸರಿಹೊಂದುತ್ತದೆ. ಮಹಾ ಮಂಡಳೇಶ್ವರ ಪಂಡರಸ ಎಂಬುವವನು ರವೀಶ್ವರ ದೇವಾಲಯವನ್ನು ಕಟ್ಟಿಸಿ, ಆ ದೇವರಿಗೆ ನೀಡಿದ ಭೂ ದತ್ತಿಯನ್ನು ಇದರಲ್ಲಿ ದಾಖಲಿಸಿದೆ.

**ಮೊದಲನೆಯ ಮುಖ**

೧. ಸ್ವಸ್ತಿ ಸಕವರ್ಷದ ೧೦೩೫

೨. ನೆಯ ನಂದನ ಸಂವತ್ಸ

೩. ರದ ಪೌಷ್ಯ ಸುದ್ಧ ೫

೪. ಸೋಮವಾರದಂ

**ಎರಡನೆಯ ಮುಖ**

೧. ದೇಸನಲ

೨. [ಕ್ವಾ(ನ್ತಿ)ಯ ದೇವ[ರು]

೩. ಅರುವಪಣ್ಡಿತ

೪. ರ ಕಾರಂ ಕರ್ಚ್ಚಿ ತಾ

೫. ದು ಸ್ವಸ್ತಿ ಶ್ರೀಮನ್ಮ
೬. ಹಾಮಣ್ಡಳೇಶ್ವರ
೭. [ಪ]ಣ್ಡರಸರ ಶ್ರೀ ರ [?]
೮. ವ್ವೀ [ಶ್ವ]ರ(ದೇ)ವಳ ಬಿಟ್ಟ
೯. ಪರಕೆರೆಯ ಪ
೧೦. ರಗೆಂ ಗಳ್ದಿ ನಾಲ್ಕು
೧೧. ಮತ್ತ[ರ. .]ಕೆರೆ
೧೨. ದ (ರಾ)ಟಾಣ.

೫. ಳಕೆರೆಯ ಸಾ
೬. . . ಮಾಗೆ [ಬ]
೭. [ಟ] ಭೀಮೇಶ್ವರ
೮. [. . ಣ್ಣು] ಮತ್ತರು
೯. ............ .ಕೆರೆಯಲು
೧೦. ............
೧೧. ............
೧೨. ............

**೭. ಮಂಗಳವೇಡೆ (ಸೊಲ್ಲಾಪುರ–ಮಹಾರಾಷ್ಟ್ರ) ಕ್ರಿ.ಶ.೧೧೧೩**

ಮಹಾರಾಷ್ಟ್ರದ ಸೊಲ್ಲಾಪುರ ಜಿಲ್ಲೆಯ ಪಂಡರಾಪುರ ತಾಲೂಕಿನ ಮಂಗಳವೇಡೆ ಗ್ರಾಮದ ಮಾಮಲೇದಾರ್ ಕಚೇರಿಯ ಆವರಣದಲ್ಲಿ ದೊರೆತಿರುವ ಶಾಸನ ಇದು. ಈ ಶಾಸನದಲ್ಲಿ ಕಾಲವು ವೀರವಿಕ್ರಮ ವರ್ಷ ೩೯, ವಿಜಯ ಸಂವತ್ಸರ, ಜೇಷ್ಟ. ಬ ೫ ಆದಿವಾರದ ಉಲ್ಲೇಖವಿದ್ದು, ಇದು ಕ್ರಿ.ಶ.೬–೬–೧೧೧೩ ಶುಕ್ರವಾರ(ಭಾನುವಾರವಲ್ಲ)ಕ್ಕೆ ಸರಿ ಹೊಂದುತ್ತದೆ. ನಾಗದೇವ, ಸಾಯಿಕಬ್ಬೆಯರಿಗೆ, ಕಾಳಿಯಣ್ಣನ ವುಶ್ರವಣಕ್ಕೆ ಪಂದರಸ, ಪೆರ್ಗಡೆ ಸಿವರಿಮಯ್ಯ ಮೊದಲಾದವರು ಸೇರಿ ದಾನ ನೀಡಿದ ವಿವರ ಬಂದಿದೆ. ಈ ಶಾಸನದ ಕೊನೆಯಲ್ಲಿ ಫಲಶ್ರುತಿಯೂ ಇದೆ.

೧. ಸ್ವಸ್ತಿ ಶ್ರೀ ವೀರವಿಕ್ರಮ ಕಾಲದ ೩೯ ವಿಜಯ ಸಂವತ್ಸರದ ಜೇಷ್ಟ ಬಹು
೨. ಳ ೫ ಆದಿವಾರದಂದು ನಾಗದೇವಂಗ ಸಾಯಿಕಬ್ಬೆಗ ಕಾಳಿಯ
೩. ಣ್ಣನ ವುಸ್ರಾವಣಕ್ಕೆ ಪಂದರಸನುಂ ಪೆರ್ಗ್ಗಡೆ ಸಿವರಿಮಯ್ಯನುಂ
೪. ಸರ್ವ್ವಬಾಧಪರಿಹಾರವಾಗಿ ಕೊಟ್ಟ ಕೆಯ್ಯ ಮತ್ತರು ೧೩ ಇದಕಾ
೫. ಗಾಂತುಕವಾರಾಗಿ ನಡೆವವಾರಾಗಿಯು ಪತ್ತಿದರಪ್ಪ
೬. ಡೆ.ವಾ.ಬ್ರಾಹ್ಮಣನ ದೋಶಮವದನೆಯ್ದುವದು ಸಮಸ್ತ
೭. ವ್ರಿತ್ತಿಕಾರರು ಪೊಳ್ಳಿಕ ಹೊಲ್ಲಪಕ ಪರಿಹರಿಸಿದ
೮. ಡೆಮಾ ದೋಶ ತವಗಂ ಇನ್ತೀ ಮರ್ಯ್ಯಾದೆಯಂ ಕೊ
೯. ಟ್ಟ ಕೆಯ್ಯಂ ಚಂದ್ರಾರ್ಕ್ಕಂಬರ ಸುಖವುಂಬರು

## ೮. ಕೊಂಡಗೂಳಿ(ಜೇವರ್ಗಿ ತಾ.-ಕಲಬುರ್ಗಿ) ಕ್ರಿ.ಶ.೧೧೧೬

ಕಲಬುರ್ಗಿ ಜಿಲ್ಲೆ ಜೇವರ್ಗಿ ತಾಲೂಕಿನ ಕೊಂಡಗೂಳಿಯ ಕ್ರಿ.ಶ.೧೧೧೬ ರ ಶಾಸನವು ಹಗರಿಟ್ಟಗೆ-೩೦೦ನ್ನು ಆಳುತ್ತಿದ್ದ ಹಂದಿಯರಸನ ಬಗ್ಗೆ ತಿಳಿಸುತ್ತದೆ. ಕೊಂಡಗುಳಿಯ ಪ್ರಭು ಬಿಲ್ಲರಸನು ಶ್ರೀಮಲ್ಲಿಕಾರ್ಜುನದೇವರ ಲಿಂಗ ಪ್ರತಿಷ್ಠಾಪನೆ ಮಾಡಿದ ದೇವರಿಗೆ ಹಂದಿಯರಸನು ದಾನ ಕೊಟ್ಟ ವಿಷಯವನ್ನು ತಿಳಿಸುತ್ತದೆ.

೧. ನಮಃಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾ

೨. ಯ ಶಂಭವೇ॥ ಸ್ವಸ್ತಿ ಸಮಸ್ತ ಭುವನಾಶ್ರಯಂ ಸ್ರಿ(ಶ್ರೀ)ಪಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇ

೩. ಶ್ವರಂ ಪರಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಸ್ರೀ(ಶ್ರೀ) ಮತ್ರಿಬುವನಮಲ್ಲದೇವ

೪. ವಿಜಯರಾಜ್ಯಮುತ್ತರೋತ್ತರಾಭಿವ್ರಿ(ವೃ)ದ್ಧಿ ಪ್ರವರ್ದ್ಧಮಾನಂ ಆಚಂದ್ರಾರ್ಕ್ಕತಾರಂಬರಂ ಸಲುತ್ತಮಿರೆ॥

೫. ಜಯಂತೀಪುರದ ನೆಲೆವೀಡಿನೊಳು ಸುಖಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಮಿರೆ ತತುಪಾದ

೬ .ಪದ್ಮೋಪಜೀವಿ ಸಮಧಿಗತ ಪಂಚ ಮಹಾಸಬುದ(ಬ್ಧ) ಮಹಾಸಾಮಂತ ವಿಜಯಲಕ್ಷ್ಮೀಕಾಂತ ಸುವರ್ಣ್ನಪುರ

೭. ವರಾಧೀಶ್ವರಂ ವೀರಮಾಹೇಶ್ವರಂ ಬೈಸಕುಳ ಕಮಳ ಮಾರ್ತ್ತಂಡಂ ಸಮರ ಪ್ರಚಂಡ ಸತ್ಯರಾಧೇಯ ಸಾಚಗಾಂಗೇ

೮. ಯನತಿ ವಿಷಯ ಹಯಾರೂಢ ಪ್ರೌಢರೇಖಾರೇವಂತ ಪರಬಳ ಕ್ರಿತಾಂತನರಿ ಸಾಮಂತ ಸೀಮಂತಿನೀ ವೈದಬ್ಯ(ವ್ಯ)ದಿಬ್ಯ(ವ್ಯ)

೯. ದೀಕ್ಷಾಸಂತರ್ಪ್ಪಣಂ ಸಾಮಂತ ಮುಖದರ್ಪ್ಪಣಂ ಶರಣಾಗತ ವಜ್ರಪಂಜರಂ ವೈರಿದಿಕ್ಕುಂಜರಂ ಸ್ರೀ(ಶ್ರೀ) ತ್ರಿಭುವನಮಲ್ಲ ಪಾದಾ

೧೦. ರಾಧಕಂ ಪರಬಳಸಾಧಕಂ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಸ್ರೀ(ಶ್ರೀ) ಮನ್ಮಹಾಸಾಮಂತ ಬೈಸರಸರು ಹಂದಿಯರ

೧೧. ಸರು ಹಗರಿಟ್ಟಗೆ ಮೂನೂರುಮಂ ತ್ರಿಭೋಗಾಭ್ಯಂತರ ಸಹಿತ ಸುಖದಿನಾಳುತ್ತಮಿರಲು ಚಿಕ್ಕ ಕೊಂಡಗುಳಿಯ

೧೨. ಪ್ರಭುವೆನ್ತೆನೆ ॥ ಭುವನಪ್ರಸಿದ್ಧನಾಹವಧವಳಂ ಭಯಲೋಭದೂರನನುಪಮ ವೀರಂ ಶಿವಪಾದಪದ್ಮಭ್ರ

೧೩. ಮರಂ ರವಿತೇಜೋದ್ಭಾಸಿ ನೆಗಳ್ದ ನಾಯಕಮಲ್ಲ ॥ನಿಜವಂಶವಾರ್ದ್ಧಿಚಂದ್ರ ವಿಜೆಯಾಳಂಕಾರನದಟ ನಹಿತರ

೧೪. ಗಂಡ ಭುಜಬಳಮಲ್ಲಂ(ಲ್ಲಂ) ಮುನಿಜನಕಲಂ ಪೆರ್ಮ್ಮಾಡಿದೇವನಣುಗಿನ ಬಂಟ ॥ ಆತನ ಸತಿ ನೆಗಳ್ದೀ ಕುಭೃತಾ

೧೫. ರಿಗೆವತಿಶಯದ ರತಿಗೆ ರಂಭೆಗೆ ಮಿಗಿಲೆಂಬಿನೆಗಂ ಬೂತಳದೊಳು ಮೂಕಿಯಬ್ಬೆಗೆಣೆಯಾರ್ಸ್ಸತಿಯರು॥

೧೬. ಆ ಯುವತಿ ರತ್ನಕಂತಾ ಯ್ತಬುಜ ಪ ರಿಘನೆನಿಪ ನಾಯಕಮಲ್ಲಂಗಾಯುಂಸ್ತ್ರೀ(ಶ್ರೀ) ಯುಂ ಕೀರ್ತಿಯುಮಾಯುತಿಳೊಕ.

೧೭. ವಂತೆ ಮಕ್ಕಳೊಗೆದರ್ನ್ನಾಲ್ವರು ॥ ಅವರೊಳಗಗ್ರ್ರಜಾತನಖಿಳಾವನಿ ಸಂಸ್ತುತನಾಧಿರಾಜ ಸಂಭವಚರಿತಂ ಮನೋ

೧೮. ಜ ಸಮರೂಪನೆನೆ ನೋರ್ಪ್ಪಡಗಣ್ಯ ಪುಣ್ಯನುತ್ಸವ ಬಳಕಾರಿ ವೈರಿಬಳಕಾರಿಯನೇಕರನಾಯ್ತು ಗೆಲ್ದನಾ

೧೯. ಹವದೊಳೆನೆಲೆ ಬಿಲರಸನೆಂಬಭಿದಾನವಂ ಮಚ್ಚದಿಪ್ಪರೇ॥ ತ್ರಿಭುವನಮಲ್ಲದೇವ ಬೆಸವೆಳ್ದದೆ ಕೂಡಿಯೆರಂ

೨೦. ಗಭೂಪನಂ ರಭಸದೆ ಕಾದಿ ಕೊನ್ದು ಜಯರಾಮನನಂಜಿಸಿ ಮತ್ತಂ ವನಕರಂ ಸುಭಟರನಿಕ್ಕಿ ಕೈಮುಗಿದು ಭೀರು

೨೧. ಗಳಂ ಪೆರಗಿರಿ ತನ್ನದೊಂದಭೆ(ಭ)ಯಮನಿತ್ತು ಕೊಂಡು ಜಯಲಕ್ಷ್ಮೀಗೆ ಲೋಲುಪನಾದ ಬಿಲಪ॥ ಪಲಮಂ ಸಂಗ್ರಾಮ.

೨೨. ರಂಗಾಗ್ರದೊಳೆ ಪದಿನಖ ಆಳದೇಂ ಕೊಂಡು ಬಾಹಾಬಳದಿಂ ಚಕ್ರೇಶನಂ ಮಚಿಸಿ ಜನಮೆನಿತುಂ ಬಂಣ್ಣಿಸಲು ಕೀರ್ತಿ

೨೩. ಗಂದಾರ್ಚ್ಚಿಲ್ಲಕಸಂ ಪತ್ತಿಗಂ ತಾನೆ ಮಿಗಿಲೆನಿಸಿದ ಪೆಂಪಿಂದಾ ಬೈರಂನ್ತರಂ ಮೆಗೆಲವದಗಿಪುಗ ಶಿಳಾಪುರ್ಬ್ಬಕಂ

೨೪. ಬಿಲಭೂಪ॥ ಆ ವಿಭುವಿಂದೆನಗ್ಗಿರಿಯನಂಕದ ಪೊಂಕದ ಬೀರರೆಲ್ಲಮ ಮೂವಳಸಾಗಿ ಸುತ್ತಿ ತರಿದಿಕ್ಕಿ

೨೫. ದನಾಜಿಯೊಳೆನ್ದೆಡಿಂನ್ನದಂ ಕೇವಳಮಾಯ್ತು ಬೀರದಳನಾರ್ಪ್ಪಿನ ನೇರ್ಪ್ಪಡ ಸೌರ್ಯ್ಯದೆಳೆಯಂ ದಿವನಿವಾತಳ

೨೬. ಮ ಪೊಗಳುತಿರ್ಪ್ಪುದು ಬರ್ಮ್ಮನ ಪೆರ್ಮ್ಮೆಯಂದಮ॥ ನೆರೆವೊಡೆ ಗಂಡನೆಂಬೀ ಬಿರುದಂ ಕುಡೆವಗಮರಿ ತ್ರಿಭು

೨೭. ವನಮಲ್ಲಂ ಪರಭಳಕ್ರಿತಾನ್ತನಣ್ಣನ ಗರುಡಂ ಬಮ್ಮರಸನನ್ತೆ ನೂತವಕಾಳರ॥ ಆತನನುಜಾತ ವಿಭು.

೨೮. ಖ್ಯಾತ ಯಶ ತೈಲರಾಜ ಮಾಧವನು ಭೂತಳ ವಿನೂತನನುಜನವೀ ತೆರದಿ ಸುಕದಿನರಸುಗೆ ಯ್ಯುತ್ತಿರ್ದ್ದುರಾ

೨೯. ಆನುಜರ್ಸ್ವಮೇತ ರಾಜ್ಯಮನನುಭವಿಸುತೊಂನ್ದು ದಿವಸ ಬಿಲ್ಲಮ ಬಾಶಮನ ದಂದೆಯ ಪೆಚ್ಚೆ ಮಾಡಿಸಲು

೩೦. ಮಗೆಯ್ದುಂ ಭವನಿವಾಸಮಂ ಭಾಸುರ ಮುಕರಮಿದು ತಾನೆ ಮೇಲು ಬಗೆಗಚ್ಚರಿ ನೋಡಲಳುಂಬ ಮಾದುದು ವಿಸ್ತರಿ

೩೧. ಸಲುಕೇಶ್ವರಾಲಯಮಂ ಬಿಲರಸಂ ಜನಕೆಂಬಿ ದಾನಮಂ ಸ್ತಿರಮಿರುವಂ ವಿನುತಾಸದೆ ಮಾಡಿಸಲು ಜಿತಶೌಚ

೩೨. ಯೆಂನ್ದಡೆ ಸುರಗಿರಿ ಮೇರುಪರ್ಬ್ಭತಮನಣ್ಣಲೆಗುಂ ನಿಜದುನ್ನತಿಕೆಯಿಂ । ಯಮ ನಿಯಮಾಸನ ಪ್ರಾಣಾಯಾಮ

೩೩. ಪ್ರತ್ಯಾಹಾರ ಜಪಸಮಾಧಿಶೀಲಗುಣಸಂಪ್ಪಂನ್ನರಪ್ಪ ಸಿಂಹಪರ್ಷೆಯಭಿನವ ಪಾಶುಪತ ಸುಬ್ರತಾಭರಣರಪ್ಪ ಸ.

೩೪. ರವಳ್ಳಿಯ ಜ್ಞಾನರಾಸಿ ರಾಜಗುರುದೇವರ ಶಿಶ್ಯರಪ್ಪ ಸೀ(ಶ್ರೀ) ಸಿದ್ಧಯೋಗಿ ಪಂಡಿತದೇವರ್ಗ್ಗೆ ಪರಮೇಸ್ವರ ದತ್ತಿಯಾ

೩೫. ಗೆ ಸ್ವಸ್ತಿ ಶ್ರೀ ಮಚ್ಚಾಳುಕ್ಯ ವಿಕ್ರಮ ಸಕವರ್ಶದ ೧೦೨೮ ನೆಯ ಮನುಮತ(ನ್ಮಥ) ಸಂವತ್ಸರದ ಪುಶ್ಯ ಸು(ಶು)ದ್ಧ ದಸಮಿ

೩೬. ಸೋಮವಾರಮುತ(ತ್ತ)ರಾಯಣ ಸಂಕ್ರಾನ್ತಿ ನಿಮಿತ್ತವಾಗಿ ಶ್ರೀಮತ್ರಿಭುವನಮಲ್ಲದೇವರ ತತ್ಪಾದ ಪದ್ಮೋಪಜೀವಿ ಪ

೩೭. ಗರಿಟ್ಟಗೆ ಮುನ್ನೂರರ ಬಳಿಯ ಬಾಡಂ ಕೊಂಡಗುಳಿಯ ಪ್ರಭುಬಿಲ್ಲರಸನುಂ ಅಲ್ಲಿಂ ಶ್ರೀಮಲ್ಲಿಕಾರ್ಜ್ಜುನ ದೇವ

೩೮. ರ ಲಿಂಗಪ್ರತಿಷ್ಟೆಯಂ ಮಾಡಿ ಆ ದೇವರಿಗೆ ಮಂನ್ನೆಯ ಬೈಸರಸ ಹಂದಿಯರಸ ಮುಖ್ಯವಾಗಿ ಆ ಮಟದಲುಂಬ ತಪೋಧನ

೩೯. ರಾಹಾರದಾನಕ್ಕಂ ಊರಿಂ ಪಡುವಣ ಹೊಲದಲು ಮಾದಿಯರಸನ ಮಾನ್ಯದ ಹಿಟ್ಟಿನ ಕೆಯಿಂ ತೆಂಕಲು ಹಿರಿಯ ಮಲ್ಲರಸ

೪೦. ನ ಮಾನ್ಯದ ಹಿಟ್ಟಿನ ಕೆಯಿಂ ಬಡರ(ಗ)ಲು ಸರ್ಬ್ಬನಮಶ್ಯವಾಗಿ ಧಾರಾಪೂರ್ಬ್ಬಕಂ ಮಾಡಿ ಬಿಟ್ಟ ಮೊರಟನ ಕೋಲ ಮತ್ತರು ೪ ಹೆ

೪೧. ಬಾಗಿಲ ಮಗಿಲಿಂಗೆ ಹೋದ ದಾರಿಯಿಂ ಬಡಗಲು ಮಗಿಲಿಂ ಮೂಡಲು ಊರೆಲ್ಲಂ ಮೊದಲು ಊರಗವನಿಯಿಂ ತೆಂಕಲು ದೇವರ ಪರಿಸೂತ್ರದಿಂಬ–

೪೨. ಡಗಣ ಬಿರಿಬಾಗಿಲವರ ಮನೆ ಹೊರಗಾಗಿ ದೇವರಿಗೆ ಸರ್ಬ್ಬನಮಸ್ಯವಾಗಿ ಬಿಟ್ಟ ಕೇರಿ। ಆ ಕೇರಿಯೊಳಗೆ ಕೂಸು.

೪೩. ಕುದುರೆ ಎತ್ತು ತೊತ್ತು ಭತ್ತ ಏನು ಮಾರಿದಡಂ ದೇವರ್ಗ್ಗೆ ಆಯಮಂ ತಿರುವರು ಅಲ್ಲಿಯ ಸಮಸ್ತಸಾಮ್ಯಮಂ ದೇವರ ದು

೪೪. ಊರಲು ದೇವರಿಗೆ ಗಾನಿಯಿಲೆಯಂ ತಿರುವಗಾಣ ೧ ಊರ ತಿಪ್ಪೆಸುಂಕದೊಳಗೆ ಪ್ರಭುಗಳಿಗೆ ಎರಡು ಭಾಗ ದೇವರಿಗೆ

೪೫. ವೊಂದು ೧ ಭಾಗ ಮಾನ್ಯಕರವೆನ್ನದೆ ಹೊರಗಣ ಭತ್ತವೆನ್ನದೆ ಹೊಂಗೆ ಮಾರಿದಲ್ಲಿ ಕೊಟ್ಟಲ್ಲಿ ಮಾನವೊಂದು ಕೊಂಡಲ್ಲಿ ಮಾನ ೧॥

೪೬. ಊರಲು ಬಂದು ಬಿಟ್ಟ ಎಲೆಯ ಹೇರಿಂಗೆ ಎಲೆ ೫೦ ಹೇರಿಂಗೆ ೨೫ ಹೊಂಗೆ ೫ ಅಡಕೆ ದೇವರಿಗೆ ॥ ಊರುಂ ತೆಂಕಲು ದೇವರಿಗೆ ಹೂದೋಂ

೪೭. ಟವಾಗಿ ಮಾಣಿಕೇಸ್ವರದ ಕೋಲಲು ಬಿಟ್ಟ ಮತ್ತರು ೨ ॥ ಸೂರ್ಯ್ಯ ಪಂಡಿತರಿಗೆ ದೇವರ ತ್ರಿಕಾಳದಲುಂ ಪೂಜೆಯಂ ನಡೆಸು

೪೮. ವನ್ತಾಗಿ ಸೋಮೇಶ್ವರದೇವರ ಕೆಯಿಂ ಮೂಡಲುರಿಯ ಸೀಮೆಯಂ ತೆಂಕಲು ಸರ್ಬ್ಬನಮಸ್ಯವಾಗಿ ಹಿರಿಯ ಮೊರಟನ

೪೯. ಕೋಲಲು ಬಿಟ್ಟ ಪೂಜಾರಿಗೆ ಯಿ ಮತ್ತರು ೬ ಅದರೊಳಗೆ ತಡಾಯಿಲರ್ಗ್ಗೆ ಮಾಣಿಕೇಸ್ವರದ ಕೋಲ ಮತ್ತರೊಂದು ಅವರಿಗೆ

೫೦. ಪೂಜಾರಿ ಮನೆ ಚದುರಸಕ್ಕೆಪ್ಪತ್ತನಾಲ್ಕು ಕೈಯಗಲದ ಸರ್ಬ್ಬನಮಸ್ಯವಾಗಿ ಬಿಟ್ಟ ನಿವೇಶನ ೧। ಮನ್ನೆಯಭೈಸರ

೫೧. ಸ ಹಂದಿಯರಸರ ಕೈಯಲು ಕಣಂಬೇಸ್ವರದ ಕೊದಗ ಭೋಲನನು ಅಲ್ಲಿಯ ಪ್ರಭು ಭೋಪರಸ ಭಾಗದೇವಿ ಮುಖ್ಯವಾ

೫೨. ಗಿ ಬಿಲ್ಲರಸನು ವಿಕ್ರಯವಾಗಿ ಕೊಂಡು ಕೊಟ್ಟ ಕೆಯಿ ಮಾಗಿಣಿಗೆರೆಯ ಸೀಮೆಯಿಂ ಪಡುವಲು ದವಳಾರದ ಸೀಮೆಯಿಂ

೫೩. ಬಡಗಲು ತುಂಬಿನಣೆಯ ಮೂಡಲು ಕಣಂಬೇಸ್ವರದಿಂ ಹೋದ ಮಾಗಿಣಿಗೆರೆಗೆ ಹೋದ ಬಟ್ಟೆಯಿಂ ತೆಂಕಲು ದೇವರ ಅಂಗ

೫೪. ಭೋಗ ಚೈತ್ರ ಪವಿತ್ರ ಕಡಸ್ಫುಟಿತ ಜೀರ್ನ್ನೋದ್ಧಾರಕಂ ತಪೋಧನರಾಹಾರದಾನಕ್ಕಂ ಸರ್ಬ್ಬನಮಸ್ಯವಾಗಿ ಧಾರಾಪೂರ್ವ್ವಕಂ ಮಾ

೫೫. ಡಿ ಬಿಟ್ಟ ಪಿರಿಯ ಕೋಲಲು ನಾಲ್ವತ್ತು ಮತ್ತರು ೪೦ ಅದರೊಳ್ಗೆ ಶ್ರೀ ಕೇಶವದೇವರಿಗೆ ಆ ಕೋಲಲು ಬಿಟ್ಟಮತ್ತರೊಂದು॥

೫೬. ಇವನೀಯಂದದೆ ಪಾಳಿಪಂಗೆ ಗಯೆ ಕೇದಾರ ಗು(ಕು)ರುಕ್ಷೇತ್ರವೆಂಬಿವರೊ

೫೭. ಪುಣ್ಯಕರುತ್ತಿವನನಂದದಿನ್ದಗೆ ಗೋದ್ವಿಜರಂ ಮುನೀಂದ್ರಬ್ರಾತಮಂ ಕೊಂ

೫೮. ತ್ರಿ(ದಿ)ಕ್ಕು ಕುಟುಂವಾನ್ವಿತಂ ॥

**೯. ಸಯ್ಯದ ಚಿಂಚೋಳಿ(ಕಲ್ಬುರ್ಗಿ ತಾ.)ಕ್ರಿ.ಶ.೧೧೨೨**

೧. @ ಶ್ರೀ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ । ಶ್ರೀಮಹಿ ಬಾಳೆಂದು ರೇಕಾವಳೆಯ ವಿಳಸಿತೋತ್ತುಂಗ ಜೂ

೨. ಟಾಭಿರಾಮಂ ವೋಮತ್ಮರಾಗ್ನಿಚಂ(ದ್ರ) ನಿ(ಳಾ)ಸಲೀಲ ಧರಾತ್ಮಾಂಗ ಪ್ರಭಾಸಂಪದಂ ಸಂಗ್ರಾಮವಷ್ಟಂಭ ದೈತ್ಯತ್ರಿಪುರ ವಿಜ(ಯ)

೩. ಶವರಿಂತ (ಜಾ) ತಾ ವಿಳಾಸ ಪ್ರೇಮದಿ ಶ್ರೀ ಚಂದ್ರಮಾಗಭಿಮತದೊ (ಳ ಮೆಂದೊಡತಿ) ಪ್ರೀತಿಯಿಂದೆ ॥ ಕಂದ ॥ ಭೂವಳಯ ಸೇವ್ಯನಖಿಳಕಳಾವೆ . . . . . .ವಿ ತಾದ್ರಿ

೪. . . . . . . ಜನಖಿಳೋರ್ವ್ವಿವಿನುತಂ ಚಂದ್ರನಿಳಾಚಂದ್ರಂಗೆ ॥ ಶ್ರೀ ಕಳನಧಿ . .. . . . .ದಿವಕರ ವ(ಚ)ನ. . .ಯನೆ

೫. ವಣ . . . .ತಿನಾಥ . . . . . . . . . . . .ಚಂದ್ರಧರ ಕಮಳೋದುಭವನಿಂದೆ. . . . . . . . . . .

೬. ಕರನಿಂದಾದು . . . . . . . . ಚಾಳುಕ್ಯಕುಳಂ ॥ ಆ ವಂಶದ ಭೂಪಾಳ . . . . . . . .ಮನ್ತಾಳ್ದು.

೭. ನಯಸ. . . . .ಕ್ಷಿತೀಶ ಪೆರ್ಮ್ಮಾಡಿ ಕೀರ್ತ್ತಿಪ್ರತಾಪಯ್ಯಣ. . . . .ದಾನ . . . . .

೮. ಗ್ದಂತಿಗಳೊಳು ॥ ಜಯಲಕ್ಷ್ಮೀಪತಿಗೆ. .. . . . .ತಂ ಶ್ರೀಯದಾನ ಶ್ರೀ . .. . . . ಚಾಳುಕ್ಯಾಂನ್ವಯದಾಳ್ದರಾವಂಶ. . . . . . . . . ಯ . . . .. .. . . . .

೯. ಬಳಿಕ್ಕ ಜಯಸಿಂಹ .

೧೦. ಳಿಗೊಂಡು ಧರೆಯಂ ಚಾಳುಕ್ಯನರೇಶ್ವರನಾ . . . .. . .. .॥ ವ್ರಿ ॥ ಘನಬಾಹಾಬಳನಾ . .. . . . . .ತೈಲ. . . . .

೧೧. ಳಯಶಂ. . . . . . . . .ತಂನ್ರಿಪಾಳನನುಜಾತಂ ದಶಮರ್ಮನಾತನ ತನೂಜಂ ವಿಕ್ರಮಾದಿತ್ಯ. .. . . . . . . . .ನಾತನತನೆಯಂ ಶ್ರೀ.. .. . . . . . .. . .. . . . .ಜಯಸಿಂಹ (ಕ್ಷಿತಿ) ಪಾಳಕ

೧೨. ೦ ॥ ಆ ಜಯಸಿಂಹನ್ರಿಪಾಳತನೂಜಂ ಚಾಳುಕ್ಯ. . .. . . . . . . ವಲ್ಲಭ. . . . . .
. . . . .ಕೋಟೀಂದ್ರ ರಾಜೇಂದ್ರ ವಿನುತ. . . . . ..

೧೩. ಯಣಿಳ್ಗುರೆ ಸುಟ್ಟು ಚೋಳನಂ ಕೊಂದು ಕಳಿಂಗ ಮಳವ (ದ್ರಿ). . . .. . . . ತಕೋನ್ಸು.
. . . . . ೧೪. . . . . . . ದಂತಿಪು.. . . . . . ಮಣಜಯೊಳಾಹವಮಲ್ಲವಲ್ಲಭ
॥ ಆ ನಿಪನಗ್ರತನೂಜಂ ಭೂನಾಥ. . .. . .ದೇವ. . . . .ತನುಜಂ

೧೫. ಮ್ಮಾಡಿ ನ್ರಿಪ ॥ ವ್ರಿ ॥ ಆತನ ಶೌರ್ಯ್ಯಮಂ ನೆರಪಿ ಬಂಣ್ಣಿ. . . . . . .ಚರಿತ . .
. . .ವಿ ತಳ.

೧೬. ಧಿರಾಜನಂ. . .. . . .ನೆಂದೊ. . . . . .ಪರಾಕ್ರಮ ವಿಕ್ರಮ ಭೂಪತಿಯೊಳು ॥ ಆ ನ್ರಿಪತಿ
. . . . . ಪದಪಂಕೇಜನಿ. . . .. . .ಮಂಡಳೇಶ್ವರ ವಿಜಯಶ್ರೀ ನಾರಿವಲ್ಲಭನಬ್ದಮಾನಧನಂ

೧೭. ಗೊಂಕ ನ್ರಿಪನಲಂದೆವೆಡಂಗ ॥ ಆ ನ್ರಿಪನ ವಂಶಾವತಾರಮೆಂತೆನೆ ॥ ನಯ ಸಾ ನಾಭಿ
ರಾಜಾನ್ವಯ ಭೂಪರ್ಕ್ಕೊಪಣಪುರವರಾಧೀಶರ್ಧಾತ್ರಿಯನಾಳ್ದು ಪೊಗಳಲಾನ್ವಯ ತಿ.

೧೮. ಳಕದ್ವಾಂತ ಗೊಂಕಭೂಪರ್ನ್ನೆಗಳ್ದರು॥ ಅವರಿಂ ಬಳಿಕ್ಕ ಮನ್ನೆಯ ಜವನಕುಲ ನ್ರಿಪಳ ತನೂಜಂ
ಬಿಬ್ಬಂ (ಭುವನೇಶ) ನಾತ್ಮೋದ್ಭವನಾ ಭುವನವಿಜಯ ಮೂರ್ತಿ ಗೊಂದನ್ರಿ (ನೃ) ಪಾಳ ॥

೧೯. ಆತನ ಪುತ್ರಂ ನ್ರಿಪಮಾಧಾತಂ ರಾಜರಸನಾತನನುಜಂ ಭುವನ ಖ್ಯಾತಂ
ಕರ್ತ್ತನ್ರಿಪಾಳನಾತನನುಜಂ ಮಲ್ಲಿದೇವ ಗೊಂಕ ನ್ರಿಪಾಳರ್॥. . . . . . . . . . . .
..ಳಿಯಗ.. . . .. . ಪ್ರಭು.

೨೦. ಮಹಾಪ್ರಧಾನಂ (ದಾ) ನಮಂ ಮಾಡುವಧಿಕಾರಿ. .ಡ ಮಾಡುವ ಸೌಧರೆ (ಕು)ಳಾ. . . .
ಂದ್ರಂಚಂದ್ರ ॥ ಆ ಪುಂಣ್ಯಮೂರ್ತ್ತಿಯ ವಿಶುದ್ಧಾನ್ವಯ

೨೧. ಳು(ನಿಂದು) ಹರ . . . . . ಗರ್ಬ್ಬವಂಶದೊಳು ಜನಿಯಿಸಿದಂ ಶ್ರೀ. . ಮಣ. . .
. . ಮಳಂ ಶ್ರೀ. . . .೦ನಾರಣಯ್ಯ ದಂಡಾಧೀಶ ॥ ಎನೆ ನೆಗಳ್ದ ನಾರಣಯ್ಯ . .
. .. . . . .

೨೨. (ವಾ) ನಾ ರಣಗ್ರ್ಗ. . .. . . ಳಾವನಿ ವಿನು ಭಟ್ಟಪಾರ್ಯ್ಯನದೊಳೆತ (ವೈರಿಯ) ವ್ರಿ ॥
ದಾನಗುಣಂ (ಧರಾ)ವಳೆಯಮಂ ಸರಿರಕ್ಷಿಸುತ್ತಿರ್ದ್ದರಾತ್ಮ. . . . . .

೨೩. (ಳು ಮಾ) ಡುವೊಂದು (ಎಣ್ಮ). . . . . . . ಗುಣಂ ಸ್ವಜನರ್ಗ್ಗತಿಪರ ಪಾಡುವೆನಲ್ಕೆ
ಧಾತ್ರಿಯೊಳ್ಮ(ಳ್ಮಾನವ)ರಾಳ್ದು (ವೆಂ). . . . . . . . .. . .

೨೪. ಣಿ ಚಾಮಿಕಬ್ಬೆಗಂ ಸತ್ಪುತ್ರ ಜನಿಯಿಸಿದ (ಬ್ರ್ಪಾಡ) ರಸಂ ವಿಯಾಂಭುಧಿ. . . . . .ಗು(ಗ್ರುಣಿ)
ಮಲ್ಲ(ರ)ಸ ॥ ವ್ರಿ ॥ ಜಜನಕಂ ಶ್ರೀ ಚಟ್ಟಪಾರ್ಯ್ಯಂ ಜನನಿ. . . . . . . .

೨೫. ತ್ರಂ ತಂನಗ್ರಜಂ ಬಾಚರಸನನುಜಾತಂ ಮಲ್ಲದೇವಂ. .. .. . . .ಪುಟ್ಟಿದನಮಳ ಗುಣ. . . . . . . . .ಬೊ. .. . (ಗೊಂಕಮಲ್ಲ) ನಾತನಯ್ಪುಂಚಾಂಗ. . .. . . . . .

೨೬. ಚಂದಿರಾಜ. . . . . . . . ಕೃತಾರ್ಥ॥ವೃ॥ ಚಂದ್ರಂಗವಿರಳ ಜೇಂದ್ರ, . . . . . ತರದಿಂ ಚಂದ್ರಂಗೆ. . . . . . .

೨೭. ಪತಿಗೆ ರತಿ ಭೋಗ .. . . . . . ವಾಕು. . .. . . . . .ವಾಗ್ವಳದೊಳ್ಪತಿ ವ್ರತಾ (ಚಾರು) ದೊಳರುಂಧತಿ ..ಕಮಳಕಮಳಾ. . .. . . . . . . .

೨೮. ದೊಳತ್ಯುದಾರತೆಯಿನ.. . . . . . . . . . .

೨೯. ದೋಳ್ವನಮಂ ಮಾಂ. . ನಪ್ರತಿಯೊಳು ನಿಲ್ಲಿಪರಾರು ಶ್ರೀ ಚಂದಿರಾಜ ॥. . . . .. . . ಮನದಟಿಂ. . . . .ಧರಿತ್ರಿ

೩೦. ವಿನುಂನತ ಕೀರ್ತಿಲಕ್ಷ್ಮೀಯೆಂದಡೆ ವಾಗುಕೀರ್ತ್ತಿಲಕ್ಷ್ಮಿಯನುಪಾರ್ಜ್ಜಿಸಿ (ದನಾತನೆಂದೊಡಂ) ಕುಳ. ಮೂರ್ತ್ತಿ. . . .ಯಾವನೆಂ ಸೌಧರೆ ಚಂದಿರಾಜನೊಳು. . .. . .ಮಾಡಿದಂ..ಪಡೆದು

೩೧. ತಾಯನಧೋಗತಿ. .. . . .ವಾತ್ಮಜಂ ಪುಟ್ಟಿಯು . . .. ..ಮಾಡಿದ . . . .ತಾಳ್ದಿದಂ ನೆಟ್ಟನೆ ಭೂತಳ. . . . ಗಳೆಂಬ ವನಿತನ. . .

೩೨. ದೀಧರೆ ಸೌಧರೆ ಚಂದಿರಾಜ. . . .ಕ. . . .ಲೆಯಂ ಸ್ವದಾರ. . . ಚಾರಿತ್ರ ಜವನಿತಿ. . . . .ದಾನಬ್ರತದೊಳು ಸತತಂ ನಿಮಿಸಿದನೇಂ ಕ್ರಿತಾರ್ತ್ಥನೋ ಚಂದ್ರ

೩೩. ಧರೆಗೆಸೆವ ಚಿಂಚವಳ್ಳಿ ಪುರದ ಪ್ರಭು ಪುಣ್ಯಮೂರ್ತಿ ನಾರಣದೇವರ. . . . ಯಾಗಲ.. . ..ಧರ. . . ಭವ ಪ್ರತಿಷ್ಟೆಯಂ ಮಾಡಿದಳು । ಮದೊರುವಂ. .. . . .ವಂಶೋದ್ಭವರ. .. . . .

೩೪. ಳಿ ನುತಂ ತಾನೆಳ್ತಿಸಿದನಭ[ವತ್ರಿಪುರಂ]. . . . ದಿಂದಂ ತ್ರಿಕೂಟ [ಕಂ ಚಂದರಸನೀ] ಧಾರಿಣಿಯೊಳಿವನೇಂ ವಂಶೋದ್ಧಾರಂ ಸತ್ಪುತ್ರನೇಂ [ಬಿ] ದಂ ಪ್ರಕ[ಟಿಸಿದ] ಆಧ[ನಗ್ರ, . . . . . .] ಜೀರ್ಣೋದ್ಧಾರಂ

೩೫. ಮಾ[ಡಿದ]ನಜಂ ತ್ರಿಕೂಟಮಂ॥ @ ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪ್ರಿಥ್ವೀವಲ್ಲಭ ಮಹಾರಾಜಾಧಿರಜ ಪರಮೇಶ್ವರಂ ಪರಮಭಟ್ಟಾರಕಂ ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾ.

೩೬. ಭರಣಂ ಶ್ರೀಮತು ವಿಕ್ರಮ ಚಕ್ರವರ್ತಿ ತ್ರಿಭುವನಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ದ್ಧಮಾನಮಾಚಂದ್ರಾರ್ಕ್ಕ ತಾರಂಬರಂ ಸಲುತ್ತಮಿರೆ ಕಲ್ಯಾಣಪುರದ ನೆಲೆವೀಡಿ.

೩೭. ನೊಳು ಸುಖಸಂಕಥಾ ವಿನೋದದಿಂ ರಾಜ್ಯಗೆಯ್ಯುತ್ತಿರೆ ತತ್ಪಾದ ಪದ್ಮೋಪಜೀವಿ ಸಮಧಿಗತ ಪಂಚಮಹಾಶಬ್ದ ಮಹಾಸಾಮನ್ತ ವಿಜಯಲಕ್ಷ್ಮೀ ಕಾಂತಲಂದೆವೆಡಂಗ ಮಣೆಯ ಸಿಂಗ[ತಾರಹಿ]

೩೮. ಮವಂತನಹಿತ ಕ್ರಿತಾಂತ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀ ಮನ್ಮಹಾಮಂಡಳೇಶ್ವರಂ ಗೊಂಕರಸಂ, ನೂರಿಪ್ಪತ್ತರುವತ್ತರ ಬಳಿಯ ಬಾಡಂ ಚಿಂಚವಳ್ಳಿಯ ಶ್ರೀ ನಾರಣೇಸ್ವರದೇವರ್ಗ್ಗಂ ಶ್ರೀ ಕೇ.

೩೯. ಶವದೇವರಿಗಂ ಶ್ರೀ ಕಮಳಗರ್ಭದೇವರಿಗಂ ಶ್ರೀ ಮಚ್ಚಾಳ್ಯಕ್ಯವಿಕ್ರಮ ಚಕ್ರವರ್ತಿ ತ್ರಿಭುವನಮಲ್ಲ ದೇವರಿಶದ ೪೬ನೆಯ ಶುಭಕ್ರಿತು ಸಂವತ್ಸರದ ಚೈತ್ರದಮವಾಸೆ ಸೋಮವಾರ ಸೂರ್ಯ್ಯಗ್ರ

೪೦. ಹಣ ವ್ಯತಿಪಾತ ಪುಶ್ಯನಕ್ಷತ್ರ ದಕ್ಷಿಣಾಯಣ ಸಂಕ್ರಮಣದಲು ನಾಡ ಮೇಲಾಳ್ಕೆ ಶ್ರೀಮನ್ಮಹಾಪ್ರಧಾನಂ ಭೀವಣಯ್ಯ ದಂಡನಾಯಕರುಂ ಶ್ರೀಮನು ಮಹಾಮಂಡಳೇಶ್ವರಂ ಮಂನೆಯ ಗೊಂ.

೪೧. ಕರಸರುಂ ಶ್ರೀಮತು ಚಿಂಚವಳ್ಳಿಯ ಪ್ರಭು ನಾರಣಯ್ಯ ದಂಡನಾಯಕರುಂ ರೇಕಸ್ಥರಗಿಯಾದೇವರ ಪೂಜಾನಿವೇದ್ಯಕಂ ಚೈತ್ರಪೈತ್ರಕಂ ದೇವರರಂಗ ಭೋಗಕ್ಕಂ ತಪೋಧನರಾಹಾರದಾ

೪೨. ನಕಂಪತ್ರಕಂ ಪುರಾಣಖಂಡಿಕಕ್ಕಂ ಖಂಡಿಸ್ಫುಟಿತಜೀರ್ಣ್ನೋದ್ಧಾರಕ್ಕಂಯೆಂದು ಬಿಟ್ಟ ಕಯಿ ಯೂರಿಂ ಮೂಡಲು ಪೂರ್ಬ್ಬದ ಕಟಕದ ಹಾದಿಯಿಂ ಮೂಡಲು ಭೋಗೇಶ್ವರದೇವರ ಕಯಿಂ ತೆಂಕಲು

೪೩. ಗಂಜಣಿಖೇಡದ ಸೀಮೆಯಿಂ ಪಡುವಲು ತೆಂಕ ಮುಂದಾಗಿ ಪೆ.. . ಗದ್ದವಳದ ಸೀಮೆಯಿಂ ಬಡಗಲು ಕಾಲಡಿಯ ಮತ್ತರು ೨೦೦ ಊರಿಂ ಮೂಡಲು ಭೋಗೇಶ್ವರದೇವರ ತೋಂಟಂ ಬಡಗ

೪೪. ಲು ಗದ್ದೆ ಕಾಲಡಿಯ ನಿವೇಶನ ಮತ್ತರು ೩ ಊರಿಂ ಮೂಡಲು ಭೋಗೇಶ್ವರದೇವರ ತೋಂಟದಿಂ ತೆಂಕಲು ತೋಟ ಕಾಲಡಿಯ ಮತ್ತರು [೯]ದೇವರಿಂ ಪಡವಲು ದೇವರ [ಪು ೧] ಆ ಪುರದ ಚತುಸ್ಸೀಮೆ

೪೫. ತೆಂಕಲು ಮಠದಿಂ ತೆಂಕಣ ಪರಿಸೂತ್ರದ [ಗೋಡೆ]ಯಾದಿ ಪಡುವಲು ನಾಡ[ಪ]ಣ[ದ] ಬಡಗಲು ಭಾವಿ ಮೂಡಲು [ಬೋಚಿಕವೆಯ]ಮರಿ ನನಾ ್ತಪುರಕ್ಕೆ ಚತುಸ್ಸೀಮೆ ಆ ಪುರದಿಂ ತೆಂಕಲು ದೇವರ ಬ್ರ

೪೬. ಹ್ಮಪುರಿಯ ನಿವೇಶನ ೧೦ ಆ ನಿವೇಶನಂಗಳಲ್ಲಿಹ ಬ್ರಾಹ್ಮಣರಾಹಾಲ ವಸ್ತ್ರಂ ಬಿಟ್ಟ ಕೆಯಿ ಕುಂಮಸಿಯ ದಾರಿಯಿಂ ಮೂಡಲ ಹಾವಿನಹಳ್ಳದಿಂ ಬಡಗಲು ಕಾಲಡಿಯ ಮತ್ತ.

೪೭. ರು.೧೨೦ ದೇವರಪುರದಲುಂ ಸ್ಥಳವ್ರತ್ತಿಯಲುಂ ಹರಿಕಾಯ ಸಹಿತಂ ಸಮಸ್ತಾಯದಾಯವೆಲ್ಲಂ ದೇವರ್ಗ್ಗೆ [ನರಹರ] ದೇವರಿಗೆ ನಾಡರಂಗಳುಂ ಸೌಧರೆ, ಸೆಟ್ಟಿ .ಮಂನೆ ..

೪೮. ಕವೆರ್ಗ್ಗಡೆಗಳುಂ[ಅ] ರೆವಟ್ಟಕ್ಕೆ ೨೦೦ ಮತ್ತರ ಬಿಟ್ಟರು ಆಯಿನೊರ್ಬ್ಬ[ರುಂ] ಅಲ್ಲಿಯತುವರ್ತ್ತಕಲುಂ ಹೂಂಗೆ ಕೊಟ್ಟಲ್ಲಿ ಮಾನ [೨] ಕೊಂಡಲ್ಲಿ ಮಾನ [೧]ರ ಲೆಕ್ಕದೆ ದೇವಮಾನವಂ ಬಿಟ್ಟರು ಅದಕೆ ಸೀ

೪೯. ರೆ ಮೆಳಸರಗು ನೀಲಿ[ಯಾ]ರ್ಪ್ಪ ಮಾರಿದಲ್ಲಿ ಹೊಂಗೆ ಕೊಟ್ಟಲ್ಲಿ ವೀಸ ೧ ಕೊಂಡಲ್ಲಿ ವೀಸ ೧ ಬಿಟ್ಟರು ದೇವರ ವೀಳೆಯವ ಹಂನವಣಿಗರು ಹೇರಿಂಗ[೨೫] ಎಲೆಯಂ ಬಿಟ್ಟರು ॥ @@@

೫೦. ಶ್ರೀಮಚ್ಚುಳಕಿ ಕುಳೇಂದು ಪ್ರೇ[ಮಂ] ಸಮದವನಿತೆ ಕಳಚೂರ್ಯ್ಯ ಕುಳವ್ಯೋಮಣಿ ಬಿಜ್ಜಳಭೂಪ ಪ್ರೇಮದೆ ನಿಜಭುಜದೊಳಿರ್ದ್ದಳೊಸೆದೊಲವಿಂದ॥ ಆತನ ಪುತ್ರಂ ಭುವನೋದ್ಯತ ಯ.

೫೧. ಶರಿಮು ನ್ರಿಪೇಭಮಸ್ತಕ ವಿದಳತು ವಿಖ್ಯಾತ ಮ್ರಿಗೇಂದ್ರ ನೆಗಳ್ದಿಂ ಭೂತಲದೊಳು ಸೋಮನಿಪತಿ ರಾಯಮುರಾರಿ॥ ತದ[ಮಾತ್ಯ] ಮಂತ್ರಿ ಸಿಂಹಂ ಸದಮಳಗುಣಿ ಮಾದಿರಾಜ ದಂಡಾಧೀಶಂ.

೫೨. ಮುದದಿಂದಲಂದೆನಾಡಂ ಪದುಳಂ ರಕ್ಷಿಸೆ ಸುಭಿಕ್ಷವಾಯ್ತನವರತ॥ ಲೋಕತ್ರಯವಿನುತೆ ಸತಿ[ಶ್ರೀ] ಕುಳಕುಮುದಿನಿ ಸುಧಾಂಶು ಮಾಧವಮಂತ್ರಿ ಶ್ರೀಕಾಂತೆಯಿನಿಸಿ ಜಸಮಂ.

೫೩. . . . .[ಲ]ದೇವಿ ಗೈರಾತ್ಮಗುಣಿ ತಾಳ್ದಿರ್ದ್ದಳು॥ ವ್ರಿ॥ ಧರೆಯಂ ಶ್ರೀ ರಾಮನಾಳ್ದಂತಿರೆ ಭುಜಬಳ ದಿಂ[ಮಂ]ಡಳಿ[ಕೇಭ] ಸಿಂ[ಹ]ಸ್ಥಿರಮಾಗಲು [ಮಾದಿ]ದೇವಂ ಸಕಳರಿಪುಕು.. . .. ಬ್ರನೆಂದನಾ ಗೊಂಕಿದೇವಂ[ಚ]

೫೪. .. .. .ದಿಂ ತದ್ಧರ್ಮ್ಮಮಂ ಸ್ವಾಮಿಗೆ ವಿನಯಪರಂ ಚಂದ್ರ ದಂಡಾಧಿನಾಥಂ [ದೊರೆ]ರಕ್ಷೆ ಪ್ರೀತಿಯಿಂ ಬಿಂನವಿಸೆ ಧರಣಿಯಂ ಬಿಟ್ಟರಾಚಂದ್ರತಾರ॥ ಜಳಧಿ ಪ್ರಾಂತಾಂತ ಕೀರ್ತ್ತಿ ಪ್ರ[ಸವಿಸಿದಂ] ತಮದ.

೫೫. ನೋದ್ಧಾರ ಸಂರಾಮಮೂರ್ತ್ತಿ ಸ್ಖಳಿತಾರಾಶಿ ಪ್ರತಾಪಂ ಕ್ಷಿತಿಪತಿಕುಳ [ಕಾಳಾಮದ]. . . ಪ್ರ[ಥಿತಂ] ಬಳವರ್ದ್ಧಿಟ್ಟ್ರ[ಪ್ರ]ದಾಷ್ಟ ಕ್ಷಿತಿಪಮೆನ [ಘಟನ್ರಿ]ಪನಿರ್ಘ್ನೂತವಾತಂ ವಿಳಸದ್ವಿದ್ಯಾವಿನೀತಂ ನೆಗಳ್ದನನು.

೫೬. ಪಮಂ ಚಂದ್ರದಂಡಾಧಿನಾಥ॥ ವಾರಿಜನಾಭನಿರ್ದ್ದಾಮ್ರಿತ ವಾರ್ದ್ಧಿಮಹೇಶ್ವರ ನಿರ್ದ್ದ ನಗೇಂದ್ರ ಮಂಭೋರುಹಮಿರ್ದ್ದ ಶಂಢಮಿನನಿರ್ದ್ದ. . . . ನಭೋಂಗಣಂ ಚಾರುಮನೋ ಲಕ್ಷ್ಮಿನೆಲಸಿರ್ದ್ದ ಸ.

೫೭. ರೋರುಹವಾಸದಂತೆ ವಿಸ್ತಾರಿತ ಕೀರ್ತ್ತಿ ಚಂದ್ರನ್ರಿಪನಿರ್ದ್ದುದೇ ಸೇಬ್ಯ ವಿಳಾತಳಾಗ್ರದೊಳ್॥ @ ಸ್ವಸ್ತಿ ಶ್ರೀಮತುಕಳಚುರ್ಯ್ಯ ಚಕ್ರವರ್ತಿ ರಾಯಮುರಾರಿ ಭುಜಬಳಮಲ್ಲದೇವವರ್ಷ.

೫೮. ದ ೭ನೆಯ ವಿಜಯ ಸಂವತ್ಸರದ ಜೇಷ್ಟಪದಮಾವಾಸೆಯ ಸೋಮವಾರ ಸೂರ್ಯ್ಯಗ್ರಹಣ ವ್ಯತೀಪಾತ ಪುಶ್ಯನಕ್ಷತ್ರ [ವಿಶು] ಸಂಕ್ರಮಣದಲು ಚಿಂಚವಳ್ಳಿಯ ಶ್ರೀ ನಾರಣೇಶ್ವರದೇ

೫೯. ವರಪೂಜೆ ನಿವೇದ್ಯಕ್ಕಂ ಚೈತ್ರಪತ್ರಕ್ಕಂ ದೇವರಂಗಭೋಗ ರಂಗಭೋಗಕಂ ತಪೋಧನರಾಹಾರದಾನಕಂ ಸತ್ರಕಂ ಪುರಾಣಖಂಡಿಕಕಂ ಖಂಡಸ್ಪುಟಿತ ಜೀರ್ಣೋದ್ಧಾರಕಂ ಯೆಂದಾ ಶ್ರಿಮನ್ಮಹಾ

೬೦. ಪ್ರಧಾನಂ ಸೇನಾಪತಿ ಬಾಹತ್ತರ ನಿಯೋಗಾಧಿಪತಿ ಹಿರಿಯದಂಡನಾಯಕಂ ಮಾಧವಯಂಗಳು ತಂಮಾಳ್ಕೆಯ ಗೊಂಕನೂರಿಪ್ಪತ್ತರುವತ್ತರ ಬಳಿಯ ಬಾಡಂ ಉಪ್ಪಳವಾಯಿಯ

೬೧. ಮೇಲಾಳ್ಕೆಯಂ ಚಕ್ರವರ್ತ್ತಿಗೆ ಬಿಂನಪಂಗೆಯ್ದು ದೇವರ್ಗ್ಗೆ ನಮಶ್ಯವಾಗಿ ಧಾರಾಪೂರ್ಬ್ಬಕಂ ಮಾಡಿ ಕೊಟ್ಟರು॥ ಶ್ರೀಮನ್ಮಹಾಮಂಡೇಶ್ವರಂ[ರಾಮಾದೇ]ವರಸರುಂ ಶ್ರೀ ಮನುಮಹಾ ಮಂಡಳೇಶ್ವರಂ ವೀರ

೬೨. ಗೊಂಕಿದೆವರಸರು ಉಪ್ಪಳವಾಯಿಯ ತಂಮ ಮನ್ನೆಯಮಂ ದೇವರ್ಗ್ಗೆ ಸರ್ಬ್ಬನಮಸ್ಯವಾಗಿ ಧಾರಾಪೊರ್ಬ್ಬಕಂ ಮಾಡಿ ಕೊಟ್ಟರು॥ ಶ್ರೀಮನು ಮಹಾಪ್ರಧಾನಂ ಅಲಂದೆನಾ[ಡ]ಸೌಧರೆ ಹೆಗ್ಗಡೆ ಚಿಂಚವಳ್ಳಿಯ

೬೩. ಪ್ರಭು ಚಂದಮರಸಯ್ಯಂಗಳು ಉಪ್ಪಳವಾವಿಯ ಮೂಲಸ್ವಾಮಿ ಬಾ[ವ]ಕೆ ತಿಕ್ಕರಸಂಗಳ ಕೆಯ ಆ ಪ್ರಭುತ್ವಮಂ ದೇವರ್ಗ್ಗೆ ಸರ್ಬ್ಬನಮಸ್ಯವಾಗಿ ಧಾರಾಪೂರ್ಬ್ಬಕಂ

೬೪. ಮಾಡಿ ಕೊಟ್ಟರಂತು ತ್ರಿಭೋಗಾಭ್ಯಂತರ ಸಹಿತಂ ದೇವರಿಗೆ ಸರ್ಬ್ಬನಮಶ್ಯವಾಗಿ ಧಾರಾಪೂರ್ಬ್ಬಕಂ ಮಾಡಿಕೊಟ್ಟರು॥. . .ಗುಣನಿಧಿ ಸಕಳಾಗಮನಿಧಿಮಣೀ. . .

೬೫. ಯಸೋಗುಣನಿಧಿ ತತ್ವಾಮಿತ್ರನಿಧಿ ಯಣ್ಮಾತ್ರಮೆ ಸನುಮುನೀಂದ್ರ ತೇಜೋನಿಧಿಗಳು @ ಸ್ವಸ್ತಿ ಯಮನಿಯಮಸ್ವಾಧ್ಯಾಯ ಧ್ಯಾನಧಾರಣ ಮೋನಾನುಷ್ಠಾಣ ಜಪಸಮಾಧಿಶೀಳ ಸಂಪಂನರಪ್ಪ ಶ್ರೀವಾ

೬೬. ರಣಾಸಿಯ ನೈಷ್ಟಿಕಾಚಾರ್ಯ್ಯ ತೇಜೋನಿಧಿಪಂಡಿತದೇವರ ಪದಕಮಲಂಗಳಂ ನಾಡ ಸೌಧರೆ ಚಿಂಚವಳ್ಳಿಯ ಪ್ರಭು ಚಂದಿಮರಸಯಂಗಳು ತಂಮ ಕರ [ಕ] ಮಳ. . . ರ್ದಶಿ ಜಲಳ್ಳಿಯ ಸ್ಥಳ ವ್ರಿ

೬೭. ತ್ತಿಯಮಂ ಉಪ್ಪಳವಾವಿಯ ಚತುರಾಘಾಟ ಸಹಿತ ತ್ರಿಭೋಗಾಭ್ಯಂತರಮಂ ಸರ್ಬ್ಬನಮಶ್ಯವಾಗಿ ಧಾರಾಪೊರ್ಬ್ಬಕಂ ಮಾಡಿಕೊಟ್ಟರು ॥ ಉಪ್ಪಳವಾವಿಯ [ಸೀಮೆ]ಯೆಂತೆನೆ ಅವೂರಿಂ ಮೂ.

೬೮. ಡಲು ತಾವರೆಗೆರೆಯಿಂ ಪಡುವಲು ಮೂಡಣ ದುಂಡವೆಟ್ಟಿದ [ಪೂ]ರ್ಬ್ಬ ತಟಂ ಪ್ರಮಾಣ। ಅಲ್ಲಿಂ ತೆಂಕಲಂ [ಕುರಿಯ ಕೆರೆ] ಪ್ರಮಾಣ । ಅಲ್ಲಿಂ [ತೆಂಕಲೀಶಾಂನ್ಯ]ಮುಖವಾದ ಮಾಲಗಾರ್ತ್ತಿಯವೊ

೬೯. ಲದಿಂ ಪಡುವಲುತ್ತರಮುಖವಾದ ಮಾಲಗಾರ್ತ್ತಿಯ ಹೊಲದಿಂ ಬಡಗಲು ವಾ ಮಾಲಗಾರ್ತ್ತಿಯಿಂ ತೆಂಕಲ ಪಾಶಾಣ[ಪುಂ]ಜಂ [ಪ್ರಮಾ]ಣ । ಅಲ್ಲಿ ಪಡವಲು ಮಾಲಗಾರ್ತ್ತಿಯ ಪಡುವಲು ಮಾಲಗಾರ್ತ್ತಿಯ ಪಡುವವೊಲದಿಂಬಡ

೭೦. ಗಲು ಮಂನೆಯಗೆಯಿಗಂ ಮಾಲಗಾರ್ತ್ತಿಗಂ ಸೀಮೆಯಾದ ಪಾಶಾಣ ಪುಂಜದ ಪ್ರಮಾಣ। ಅಲ್ಲಿಂ ಪಡುವಲು ಕಪ್ಪನೂರಿಂ ಮೂಡಲು [ಕಾಂಜಿಕಬೆಯ] ಕಂಚಿಯಿಂ ಪಡುವಣ ಹುತ್ತಿನಗುತ್ತಿ.

೭೧. ಪ್ರಮಾಣ॥ ಅಲ್ಲಿಂ ಬಡಗಲುತ್ತರಮುಖವಾದ ಕಪ್ಪನೂರಹೊಲದಿಂ ಮೂಡಲು ಹಾಕನಬಾವಿ ಪ್ರಮಾಣ । ಅಲ್ಲಿಂ ಬಡಗಲು ಬೇಲೂರ ಹೊಲದಿಂ ಮೂಡಲು (ಕ್ಷಪನೂರಿಗಂಟ) ಊರಿಗಂ ಸೀಮೆಯ ನಯ.

೭೨. ಬಹು ಶಿಲೆ ಪ್ರಮಾಣ। ಅಲ್ಲಿಂ ಬಡಗ ಆಲಬೋವನಕೆರೆಯಿಂ ವಾಯುಬ್ಯದ ನಯಶಿಲಾಪುಂಜಂ ಪ್ರಮಾಣ। ಅಲ್ಲಿಂ ಮೂಡಲು ವಾಯುವ್ಯ[ಮುಖವಾ]ದ ತಾವರೆಗೆರೆಯ ಹೊಲಕ್ಕೆ ತೆಂಕ @

೭೩. ಪಶ್ಚಿಮಮುಖವಾದ ತಾವರಗೆರೆಯ ಹೊಲಕ್ಕೆ ಪಡುವಲು ಆನೆಯ ಕೊಳ್ಳದಿಂ ಮೂಡಣ ನಯಶಿಲಾಪುಂಜ ಪ್ರಮಾಣ । ದೇವವ್ರಿತ್ತಿಯ ಬೀಯನೆಂತನೆ। ದೇವರಪೂಜೆ ನಿವೇದ್ಯಕ್ಕಂ ಚೈತ್ರ

೭೪. ಕ್ಕಂ ಪೂಜಾರಿಗಳಿಬ್ಬರ ಜೀವಿತವಂತು ದೇವರಂಗಭೋಗಕ್ಕೆ ಕೆಯಿವೊಲ ಮತ್ತರು ೧೦೦ ವಾಯ್ಸಕಾರರಿಬ್ಬರು ಮಾಕಂತಿಯೊಬ್ಬಳು ಸ[ವಂ] ಗಾಣತಿಯರಿಬ್ಬರು ಊದಿಗ [ನೊ]ಬ್ಬ ಮದ್ದಳಿಗರಿಬ್ಬ

೭೫. ರು ಪಾತ್ರವೆರಡಂತು ದೇವರಂಗಭೋಗಕ್ಕಂ ಕೆಯಿ ಕಾಲಮತ್ತರು ೧೪೦ ತಪೋಧರಾಹುರಕ್ಕಂ ವಿದ್ಯಾರ್ತ್ಥಿಗಳ ಪ್ರವಾಸಿಗರಾಹಾರದಾನಕ್ಕೆ ಕೆಯಿ ಕಾಲಮತ್ತರು ೧೦೦[ಪುರಾಣ] ಖಂ.

೭೬. ಡಿಕದುಪಾಧ್ಯಾಯರಿಬ್ಬರಿಗಂ ಜೀವಿತಕಾಲಂ ಮತ್ತರು[೫]ಂ ಖಂಡಸ್ಫುಟಿತ ಜೀರ್ಣ್ನೋರ್ದ್ಧಾರಕ್ಕಂ ಜೀವಿತಕಾಲಂ ಮತ್ತರು[೫]ಂ ಖಂಡಸ್ಫುಟಿತ ಜೀರ್ಣ್ನೋರ್ದ್ಧಾರಕ್ಕಂ ಕೆಯಿ ಕಾಲಮತ್ತರು ೯ ಘಳಿಯಾರದ ಬ್ರಾಹ್ಮರಿಬ್ಬರಿಗಂ ಕೆಯಿಕಾಲ ಮತ್ತರು [೯೦ ಜೋ]

೭೭. ಳಿ ಸಂಬಳದವರಿಗೆ ಕಾಲಮತ್ತರು ೨೦ ಯೀ ಧರ್ಮ್ಮಮಂ ನಾಡಮೇಲಾಳ್ಕೆಯ ಮಂನೆಯರುಂ ಸೌಧರೆಗಳು[ಪ್ರ]ಭು ಗಾವುಂಡಗಳುಂ ತಂಮ್ಮ ತಂಮ್ಮ ಧರ್ಮ್ಮ ಪ್ರತಿಪಾಳಿಸುವರು॥ ಬಹುಭಿರ್ವ್ವಸು.

೭೮. ಧಾ ದತ್ತಾ ರಾಜಭಿಸ್ಸಗರಾದಿಭಿಃ ಯಸ್ಯ ಯಸ್ಯ ಯಧಾಭೂಮಿಸ್ತಸ್ಯ ತಸ್ಯ ತದಾ ಫಳುಂ । ಸ್ವದತ್ತಾಂಪರದತ್ತಾಂ ವಾಯೋಹರೇತ ವಸುಂಧರಾಂಶ(ಷ್ಟಿ) ರ್ವ್ವರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ॥

೭೯. ರಾಮೇಕಾಂಗತಿ ರ್ಕಾಮಕಾಂ ಭೂಮೇರರ್ಪ್ವೇಕ ಮಂಗಲಂ ಹರಂ ನರಕ ಮಾದೆನಿಳ ಯಾವದಾಭೂತ ಸಂ ೦॥ಪ್ರಿಯದಿಂದಿಂತಿದನೆಯ್ದೆ ಕಾವ ಪುರುಷಂಗಾಯುಂ[ಮಹಾ]ಶ್ರೀಯುವಕ್ಕುಮಿ.

೮೦. ದಂ ಕಾಯದ ಪಾತಕಂಗೆ ಪಲವುಂ ತೀರ್ತ್ಥಂಗಳೊಳಂ ವಾರಣಾಸಿಯೊಳತ್ಯುಗ್ರಮೆನಿಂದ್ರರ[ಘ]ಳಗ ಳಂ ವೇದಾಢ್ಯರಂ ಕೊಂದ ಮಕ್ಕಯರು ಗುವೆಂದು ಸಾರಿದಪುವೀ ಶೈಲಾಕ್ಷರಂ ಧಾತರಿಯೊಳು॥

**೧೦. ಹಂದರಕಿ(ಕಲಬುರ್ಗಿ)ಕ್ರಿ.ಶ.೧೧೧೮**

೧. ಓಂ ನಮಃ ಶಿವಾಯ॥ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ತ್ರೈಳೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ॥ ಶ್ರೀ ರಮಣಿ.

೨. ಯ ನಾಭಿಸರೋರುಹದೊಳು ಪುಟ್ಟಿದಂ ಜಗತು ಸ್ರಷ್ಟಿವ್ಯಾಪಾರಾಭಿಮುಖಂ ಶ್ರುತಿರವಪೂರಿತ ದಿಙ್ಮುಖ ಹಿರಣ್ಯಗರ್ಭ್ಬಂ ಬ್ರಹ್ಮ ॥

೩. ವೃ॥ ಎನಿಸಿಬ್ಜಿಂಭೋಜಗರ್ಭಪ್ರಭುಗೆ ಮನುಮುನಿ ಪ್ರಖ್ಯನಾತಂಗೆ ಮಾಂಡವ್ಯನಿಳಾ ಸಂಸೇವ್ಯನಾತಂಗ
ಖಿಳ ಗುಣಪರೀತಂ ಹರೀತಾಂಕನಾ

೪. ತಂಗನಘಂ ಹಾರೀತಿ ತತುಪಂಚಶಿಖನೊಗೆದನಾತಂ ತ್ರಿಸಂಧ್ಯಾರ್ಘ್ಯದಿಂ ದೇವನಿಮಿತ್ತಂ ಕೊಟ್ಟ
ಚುಳ್ಕೋದಕದೊಳೊಗೆದರಂದೇಕ ವಾಕ್ಯಚ್ಚಳುಕ್ಯರ್॥ ಕಂ॥

೫. ಭುಜಬಳದ ವಿಷ್ಣುವರ್ಧನ ವಿಜಯಾದಿತ್ಯಂ ವಿರುದ್ಧಮೆನೆ ರಿಪುವನಿತಾಂಬು ಜವನಮಂ
ಕೊರಗಿಸಿದಂ ನಿಜಬಾಹಾದಂಡಮಣ್ಡಳಾಗ್ರ ಪ್ರಭೆಯಿಂ ॥

೬. ವೃ॥ ಜಯಲಕ್ಷ್ಮೀಕಾಂತೆಯಂ ಮರ್ಚ್ಚಿಸಿ ಧರೆಯನಯೋಧ್ಯಾಧಿಪಂ ಸಂದ ಸತ್ಯಾಶ್ರಯನಾಜ್ದಿಂ
ತಂನೃಪಾಳಾಗ್ರಣಿಮೊದಲೆನಲೇ ಕೋನಷಷ್ಟಿಪ್ರಮಂ.

೭. ರೂಡಿಯೊಳಿಜ್ಪಿರ್ಸ್ಸಿಹ ಪೀಠಂಗಳೊಳರೆಬರಿಳಾಪಾಳರಿಂದಿತ್ತ ವಿತ್ತಲು ಜಯಸಿಂಹೋರ್ವ್ವೀಶನಾಳ್ದಂ
ಬಳಿಕವೆಳೆಯನಾಘೋಡಘೋರ್ಬೀ ಶರಾಳ್ದರ್॥ ಕಂ॥ ಅವರಿಂ

೮. ದವಿತ್ತಲುರ್ವ್ವಿಯನವಾರ್ಯ್ಯ ಶೌರ್ಯ್ಯಾಬ್ದಿರಾಜ್ಯಲಕ್ಷ್ಮೀ ಮತ್ತಂ ಧವಳಯಶಂ ಕರ್ತ್ಯರನಾಳ್ದನವರಿಂದೆ
ಬಳಿಕ್ಕೆ ರಟ್ಟರ್ರುರ್ವ್ವಿಯನಾಳ್ದರ್ ॥ವೃ॥ ಪರಿಯಿಟ್ಟೆಯ್ತಂ.

೯. ದು ಕಟ್ಟಾಳ್ತನದಿನೂಜೂ ಕೋಡಿಟ್ಟಂ ರಟ್ಟರಂ ಸಂಗರದೊಳ್ಸೀಳ್ದೊಟ್ಟಿ ಸಿಂಹಾಸನಮನೆಳೆದು
ಕೊಂಡನ್ಯರಾಜನ್ಯಕಂ ತಂನೊರೆಗಂ ಬಣ್ಣಿಕ್ಕವೆಂತುಂ ನೆಜೆಯದೆನಿಸಿ ಕೇ

೧೦. ಯೂರಮಂ ತಾಳ್ದುವಂತಾದರದಿಂದಂ ತಾಳ್ದಿದಂ ಭೂರಿಭುಜ ಶಿಖರದೊಳ್ಭೂಮಿಯಂ
ತೈಲರಾಜಂ॥ ಘನಶೌರ್ಯ್ಯಾಗ್ರಹಿ ತೈಲಭೂಬುಜ ಸುತಂ ಸತ್ಯಾಶ್ರಯಂ ತಂನೃಪಾ

೧೧. ಳನ ಪುತ್ರಂ ವಿಭು ವಿಕ್ರಮನ್ತದನುಜಂ ಸಂದಯ್ಯಳಂ ತನ್ಮಹೀಶನ ತಮ್ಮಂ ಜಯಸಿಂಹನಾತನ
ಮಗಂ ತ್ರೈಲೋಕ್ಯಮಲ್ಲಂ ಜಗಜ್ಜನ ಚಿಂತಾಮಣಿ ತನಂರೇನ್ನ ತ

೧೨. ನಯಂ ಸೋಮೇಶ್ವರೋರ್ವ್ವೀಶ್ವರಂ॥ ಕಂ॥ ಆ ಧರಣೀಶನ ತಮ್ಮಂ ಸಾಧಿಸಿದಂ ವಸುಧೆಯಂ
ಪರಾಕ್ರಮದಿಂದಂಭೋಧಿವರವಿಂನರಾರೋ ಧರಾಧಿಪರೆನ ವೀರ ವಿ

೧೩. ಕ್ರಮಾದಿತ್ಯನೃಪಂ॥ವೃ॥ ಪರಿಮುತ್ತಿಂ ತೆಂಕ ಲಂಕಾಪುರಿ ಬಡಗ ಹಿಮಾಕ್ಷ್ಮಾಧರಂ ಮೇರೆಯಾಗಾಂತರಿ
ಪೂರ್ವ್ವೀನಾಥರಂ ತಿಮ್ಮುಸಗಿದ ನಿಜದೋರ್ದ್ದಂಡ ಚಂಡಾಸಿಯಿಂ

೧೪. ಕೊಂದು ರಣಪ್ರಾರಂಭ ನಿರ್ವ್ವಾಹಕನೆನಿಸಿದನಮ್ಮಮ್ಮ ಸಾಮಾನ್ಯಮೇ ಭೀಕರ ದಿಗ್ಜೈತ್ರಾನಕ
ತ್ರಾಸಿತರಿಪು ಹೃದಯಂ ವಿಕ್ರಮಾಧಿತ್ಯದೇವಂ॥ ಸ್ವಸ್ತಿ ಸಮಸ್ತಭುವ

೧೫. ನಾಶ್ರಯ ಶ್ರೀ ಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರಂ ಪರಮಭಟ್ಟಾರಕಂ ಸತ್ಯಾಶ್ರಯ
ಕುಳತಿಳಕಂ ಚಾಳುಕ್ಯಾಭರಣಂ ಶ್ರೀಮತ್ರಿಭು

೧೬. ವನಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿವೃದ್ಧಿ॥ ಪ್ರವರ್ಧ ಮಾನಮಾ ಚಂದ್ರಾರ್ಕ್ಯತಾರಂ ಸಲುತ್ತಂ ರಾಜಧಾನೀ ಜಯಂತೀಪುರದ ನೆಲೆವೀಡಿ॥

೧೭. ನೊಳ್ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ॥ ಎಸೆದಮ್ಮಾಹಿಷ್ಮತೀ ಪಟ್ಟಣಪತಿ ಕ್ರಿತವೀರ್ಯ್ಯಾನ್ವವಾಯೋದ್ಭವಂ ಲೋಕಸಮರ್ತ್ಥಂ ತಜ್ತನೂಜಂ

೧೮. ನೆಗಳೆಗನವಂಗಾತ್ಮಜಂ ಸೈವಲೋಕಂ ಪೆಸರಿಂ ತತ್ಸೂನು ಮಾನೋಂನತನತಿಚತುರಂ ಕೊವರಾದಿತ್ಯ ನಾತಂಗೆ ಸುತಂ ವಿಖ್ಯಾತನಪ್ಪಾನೆಗನವನ ಮಗಂ ದಾನಕಾನೀ

೧೯. ನ ಕಲ್ಪ॥ ಅಂಡುಜಿ ಚೆಂದನೆಂಬವನಗ್ರಸುತಂ ಕಲಿಲೋಕನಾತನಿಂ ಗಂಡರಗಂಡ ನಯ್ಚನವನಿಂ ಕಿಜಿಯಂ ವಿಭು ಬಿಜ್ಜನುರ್ವ್ವರಾಮಂಡಳ ಸಂಸ್ತುತ ತ್ರಿಪುಕ್ಷೋಪ॥

೨೦. ಮರಂತವರಲ್ಲಿ ಭೂಮಿಭ್ರಿನ್ಮಂಡನನಯ್ಚ ಭೂಪತಿಗೆ ಪುಟ್ಟಿದ ರಭ್ಭಿಗಭೀರರಾತ್ಮಜರ್॥ ಚಂದನ ನಿಂದನಪ್ಪೆಜೆಗೆ ಭೂಪತಿ ಲೋಕ್ಯ ನ್ರಿಪಾಳನುರ್ವ್ವರಾ

೨೧. ವಂದಿತನಪ್ಪ ಬಿಜ್ಜನವನಿಂ ವಿಭು ಬಾಚನನೂರದಾನಿ ಗೊಂಕಂ ದಯಶಾಳಿ ಛಿಮಲ್ಲನೆಡವಂ ತೊಡಳ್ದಂಜದ ಮೂಗತಯ್ಯಸೇನೆಂದಪುದೆಂಣ್ಬರುಂ ತ[ಳೆ]

೨೨. ದರೂರ್ಜ್ಜಿತ ರಾಜವಸುಪ್ರಸಿದ್ದಿಯಂ ॥ಕಂ॥ ಅವರೊಳಗೆಜೆಗ ನೃಪಾಳಂಗವತರಿಸಿದ ಪುಣ್ಯಮೂರ್ತ್ತಿ ಕೀರ್ತ್ತಿವಿಳಾಸಂ ಕವಿಕಲ್ಪಭೂರುಹಂ ಪಾರ್ತ್ಥಿವಪಾರ್ತ್ಥಂ

೨೩. ಚೊಟ್ಟಿನಯ್ಯನಸದ್ರಿಶಮಹಿಮ॥ ಜಳ ಕೃತವೀರ್ಯ್ಯಕುಳಾಬ್ಜ ದಿವಾಕರ ನವದಾತ್ತ ಕೀರ್ತ್ತಿ ಪರಿಜನವಜ್ರಪ್ರಾಕಾರಂ ಚತುರಮತನೋಜಾಕಾರಂ ಮುತ್ತ

೨೪. ಲೋಕನೆಸೆದಂ ಜಗದೋಳ್॥ ಜಳ ನೆಗಳ್ದ ಬಾಚಭೂಪತಿಗಾನತರಿಪು ತೊಂಡಮಂಡಳಿಕ ಮದ ಗಜ ಪಂಛಾನನನಾ ನೆಗಳ್ದೆ ಸೆಯಾನೆಗಮಚಳಿತಗುಣಂ ತನೂ

೨೫. ಭವನಾದಂ॥ ಎನೆ ನೆಗಳ್ದಾನೆಗಭೂಪನ ಮನೋನಯನವಲ್ಲಭಾ ಪ್ರಭಾವಂ ತನಗಾಯ್ತೆನೆಸಿ ಮಹಾದೇವಿ ಜಗದ್ವಿನುತೆ ಮಹಾಮಹಿಮೆಯೊಳ್ಮಹೀ ಸುತೆಯೆನಿಪಳು॥ ಜ

೨೬. ಗದೊಳು ನೆಗಳ್ದ ಮಹಾದೇವಿಗವಾನೆ ಭೂಭುಜಂಗಮುದಿಯಿಸಿದಂ ಪೆರ್ಮ್ಮಗೆ ನೋಂತು ಪೂಣ್ದು ಕೈಯ್ಯಂ ಮುಗಿಪಿನೆಗಂ ತನಗೆ ಮರ್ತ್ಯಲೋಕಂ ಲೋಕಂ ॥ವ್ರಿ॥ ಅರ್ತ್ಥಮ

೨೭. ದಾರ್ಗ್ಗೆ ನಿಂದಪುದು ನಿಲ್ವಡೆ ಕೀರ್ತ್ತಿಯೆ ನಿಲ್ಕುಮೆಂದು ವಿದ್ಯಾರ್ತ್ಥಿಗೆ ಶಿಷ್ಟಸಂತತಿಗೆ ಬಂಧುಜನಾಳಿಗೆ ಕೂರ್ತ್ತು ಕೊಟ್ಟು ಧರ್ಮ್ಮಾರ್ತ್ಥದೊಳರ್ತ್ಥಮಂ ತವಿಸಿ ಕೀರ್ತ್ತಿಗೆ ನೋಂತುದಜೆಂ ಪ

೨೮. ರೋಪಕಾರಾರ್ತ್ಥಮಿದಂ ಶರೀರಮೆನಿಪುಂನತಿ ಸಂದರು ಲೋಕಭೂಪನೊಳ್॥ ಉರಗೇಂದ್ರಾಳಯ ದೊಳ್ಸುವಣ್ಣಗಿರಿಯೊಳ್ನೀರೇಜ ಗರ್ಭಾಂಡದೊಳ್ವರ ದಿಗ್ಭಿತ್ತಗಳೊಳ್ವಕಾ

೨೯. ಸಿಲತೆಯೊಳ್ಚಂದ್ರಾರ್ಕ್ಕ ಬಿಂಬಂಗಳೊಳ್ಸುರರಾಜೇನ್ದ್ರಮದೇಭ ಮಸಕ್ತದೊಳಾಶಾ ದಂತಿ ದಂತಂಗ
ಓಳೊಳ್ಪರೆದಳ್ವಾಗ್ವಧು ಲೋಕಭೂಪನ ಯಶಶ್ರೀಯುಂ ಜಯಶ್ರೀಯುಮಂ॥

೩೦. ಸ್ವಸ್ತಿ ಶ್ರೀಮನ್ಮಹಾಮಂಡಳೇಶ್ವರಂ ಲೋಕರಸರು। ಶ್ರೀಮದಾಚಾರ್ಯ್ಯರು ಅಘೋರ ಶಕ್ತಿ ಪಂಡಿತರುಂ।
ಅಭಿನವ ಶಿವಲೋಕಮಿದೆಂಬಂತು ನೆಗಳ್ತೆವೆತ್ತ ಸಕಳವಸುಮತೀ ತಳಕ್ಕೆ ತಲೆಯಿದೆನಿಸಿ

೩೧. ನೆಗಳ್ದ ಕುಂತಳ ಮಹೀತಳಕ್ಕೆ ಮುಖಮಿದೆಂಬನ್ತಿಱ್ದಱಲ್ಲೂಮ್ನೂರ್ಕ್ಕಂ ತಿಳಕ ಮಿರ್ಪ್ಪಂತಿರ್ದ್ದ
ಧರಾಂಗನಾ ಕುಚಾಗ್ರಮೆನಿಸಿದ ಪಂದಿರ್ಕ್ಕೆಯ ಲೋಕೇಶ್ವರದೇವರ್ಗ್ಗೆ॥ ಊರಿಂ ಬಡಗಲು ಸ್ಥಳವೃತ್ತಿ ಪ

೩೨. ಡುವಲು ಕೆಂಮೊರಡಿಯಲ್ಲಿಂ ಬಡಗ ಚಿಕ್ಕಬೆಟ್ಟದಿಂ ಮೂಡಲು ಮೇರೆಯಾಗಿ ಅಲಕಬ್ಬೆಯ
ಬಾವಿ ನಡುಮಧ್ಯವಾಗಿ ಮೂಡಲೆರಡುಂ ಪಳ್ಳಂ ಕೂಡಿತು ಮೇರೆಯಾಗಿ ಧಾರೆ

೩೩. ಯ ಕೊಳ್ಳದಿಂ ಪತ್ತಿರೆ ಮೇರೆಯಿಂ ತೆಂಕ ಗುಡ್ಡನಹಾಳಿ ದೂರವಾಗ್ನೇಯದಲು ನೆಟ್ಟಕಲು
ಛಿಮೇರೆಯಿಂದೊಳಗಣ ಭೂಮಿ ಕಾಲಮತ್ತರು ಸಾಸಿರದ ನೂಱು ಅದಱೊಳಗೆ ಊರ ಪ್ರ॥

೩೪. ಭುವಿಂಗೆ ದಶವನ್ಧಂ ಮತ್ತರು ನೂಱನುಳಿಯೆ ನಿಕರಂ ಮತ್ತರು ೧೦೦೦ ಬಟ್ಟೆಯ ಭೈರವಿಂಗೆ
ಅಲ್ಲಿಂ ಮೂಡ ದೇವಾಲ್ಯದಿಂ ತೆಂಕ ತೋಂಟಂ ಕಾಲ ಮತ್ತರು ೩ ಮತ್ತವೂರಿಂ

೩೫. ಮೂಡಬಡಗ ಬೆಟ್ಟ ತೆಂಕ ಪಳ್ಳಂ ಮೇರೆ ಕಾಲ ಮತ್ತರು ೪೦ ಚೌಡೇಶ್ವರೀಗೆಱೆಯಿಂ ಪೊಳಲು
ಕುಂದೆಯ ಬಟ್ಟಯಿಂ ತೆಂಕ ಮುಳ್ಳಿಮೆಯನಂ ತೀರ್ತ್ಥದಿಂ ಪಡುವಲು ಗುಂಡಿಗೆಱೆಯಿಂ

೩೬. ದೊಳಗೆ ಮಸಂಬು ಕಾಲ ಮತ್ತರು ೨೦ ಕೊಸನಮಗೆಱೆಯಿಂ ಮೂಡ ತಾಱೆಯಕುಂಟೆಯಿಂದೊಳಗೆ
ಮಸಂಬು ಕಾಲ ಮತ್ತರು ೬ ಕೆಱೆಯಿಂ ಪಡುವಣ ಮಸಂಬು

೩೭. ಕಾಲಮತ್ತರು ೫ ಊರಿಂ ಪಡುವಲು ತಾವರೆಗೆಱೆಯಿಂ ಪತ್ತಿಕೆ ಪಾಳ ಕೆಯಿ ಕಾಲ ಮತ್ತರು
೨೦ ಪೆರ್ಗ್ಗಡೆಗೆಱೆಯಿಂ ಪತ್ತಿರೆ ಬಡಗಲು ಸಂನತಿ ಮೇರೆ ಕಾಲ ಮತ್ತರು ೨೦ ತಾವರೆಗೆಱೆ

೩೮. ಯಿಂ ತೆಂಕ ಕಾಳಿಯ ಕೆಱೆಯ ನೀರ್ನ್ನೆಲಂ ಕಾಲ ೧೦ ಮತ್ತಂ ತಾವರೆಗೆಱೆಯಂ ಪತ್ತಿರೆ
ಪಡುವಲು ಪೆರ್ಗ್ಗಡೆಗೆಱೆಯ ಕಾಲಲು ಬೆಳೆವ ನೀರ್ನ್ನೆಲಂ ಕಾಲ ಮತ್ತರು ೭ ಊರಿಂ ಮೂಡ

೩೯. ಲು ಕೋಟೆಯಿಂ ಪತ್ತಿರೆ ಪೂದೋಂಟ ಮತ್ತರು ೨ ಅಲ್ಲಿಂ ಪತ್ತಿರೆ ನೀರ್ನ್ನೆಲಂ ಮತ್ತರು ೨
ದೇವರಿಂ ಪತ್ತಿರೆ ಬಡಗಲ್ಪಳ್ಳ ಕಾಲ ನೀರ್ನ್ನೆಲಂ ಮತ್ತರು ೮ ದೇವಾಲ್ಯದಿಂ ಮೂಡಪುರವರ್ಗ್ಗವಾ
ಪು

೪೦. ರವರ್ಗ್ಗದಿಂ ಬಡಗ ಪೂದೋಂಟಂ ಕಾಲ ಮತ್ತರು ೪ ಹುಣುಸೆಯ ಬೆಂಚೆ ೧ ಅಸಗಗೆಱೆ
ಬಸುರೀಗುಂಟೆ॥ ಶ್ರೀ ಮಚ್ಚಾಳುಕ್ಯ ವಿಕ್ರಮ ವರ್ಷದ ೪೩ನೆಯ ವಿಳಂಬಿ

೪೧. ಸಂವತ್ಸರದ ಜೇಷ್ಠದ ಪುಣ್ಣಮಿ ಬುಧವಾರ ಸೋಮಗ್ರಹಣದಲು ಶ್ರೀಲೋಕೇಶ್ವರದೇವರ್ಗ್ಗೆ
ಮಹಾಮಂಡಳೇಶ್ವರ ಲೋಕರಸು ಅಱಲು ಮೂನೂಱಱ ಬಳಿಯ

೪೨. ಬಾಡಂಗುಂಡಿ ತುಳುವಳಿಗೆಯಂತೆರಡೂರ ಪ್ರಭುತ್ವಮುಂ ಮನ್ನೆಯಮುಮಂ ಧಾರಾಪೂರ್ವ್ವಕಂ ಮಾಡಿಬಿಟ್ಟು। ತೇಜಿಗವೊಲನಂ[ಲಂ] ಜಿಹೊಳಲಿಂ ದೂರ ತೆಂಕಲು

೪೩. ಬಾಚಕನ ಪಳ್ಳಂ ಪಡುವಲು ಕಣಂಬೆಯ ಪಿರಿಯ ಪಳ್ಳಂ ಬಡಗಲು ಮಾವಿನೊತ್ತಿನ ಕೊಪ್ಪಲು ಮೂಡಲು ಸೌಳಪಳ್ಳಮಿಂತೀ ಚತುಸ್ಸೀಮೆಯಿಂದೊಳಗೆ ಕಾಲ ಮತ್ತ ।

೪೪. ರು ೫೦೦॥ ಲೋಕಸಮರ್ತ್ಥನಿಂದಾದಿಯಾಗಿ ಭುಕ್ತಿಸಾಶನ ಮಾಗಿಯುಂಡ ಭೂಮಿಯಂ ಶಿಲಾಲಿಖಿತಮಾಗೆ ಪ್ರತಿಷ್ಠೆ ಮಾಡಿದರು॥ ಸರ್ವ್ವನಮಶ್ಯಂ॥ ನೈಷ್ಠಿಕಮ.

೪೫. ಠದಾಚಾರ್ಯ್ಯರ್ಮ್ಮಂನೆವಳಿಯಾಗಿ ಕಾಳಾಮುಖ ನೈಷ್ಠಿಕ ತಪೋಧನರಾಗ ವೇಳ್ಕುಂ। ದೇವರಂಗ ಭೋಗಕ್ಕಂ ಪೂಜೆಗಂ ತಪೋಧನರಾಹಾರದಾನಕ್ಕಂ ಕಂನಡಕ್ಕರವೋದುವ ವಿದ್ಯಾ

೪೬. ರ್ತ್ಥಿಮಾಣಿಗಳಿಗವೋದಿಸುವುಪಾಧ್ಯಾಯರ್ಗ್ಗಂ ಜೀರ್ಣ್ಣೋದ್ಧಾರಕ್ಕಂ ಪಾತ್ರಪಾವುಳಕ್ಕಂ ಕಂಬದ ಸೂಳೆಯರ್ಗ್ಗಂ ಮಠದಾಚಾರ್ಯರಿನಿತುಮಂ ನಡೆಯಿಸುವರು ॥ವ್ರಿತ್ತ॥

೪೭. ಧರೆಯಂ ಭೂಲೋಕಮಲ್ಲ ಕ್ಷಿತಿಪತಿ ವಿನಮದ್ರಾಜಕಂ ಮಾಡಿ ಕೈಕೊಂಡಿರೆ ತತ್ತೀಬ್ರ ಪ್ರತಾಪೋದಯ ಮಲೆವುದು ಕಾಳಿಂಗನಂ ಚೋಳನಂ ಗೂರ್ಜ್ಜರನಂ ಪಾಂಚಾಳನಂ ಮಾ

೪೮. (ಳವ) ನನೆನೆ ಬಳಿಕ್ಕನ್ಯ ಸಾಮಾನ್ಯ ಭೂಪಾಳರ ಸಂಪತ್ತೇನೊ ಸತ್ಯಾಶ್ರಯಕುಳತಿಳಕಂ ಯುದ್ಧ ಸಂನದ್ಧನಾಗಲ್॥ ಸ್ವಸ್ತಿ ಸಮಸ್ತ ಭುವತನಾಶ್ರಯ ಪೃಥ್ವೀವಲ್ಲಭ ಮಹಾ

೪೯. ರಾಜಾಧಿರಾಜ ಪರಮೇಶ್ವರಂ ಪರಮಭಟ್ಟಾರಕಂ ಚಾಳುಕ್ಯಾಭರಣಂ ಶ್ರೀಮದ್ಭೂಲೋಕಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿವ್ರಿದ್ಧಿ

೫೦. ಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂಬರಂ ರಾಜಧಾನೀ ಕಲ್ಯಾಣಪುರದ ನೆಲೆವೀಡಿನೊಳ್ಸುಖ ಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ॥ ಶ್ರೀಮತ್ಕೃತವೀರ್ಯ್ಯ

೫೧. ಕುಳವ್ಯೋಮಳ ಶರಚ್ಚಂದ್ರನರ್ತ್ಥಿಜನ ಕುಮುದವನ ಪ್ರೇಮಕರ ನಹಿತಮದಗಜಭೀಮಂ ಬಿಜ್ಜಾವನೀಶನುಟಿಳವೇಷಂ ॥ವೃ॥ ಶರಣಾಯಾತಾರಿಯಂ ಸಂವರಿಸಿ ನಿಲಿಸಿ ಮಾಜಾನ್ತು

೫೨. ಕೈಕೊಳ್ಳದುದ್ದಿತ್ತರ ಬೇರಂ ಕಿರ್ತ್ತು ನೀರೊಳು ಕಲಸಿ ತನಜಭುಜಾಕ್ಷೇಪದಿಂ ನ್ಯಾಯಮುಂ ನಿಷ್ಠುರಮುಂ ಮೆಯ್ವೆತ್ತುದೀತಂಗೆನಿಸಿ ದಶದಿಶಾಚಕ್ರವಂ ಪೆರ್ವ್ವ ಕೈಕೊಂಡಿರೆ ಭಾಶ್ವತ್ಕೀರ್ತಿ ಪೆಂಪಿಂದ

೫೩. ಸದಳವೆಸೆದಂ ಬಿಜ್ಜಭೂಪಾಳದೇವಂ॥ ಸ್ವಸ್ತ್ಯಾನೇಕ ಭಂಗುರ ತರಂಗ ಸಂಘಾತ ವೀಚಿಚ್ಛಾಯ ಲವಣಾಬ್ಧಿವಳಯವಳಯಿತ ವೇಳಾವನ ಗಂಗಾತೀರ ಪಾರಿಯತ್ರ ತನ್ಮಧ್ಯ ದೇಶಾ

೫೪. ಧೀಶ್ವರಂ ಮಾಹೆಶ್ಮತೀಪುರವರೇಶ್ವರಂ ಆಹಿಹಯ ವಂಶೋದ್ಭವಂ ವಿವೇಕವನಜೋದ್ಭವಂ ವೈರಿಮಂಡಳಿಕ ಸರಭಭೇರುಂಡಂ ವೀರಮಾರ್ತಂಡಂ ಚೆಂನ ಮಂನೆಯ ಲಲಾಟಪಟ್ಟಂ ವೈರಿ

೫೫. ಘರಟ್ಟಂ ಹಯವತ್ಸರಾಜಂ ಸಹಜ ಮನೋಜಂ ಸತ್ಯಯುಧಿಷ್ಠಿರಂ ಶರಣಾಗತ ವಜ್ರಪಂಜರಂ ಮಾರ್ಕ್ಕೊ(ಳ್ವ) ಭೈರವಂ ಬಂಟರ ಬಾವಂ ಬಿರುದ ಮಂನೆಯರ ಗಂಡಂ ನಿಕರಕೊಳ್ಗಂಡಂ ಶ್ರೀ

೫೬. ಲೋಕೇಶ್ವರದೇವಲಬ್ಧ ವರಪ್ರಸಾದಂ ಮ್ರಿಗಮದಾಮೋದಂ ಗಂಡ ಗೋಪಾಳಂ ರಿಪು ಕರ್ಣ್ನಶೂಳಂ ದಳದಂಕಕಾಱನಾನೆಗನಂಕಕಾಱಂ ಶ್ರೀಮತ್ ಭೂಲೋಕಮಲ್ಲದೇವ ಪಾದಾರಾಧಕಂ ಪ

೫೭. ರಬಳಸಾಧಕಂ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾ ಮಂಡಳೇಶ್ವ್ವರಂ ಬಿಜ್ಜರಸರು॥ ಇದು ಕ್ಕೆಳಾಸಾದ್ರಿಯ ಶಿಖರದ ಪೊಲ್ಲುಟಾಭಿರಾಮಮೀ ಪ್ರಾ

೫೮. ಸಾದಕ್ಕಿದು ಮಂಟಪಮಿಂದ್ರ ವಿಮಾನದ ದೊರೆಯೆನೆ ಮಾಡಿ ರೂಡಿವಡಿದಂ ಬಿಜ್ಜಂ॥ ಈ ನರನಾಥನಗ್ಗ ಮಹಿಷೀಪದಮನ್ತಳೆದಿಜ್ದರಾಣಿ ಚಂದ್ರಾ

೫೯. (ನ) ನೆಕಂಬುಕಂಧರೆ ಚಳಾಳಕಿ ಬಾಚಲದೇವಿ ಚೋಳ ಸಂತಾನ ಸರೋಜ ಲಕ್ಷ್ಮೀ ಕ್ರಿತವೀರ್ಯ್ಯ ಕುಲಕ್ಕಧಿಧೆಯ್ವಮೆಂಬಭಿಜ್ಞಾನದಿನಾನೆಮೇಶ್ವರಕ್ಕೆ ಬಿ

೬೦. ಟ್ಟಳು ನೀರ್ನ್ನೆಲನೆಂಟು ಮತ್ತರಂ॥ ಆನೆಮಗೆಱೆಯಿಂ ಬಡಗಲನೂನಂ ದುಱಿಮಡಿಯೆನಿಪ್ಪ ಗಜ್ದೆಗಳಂ ರಾಜಾನ್ನಂ ಬೆಳೆವುದಿದೆಂದತ್ಯಾನಂ

೬೧. ದದಿನಿತ್ತು ಸಾಶನಂ ಬರೆಯಿಸಿದಳು॥ ಅತಿದರ್ಪ್ಪಿಷ್ಟ ಕುಮಾರಬ್ಬುಜ ಮದಪ್ಪಧ್ವಂಶಕಂ ಬಿಜ್ಜಭೂಪತಿಗಂ ಬಾಚಲದೇವಿಗಂ

೬೨. (ನ)ರಮದೇಭೇಂದ್ರಕ್ಕೆ ದಾನಾಂಬು ಪುಟ್ಟಇತೆನಲ್ಪುಟ್ಟಿದ ಲೋಕಭೂಭುಜನ ವಕ್ಷೋಭಾಗದೊಳು ರಾಗದಿಂಕ್ರಿತವೀರ್ಯ್ಯಾನ್ವಯ

೬೩. ರಾಜ್ಯಲಕ್ಷ್ಮೀನಿಲ್ಕಾಚಂದ್ರಾರ್ಕ್ಕತಾರಂಬರಂ॥

**೧೧. ಹಂದರಕಿ ಕ್ರಿ.ಶ.೧೧೨೨**

೧. ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ ತ್ರೈಲೋಕ್ಯನಗರಾರಂಭ ಮೂಳಸ್ತಂಭಾಯ ಶಂಭವೇ॥ ಶ್ರೀರಮಣೀ

೨. ಪ್ರಿಯನಾಭಿ ಸರೋರುಹ ದೊಳ್ಪುಟ್ಟಿದಂ ಜಗತುಸ್ರಪ್ಪಿವ್ಯಾಪಾರಾಭಿಮುಖಂ ಶ್ರುತಿರವಪೂರಿತ ದಿಙ್ಮುಖಂ ಹಿರಣ್ಯಗರ್ಬ್ಭ ಬ್ರ

೩. ಹ್ಮ॥ ಎನಿಸಿರ್ದ್ದಂಭೋಜಗರ್ಭಂ ಪ್ರಭುಗೆ ಮನುಮುನಿ ಪ್ರಖ್ಯನಾತಂಗೆ ಮಾನವ್ಯನಿಳಾ ಸಂಸೇವ್ಯನಾತಂಗಖಿಳ ಗುಣಪರಿತ ಹ.

೪. ರಿತಾಂಕನಾತಂಗನಘಂ ಹಾರೀತಿ ಪ್ರಭುಗೆ ತತ್ಪಂಚಶಿಖಿನೊಗೆದನಾತಂ ತ್ರಿಸಂಧ್ಯಾರ್ಘ್ಯದಿಂ ದೇವನಿಮಿತ್ತಂ ಕೊಟ್ಟ ಚುಳ್ಕೋದಕದೊಳೆಗದರಂದೇಕ ವಾ.

೫. ಕೃರ್ಚ್ಛಳುಕ್ಯರು ।ಕಂ॥ಭುಜಬಳದ ವಿಷ್ಣುವರ್ದ್ಧನ ವಿಜಯಾದಿತ್ಯಂ ವಿಶುದ್ಧಮೆನೆ ರಿಪು ವನಿತಾಂಬುಜ ವನದಂ ಕೊರಗಿಸಿದ ನಿ.

೬. ಜಬಾಹುದಣ್ಡಮಣ್ಡಳಾಗ್ರ ಪ್ರಭೆಯಿಂ॥ವೃ॥ ಜಯಲಕ್ಷ್ಮೀಕಾನ್ತೆಯಂ ಧರೆಯನಯೋಧ್ಯಾಧಿಪಂ ಸನ್ದ ಸತ್ಯಾಶ್ರಯ

೭. ನಾಳ್ದಂ ತನ್ರಿಪಾಳಾಗ್ರಣಿ ಮೊದಲೆನಲೋಕೋನ ಷಷ್ಠಿಪ್ರಕ್ರಮಂ ರೂಢಿಯೊಳಿದಂ ಸಿಂಹಪೀಠಂ ಗಳೊಳರೆ ಬರಿಳಾಪಾಳರಿಂದಿತ್ತವಿತ್ತಲು ಜಯಸಿಂಹೋ.

೮. ರ್ವ್ವೀಶನಾಳ್ದಂ ಬಳಿಕವೆಳೆಯನಾ ಷೋಡಶೋರ್ವ್ವೀಶರಾಳ್ವರು ॥ಕಂ॥ ಅವರಿಂದ ಲಿತ್ತಲುರ್ವ್ವಯನ ವಾರ್ಯ್ಯಶೌರ್ಯ್ಯೋಬ್ಧಿ ರಾಜಲಕ್ಷ್ಮಿ ಮತ್ತಂ.

೯. ದಳಯಶಂ ಕರ್ತ್ಯರಸನಾಳ್ದವನಿಂದೆ ಬಳಿಕ್ಕೆ ರಟ್ಟರುರ್ಬ್ಬಿಯನಾಳ್ದರು॥ವೃ॥ ಪರಿಯಿಟ್ಟೆಯ್ತಂದು ಕಟ್ಟಾಳ್ತನದಿನುರದೆ ಕೋಡಿಟ್ಟರಂ ರಟ್ಟರಂ ಸಂಗರ

೧೦. ದೊಳ್ ಸೀಳ್ದೊಟ್ಟಿ ಸಿಂಹಾಸನಮನೆಳೆದು ಕೇಯೂರಮಂ ತಾಳ್ದುವಂ ತಾದಾರದಿಂದ ತಾ.

೧೧. ಳ್ದಿದಂ ಭೂರಿಭುಜಶಿಖರದೊಳು ಭೂಮಿಯಂ ತೈಲರಾಜಂ ॥ ಘನಶೌರ್ಯ್ಯಗ್ರಣಿ ತೈಲಭೂಭುಜ ಸುತಂ ಸತ್ಯಾಶ್ರಯಂ ತಂನೃಪಾಳನ ಪು.

೧೨. ತ್ರಂ ವಿಭುವಿಕ್ರಮಂ ತದನುಜಂ ಸಂದಯ್ಯಣಂ ತನ್ಮಹೀಶನ ತಮ್ಮಂ ಜಯಸಿಂಹನಾತನಮಗಂ ತ್ರೈಲೋಕ್ಯಮಲ್ಲಂ ಜಗಜ್ಜನ ಚಿಂ[ತಾ]

೧೩. ಮಣಿ ತನ್ನೃಪಾಳನ ತನಯಂ ಸೋಮೇಶ್ವರೋರ್ಮಿಶ್ವರಂ ॥ ಕಂ ॥ ಆಧರಣೀಶನ ತಮ್ಮಂ ಸಾಧಿಸಿದಂ ವಸುಧೆ ಯಂ ಪರಾಕ್ರಮದಿಂದಂಭೋಧಿವರವಿನ್ನ

೧೪. ರಾರೋ ಧರಾಧಿಪರೆನೆ ವೀರವಿಕ್ರಮಾದಿತ್ಯನಿಪ್ರಂ ॥ವೃ॥ ಪರಿಮುತ್ತಿಂ ತೆಂಕಲಂಕಾಪುರಿ ಬಡಗ ಮಹೀಷ್ಮಾದರಂ ಮೇರೆಯಾಗಾಂತರಿ ಪೋ

೧೫. ರ್ವ್ವೀನಾಥರಂತಿಂಮ್ಮಸಗಿದ ನಿಜದೋರ್ದ್ದಂಡ ಚಂಡಾಸಿಯಂ ಕೊಂದು ರಣಪ್ರಾರಂಭನಿರ್ವ್ವಾಹಕ ನೆನಿಸಿದನಮ್ಮಮ್ಮ ಸಾಮಾನ್ಯನೇ ಬಿಕರದಿ ಗುಜ್ಜೈತಾನರೌತ್ರಾ

೧೬. ಸಿತರಿಪುಹ್ರಿದಯಂ ವಿಕ್ರಮಾದಿತ್ಯದೇವಂ॥ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀ ಪ್ರಿಥ್ವಿವಲ್ಲಭಂ ಮಹಾರಾಜಾ ಧಿರಾಜಂ ಪರಮೇಶ್ವರಂ ಪರಮ.

೧೭. ಭಟ್ಟಾರಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀಮತ್ರಿಬುವನಮಲ್ಲ ದೇವರ ವಿಜಯ ರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವ.

೧೮. ರ್ದ್ಧಮಾನಮಾಂಚಂದ್ರಾರ್ಕ್ಯ ತಾರಂಬರಂ ಸಲ್ಲುತ್ತಂ ರಾಜಧಾನಿ ಜಯಂತೀಪುರದ ನೆಲೆವೀಡಿನೊಳು ಸುಖಸಕಂಥಾವಿನೋದದಿಂ ರಾಜ್ಯಂಗಯ್ಯುತ್ತಮಿರೆ ॥

೧೯. ಎಸೆದಂ ಮಾಹಿಷ್ಮತಿಪಟ್ಟಣ ಸತಿಕ್ರಿತ ವೀಯ್ಯಾನ್ವಯೋದ್ಭವಂ ಲೋಕಸಮರ್ತ್ಥಂ ತತ್ತನೂಜಂ ನೆಗರ್ದ್ದೆರೆಗನವಂಗಾತ್ಮಜ ಸೈವಲೋಕಂ ಪೆಸರಿಂ ತತ್ಸೂನುಮಾನೋ

೨೦. ನ್ನತನತಿ ಚತುರಂ ಕೋರಲಾದಿತ್ಯನಾತಂಗೆಸುತಂ ವಿಖ್ಯಾತನಿರ್ಪ್ಪಾನೆಗನವನ ಮಗಂ ದಾನಕಾನೀವಕಳ್ವ ।ಅಂಡುರಚಂದ್ರನೆಂಬನವನಗ್ರಸುತಂ ಕಲಿಲೋಕನಾತ.

೨೧. ನಿಂ ಗಂಡರ ಗಂಡನೈಚನವನಿಂ ಕಿರಿಯಂ ವಿಭು ಬಿಜ್ಜನುರ್ವ್ವರಾಮಂಡಳ ಸಂಸ್ತುತ ತ್ರಿಪುರ ಶೋಪಮರನ್ತವರಲ್ಲಿ ಭೂಮಿಬ್ರಿನ್ಮ್ಮಂನನಯ್ಚ ಭೂಪತಿಗೆ

೨೨. ಪುಟ್ಟಿದರಬ್ಧಿಗಭೀರರಾತ್ಮಜರು॥ ಚಂದನನಿದ್ದ್ಯನರ್ಪ್ಪೆರೆಗ ಭೂಪತಿ ಲೋಕನೃಪಾಳನುರ್ವ್ವೀತನಪ್ಪ ಬಿಜ್ಜನವನಿಂ ವಿಭುಚಾರವನನೂ.

೨೩. ನ ದಾನಿ ಗೊಂಕಂ ದಯಶಾಳಿ ಮಲ್ಲನೆಡವಂ ತೊಡಳ್ದಿಂಜದ ಮೂಗುತಯ್ಯನೆನೆ[ನೃಪರೆ\ಣ್ಬರುಂ ತಳದರೂರ್ಜ್ಜಿತ ರಾಜವಸುಪ್ರಸಿದ್ಧಿಯಂ ॥ಕಂ॥ ಅವರೊಳಗೆರ

೨೪. ಗನ್ರಿಪಾಳಂಗವತರಿಸಿದ ಪುಣ್ಯಮೂರ್ತ್ತಿಕೀರ್ತ್ತಿವಿಳಾಸಂ ಕವಿಕಳ್ಪಭೂರುಹಂ ಪಾರ್ಥಿವೆಷಾರ್ತ್ಥಂ ಚೌಟ್ಟಿನಾಯ್ಚನಶದ್ರಿಶ. . . ಮಹಿಮೆ॥ ಆ ಕ್ರಿತವೀರ್ಯ್ಯಕು

೨೫. ಳಾಬ್ಜ ದಿವಾಕರನವದಾತ್ತ ಕೀರ್ತ್ತಿಪರಿಜನ ವಜ್ರಪ್ರಾಕಾರಂ ಚತುರ ಮನೋಜಕಾರಂ ಮುತ್ತಲೋಕಿನೆಸೆದಂ ಜಗದೊಳ್॥ ಆ ನೆಗಳ್ದ ಚಾವಭೂಪತಿಗಾನತರಿ.

೨೬. ಪು ತೊಂಡಮಂಡಳಿಕ ಮದಗಜ ಪಂಚಾವನನನಾನೆಗಣ್ಡೆಸೆಯಾನೆಗ ವರರಿ[ಳಿ] ತ ಗುಣಂ ತನೂಭವನಾದಂ॥ ಎನಿಸಿರ್ದ್ದಾನೆಗಭೂಪನ ಮನೋನಯನ ವಲ್ಲ.

೨೭. ಭಾಪ್ರಭಾವಂ ತನಗಾಯ್ತೆನಿಸಿ ಮಹಾದೇವಿ ಜಗದ್ವಿನುತೆ ಮಹಿಮೆಯೊಳ್ಮಹೀಸುತೆಯೆನಿಪಳ್ ॥ ಜಗದೊಳ್ನೆಗಳ್ದ ಮಹಾದೇವಿಗಮಾ

೨೮. ನೆಗ ಭೂಭೂಜಗಮುದಯಿಸಿದಂ ಪೆರ್ಮ್ಮಗೆ ನೋನ್ತು ಪೂಣ್ದು ಕಯ್ಯಂ ಮುಗಿವಿನೆಗಂ ತನಗೆ ಮರ್ತ್ಯಲೋಕಂ ಲೋಕ ॥ವ್ರ॥ ಆರ್ತ್ಥಮದಾನೆಂ ನಿಂದಪುದು ನೆಲ್ವ

೨೯. ಡೆ ಕೀರ್ತ್ತಿಯೆ ನಿಲ್ಕುಮೆಂದು ವಿದ್ಯಾರ್ತ್ಥಿಗೆ ಶಿಷ್ಟಸಂತತಿಗೆ ಬನ್ದುಜನಾಳಿಗೆ ಕೂರ್ತ್ತುಕೊಟ್ಟು ಧರ್ಮಾರ್ತ್ಥದೊಳರ್ತ್ಥಮಂ ತವಿಸಿ ಕೀರ್ತ್ತಿಗೆ ನೋನ್ತುದರಿಂ ಪರೋ.

೩೦. ಪಕರಾರ್ಥಮಿದಂ ಶಸರೀರಮೆನಿಪುಂನ್ನತಿ ಸಂದುದು ಲೋಕಭೂಪನೊಳ್॥ ಉರಗೇಂದ್ರಾಲಯ ದೊಳ್ ಸುವರ್ಣ್ನಗಿರಿಯೊಳ್ ನಿರೇಜಗರ್ಭಾಂಡದೊ

೩೧. ಳ್ ವರದಿಗ್ಭಿತ್ತಿಗಳೊಳ್ ಹರಾಸಿಲತೆಯೊಳ್ ಚಂದ್ರಾರ್ಕ್ಕಬಿಂಬಂಗಳೊಳ್ದ ಸುರರಾಜೇಂದ್ರಮದೇಭ ಮಸ್ತಕದೊಳಾಶಾದಂತಿ ದಂತಿಗಳೊ

೩೨. ಳ್ ಬರದಳ್ವಾಗ್ದಧೂ ಲೋಕಭೂಪನಯಶಶ್ರೀಯಂ ಜಯಶ್ರೀಯುಮಂ॥ ಸ್ವಸ್ತ್ಯಾನೇಕ ಭಂಗುರತರಂಗ ಸಂಪೂತ ವೀಚಿಚ್ಛಾಯ ಲವಣಾ

೩೩. ಬ್ಧಿ ವಲಯವಳಯಿತ ವೇಳಾವನ ಗಂಗಾತೀರ ಪಾರಿಯಾತ್ರ ಸನ್ಮಧ್ಯ ದೇಶಾಧೀಶ್ವರ ಮಾಹೀಷ್ಮತೀ ಪುರವರೇಶ್ವರನಹಿಹಯ ವಂಸೋಧ್ಭವ ವಿವೇಕ[ವನ]

೩೪. ಜೋದ್ಭವ ವೈರಿಮಣ್ಡಳಿಕ ಸರಭಭೇರುಂಡ ವೀರಮಾರ್ತ್ತಾಂಡ ಚೆನ್ನಮನ್ನೆಯ ಲಲಾಟಪಟ್ಟಿ ವೈರಿಘರಟ್ಟಂ ಹಯವತ್ಸರಾಜಂ ಸಹಜಮನೋಜ ಸತ್ಯಯುಧಿ.

೩೫. ಷ್ಠಿರ ಶರಣಾಗತ ವಜ್ರಪಂಜರ ಮಾರ್ಕ್ಕಾಲಭೈರವ ಭಾವರಭಾವಂ ಬಿರುದಮನ್ನೆಯರ ಗಂಡಂ ನಿಕರ ಕಾಳ್ಗೆಣ್ಬು ಶ್ರೀಮತ್ರಿಭುವನ ಮಲ್ಲದೇವ

೩೬. ರಾಧಕಂ ಪರಬಳಸಾಧಕಂ ದಾನವಿನೋದ ಮೃಗಮದಾಮೋದ ಸಾಹಸೋತ್ತುಂಗ ಶ್ರೀ ಲೋಕೇಶ್ವರ ದೇವಪಾದಾಬ್ಜಭ್ರಿಂಗ ನಾಮಾದಿ ಸಮಸ್ತ ಪ್ರಶಸ್ತಿ ಸ.

೩೭. ಹಿತಂ ಶ್ರೀಮನ್ಮಹಾಮಂಡಳೇಶ್ವರಂ ಲೋಕರಸರು ॥ ಯಮನಿಯಮ ಸ್ವಾಧ್ಯಾಯಧಾರಣಮೋನಾನು ಷ್ಠಾಣ ಜಪಸಮಾಧಿ ಶೀಳ ಸಂಪ

೩೮. ನ್ನರಪ್ಪ ಶ್ರೀ ಮದಾಚಾರ್ಯ್ಯರಘೋರಶಕ್ತಿ ಪಂಡಿತದೇವರು ॥ ಅಭಿನವ ಶಿವಲೋಕವಿದೆಂಬನ್ತು ನೆಗಳ್ತೆವೆತ್ತ ಸಕಳವಸುಮತೀತಳಕ್ಕೆತಲೆಯಿದನಿ

೩೯. ಸಿ ಸಿಗಳ್ದಿ ಕುಂತಳಮಹೀತಳಕ್ಕೆ ಮುಖವಿದೆಂಬಂತಿದ್ದ ಅರಲ್ಮೂನೂರಕ್ಕೆ ತಿಳಕಮಿರ್ಪ್ಪಂತಿರ್ದ್ದಂ ಧರಾಂಗನಾಕುಚಾಗ್ರಮೆನಿಸಿದ ಪಂದಿರ್ಕೆಯ ಲೋಕೇಸ್ವ

೪೦. ರ ದೇವರ್ಗ್ಗೆ॥ ಊರಿಂ ಬಡಗಲ ಸ್ಥಳವ್ರಿತ್ತಿ ಪಡುವಲು ಕೆರ್ಮ್ಮೊರಡಿಯಲ್ಲಿಂ ಬಡಗ ಚಿಕ್ಕಬೆಟ್ಟದಿಂ ಮೂಡಲು ಮೇರೆಯಾಗಿ ಆಲಕಬ್ಬೆಯ ಬಾವಿ ನಡು ಮ

೪೧. ಧ್ಯವಾಗಿ ಮೂರಲೆರಡುಂ ಪಳ್ಳ ಕೂಡಿಂತು ಮೇರೆಯಾಗಿ ಥಾರೆಯ ಕೊಳ್ಳದಿಂ ಪತ್ತಿರೆ ಮೇರೆಯಿಂ ತೆಂಕಗುಡ್ಡನಹಾಳಿಂ ದೂರವಾಗ್ನೇಯದಲು ನಟ್ಟಕ[ಕ] ಮೇ

೪೨. ರೆಯಿಂದೊಳಗಣ ಭೂಮಿಕಾಲ ಮತ್ತರು ಸಾಸಿರದನೂರುಯದರೊಳಗೆ ಚರುಪ್ರಭುವಿಂಗೆ ದಸವನ್ದಂ ನೂರುನುಳಿಯೆ ನಿಕರಂ ಮತ್ತರು ೧೦೦೦

೪೩. ಬಟ್ಟೆಯ ಭೈರವಂಗೆಯಲ್ಲಿಯ ಮೂಡದೇವಾಲ್ಯದಿಂ ತೆಂಕ ತೋಂಟ ಕಾಲಮತ್ತರು ೩ ಮತ್ತಮೂರಿಂ ಮೂಡಬಡಗಂ ಬೆಟ್ಟತೆಂಕ ಪಳ್ಳಮೇರೆ ಕಾಲಮತ್ತರು [೪೦]

೪೪. ಚೌಡೇಶ್ವರಿಗೆರೆಯಿಂ ಪೊಳಲ್ಕುಂದೆಯ ಬಟ್ಟೆಯಿಂ ತೆಂಕಮುಳ್ಳಿಮೆಯನ ತೀರ್ಥದಿಂ ಪಡುವಲು ಗುಂಡಿಗೆರೆಯಿಂ ಮೇರೆಯಿಂದೊಳಗೆ ಮಸಂಬು ಕಲಮತ್ತರು ೨೦ ಕೋಸ.

೪೫. ನಮಗೆರೆಯಿಂ ಮೂಡ ತಾರಿಯಕುಂದೆಯಿಂದೊಳಗೆ ಮಸಂಬು ಕಾಲಮತ್ತರು ಆಕೆರಿಯಿಂ ಪಡುವಣ ಮಸಂಬು ಕಾಲಮತ್ತರು ೫ ಊರಿಂ ಪ

೪೬. ಡುವಲು ತಾವರೆಗೆರೆಯಿಂ ಪತ್ತಿರೆ ಹಾಲಕೆ[ಯಿ] ಕಾಲಮತ್ತರು ೨೦ ಹೆಗ್ಗಡೆಗೆರೆಯಂ ಪತ್ತಿರೆ ಬಡಗ ಸನ್ನತಿ ಮೇರೆಕಾಲಮತ್ತರು ೨೦ ತಾವರೆಗೆ

೪೭. ರೆಯಿಂ ತೆಂಕ ಕಾಳಿಯಕೆರೆಯ ನಿರ್ನ್ನೆಲಂ ಕಾಲಮತ್ತರು ೧೦ ಮತ್ತಂ ತಾವರೆಗೆರೆಯ ಪತ್ತಿರೆ ಪಡುವಲು ಹೆಗ್ಗಡೆಗೆರೆಯ ಕಾಲಲು ಬೆಳವ ನಿರ್ನ್ನೆಲಂ

೪೮. ಮತ್ತರು ೨ ಊರಿಂ ಮೂಡಕೋಟೆಯಂ ಪತ್ತಿರೆ ಪೂದೋಂಟ ಮತ್ತರು ೨ ಅಲ್ಲಿಂ ಪತ್ತಿರೆ ನಿರ್ನ್ನೆಲಂ ಮತ್ತರು ೨ ದೇವರಂ ಪತ್ತಿರೆ ಬಡಗ ಹಳ್ಳಕಾಲ ನಿರ್ನ್ನೆಲಂ

೪೯. ಮತ್ತರು ೮ ದೇವಾಲ್ಯದಿಂ ಮೂಡಪುರವರ್ಗ್ಗ ಆ ಪುರವರ್ಗ್ಗದಿಂ ಬಡಗ ಪೂದೋಂಟ ಕಾಲಮತ್ತರು ೪ಹುಣಸ ಮಸೆಂಬೆ ೧ ಅಸಗಗೆರೆ ಬಸುರಿಗುಂಟೆ.

೫೦. ಶ್ರೀಮಚ್ಚಾಳುಕ್ಯವಿಕ್ರಮವರ್ಷದ ೪೩ನೆಯ ವಿಲಂಬಿಸಂವತ್ಸರದ ಜೇಷ್ಠಪುಣ್ಣಮಿ ಬುಧವಾರ ಸೋಮಗ್ರಹಣದಲು ಶ್ರೀ ಲೋಕೇಶ್ವರ ದೇ

೫೧. ವರ್ಗ್ಗೆ ಮಹಾಮಂಡಳೇಶ್ವರಂ ಲೋಕರಸರುಂ ಅರಲ್ಕೂನೂರ ಬಳಿಯ ಬಾಡಂ ಗುಂಡಿ ತುರುವಳಿಗೆಯನೆರಡೂರ ಪ್ರಭುತ್ವಮುಂ ಮಂ.

೫೨. ನೆಯಮಮ್ ಧಾರಾಪೂರ್ವ್ವಕಂ ಮಾಡಿಬಿಟ್ಟರು॥ ತೇಜನವೊಲನಂ ಲಂಜೆಹಾಳಲು ಹೊರತೆಂಕ ಚಾಬನಕನಹಳ್ಳಂ ಪಡುವಲು ಕಳಂಜೀಯ ಪಿರಿಯ

೫೩. ಪಳ್ಳ ಬಡಗಲು ಮಾವಿನೊತ್ತಿ [ನ] ಕೊಪ್ಪಲು ಮೂಡಲುಸೊಳಪಳ್ಳಮಿಂತೀ ಚತುಸ್ಸೀಮೆಯಿಂದೊಳಗೆ ಲಾಮತ್ತರು ೫೦೦ಲ ಹಯಚ.

೫೪. ಪನ್ತೆ ಕುಂತಳದನುರ್ಧ್ದರ ದುರ್ದ್ಧರದುದ್ಧುರಾಜಕ ಪ್ರಿಯರಣರಂಗನಾನೆಗ ನ್ರಿಪಾಜನಿಕಾತ್ಮಜರ್ಬಾಳವಂಶ ವಾಕ್‌ಪ್ರಿಯ್ ಮಹಾದೇವಿ ತಾ.

೫೫. ಯಗಡ ಕುಲಂ ಚಲಮರ್ಮ್ಮರಿವಾರ್ಪ್ಪಿವರ್ಕ್ಕೆಮಾಶ್ರಯಮೆನಿಸಿರ್ದ್ದ ಪೆಂಪು ಬಣ್ಣಿಸಬುರ್ಕ್ಕುಮೇ ಲೋಕಭೂಪನ॥ ಲೋಕಸಮರ್ತ್ಥನಿದೊದಿಯಾಗಿ

೫೬. ಚುಕ್ತಿ ಶಾಸನಮಾಗಿಯುಂಡ ಭೂಮಿಯಂ ಸಾಸನಂಬೋಯ್ಸಿ ಪ್ರಥಿಷ್ಟೆಯ ಮಾಡಿ ನಿಲಿಸಿದ॥ ಸರ್ವ್ವನಮಸ್ಯ॥ ನೈಷ್ಟಿಕಮತಕ್ಕಾಚಾರ್ಯ್ಯರುಂ ಮ

೫೭. ನ್ನೆಯವಳಿಯಾಗಿ ಕಾಳಾಮುಖನೈಷ್ಟಿಕ ತಪೋಧನರಾಗವೇಳ್ಕುಂ॥ ದೇವರಂಗಭೋಗಕ್ಕಂ ಪೂಜೆಗಂ ತಪೋಧನರಾಹಾರದಾನಕ್ಕಂ ಕನ್ನಡಕ್ಕರ ವೋದುವ ವಿದ್ಯಾರ್ಥಿಮಾಣಿಗಳ್ಗೆ.

೫೮. ಗಳಿಗವೋಧಿಸುವುಪಾಧ್ಯಾಯರ್ಗ್ಗಂ ಜೀರ್ಣ್ಣೋದ್ಧಾರಕಂ ಪಾತ್ರಪಾವುಳಕ್ಕಂ ಕಂಬದ ಸೂಳೆಯರ್ಗ್ಗಂ ಮಠದಾಚಾರ್ಯ್ಯರಿನಿತುಮಂ ನಡೆಯಿಸುವರು॥

೫೯. ಅದರಾಳ್ಕೆಯ ಸಾಮಂತರುಂ ಅಲ್ಲಿಯಪ್ರಭುವುಂ ನಾಡಮನ್ನೆಯರುಂ ಮೀ ಧರ್ಮ್ಮಕ್ಕಪಾಯವಂ ಬೆಗೆದು ಕಿಡಿಸಿದರಪ್ಪಡೆ ಹನ್ನೆರಡು ಹಳ್ಳಿಯ ಪ್ರಭು.

೬೦. ಗಾವುಂಡಗಳುಂ ಕಿಡುವರು॥ ಈ ಧರ್ಮ್ಮಕ್ಕನುಕೂಳರಾದರ್ಗ್ಗೆ ಪ್ರಯಾಗೆ ವಾರಣಾಸಿಯರ್ಗ್ಘ್ಯತೀರ್ತ್ಥಂ ಕುರುಕ್ಷೇತ್ರದಲು ಸಾಯಿರರಕವಿಲೆಯಂ ವೇದ

೬೧. ಪಾಗರಪ್ಪಬ್ರಾಹ್ಮಣರ್ಗ್ಗೆ ಸೂರ್ಯ್ಯಗ್ರಹಣದಲು ಕೊಟಟ ಫಲಮನಯ್ದುವರು॥ ಈ ಧರ್ಮಕ್ಕೆ ಪ್ರತಿಕೂಳರಾದರ್ಗ್ಗೆ ವಾರಣಾಸಿ

೬೨. ಯರ್ಘ್ಯತೀರ್ತ್ಥ ಕುರುಕ್ಷೇತ್ರದಲು ಸಾಯಿರ ಕವಿಲೆಯನು ವೇದಪಾರಗರಪ್ಪ ಬ್ರಾಹ್ಮಣರುಂಮಂ ಕೊಂದ ಪಾತಕಮನೆಯ 'ಯ್ದುವರು॥ ಬಹುಭಿರ್ವಸುಧಾ

೬೩. ದತ್ತಾರಾಜಭಿಃರ್ಯ್ಯಸ್ಯಯಸ್ಯಯದಾಭೂಮಿಸ್ತಸ್ಯ ತಸ್ಯ ತದಾ ಫಲಂ॥ ಸಾಮಾನ್ಯೋಯಂ. . . .. .. . . . ೬೪. ನಿಯೋ ಭವದ್ಭಿಃ ಸರ್ವ್ವಾನೇತಾನ್ಭಾವಿನಃ.. . . . . ರಾಮಚಂದ್ರಃ॥ ಸ್ವದತ್ತಾ ಪರದತ್ತಾ ವಾಯೋಹರೇ

೬೫. ತಿ ವಸುಂಧರಾಂ ಷಷ್ಟಿರ್ವ್ವರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ॥ ಅರಲ್ಮೂನೂರರ ಕರಣಂ ನಾಗದೇವಂ ಬರೆವ ಮಂಗಳ ಮಹಾ ಶ್ರೀ ಶ್ರೀ.

೬೬. ಶ್ರೀ ಮಚ್ಚಾಳುಕ್ಯ ವಿಕ್ರಮವರ್ಷದ ೪೬ನೆಯ ಪ್ಲವಸಂವತ್ಸರದ ಚೈತ್ರ ಪುಣ್ಣಿಮಿ ಸೋಮವಾರ ಸೋಮಗ್ರಹಣ ನಿಮಿತ್ಯದಿಂ ಸಾಂತಲದೇ

೬೭. ವಿಯರ ಬೆಸದಿಂ ಹೆಗ್ಗಡೆ ಚಂದಿರಾಜಯ್ಯಂ ಹಂದಿರ್ಕೆಯಂ ಗಡಿಯಿಂ ತೆಂಕಣಾಳಿಗೆ ವರ್ದ್ಧಿಂ ಪಡುವಲು ಅರಮನೆಯಿಂದೀಶಾನ್ಯದಲೊಂದು ಮನೆಯ ನಿವೇಶ

೬೮. ನದಿಂ ಮೂಡಣಗಡಿಯ ನಿವೇಶನವೊಂದಂ ಧಾರಾಪೂರ್ವ್ವಕಂ ಮಾಡಿಬಿಟ್ಟರು ಪ್ರಭುದೇವರ ಸೊಡೆರೆಣ್ಣೆಗೆ ಕಾಣಿಯಲೆರಡಂ ಬಿಟ್ಟರು॥ ಅನ್ವಯ

೬೯. ದೆ ಆಂ ಧರ್ಮವನಿನ್ನೂರ್ಜ್ಜಿತವೆನಿಪ್ಪೆನೆಂದು ಆನೆಗ ಪೆ[ಸರ]ತುನ್ನಪ್ಪ ಹಸದೆ ಕೊಟ್ಟಂ ಮಂನಿಸಿ ಆನೆಮಗೆರೆ ಮಾದ್ದೇ.

೭೦. ಯಾಗಿ [ಭೂಬಂತು] ಹಾಣದಿಯಿಂ ಮೂಡನಿವೇಶನಂ ಸರ್ವ್ವನಮಸ್ಯ॥ ರೇವಣೇಶ್ವರದ ಗದ್ದೆಯಿಂ ಬಡಗಲು ಪೂದೋಂಟ ಮತ್ತರು ೧ ಅಲ್ಲಿ ಪುಲ್ಲಿರೆ ನಿರ್ನ್ನೆಲಂ ಮತ್ತರು.

## ೧೨. ಹಗರಟಗಿ ಕ್ರಿಶ.೧೧೨೬

ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ಈ ಹಗರಟಗಿ ಗ್ರಾಮದ ಪಶ್ಚಿಮಕ್ಕೆ ಕಳ್ಳನಗುಡಿ ಎಂದು ಕರೆಯಿಸಿಕೊಳ್ಳುವ ಸ್ಥಳದಲ್ಲಿ ಈ ಶಾಸನವಿದೆ. ಶಹಬಾದ್ ಕಲ್ಲಿನ ಮೇಲೆ ಕೆತ್ತಿದ ಈ ಶಾಸನ ಇತ್ತೀಚೆಗೆ ಒಡೆದು ೩-೪ ತುಕಡಿಗಳಾಗಿದ್ದು, ಮೇಲ್ಬಾಗ ಕಳೆದು ಹೋಗಿದೆ ೪' * ೨' ಗಾತ್ರದ ಕಲ್ಲಾಗಿದ್ದು ಚಿತ್ರಗಳಿಲ್ಲ. ಶಾಸನದ ಪಠ್ಯ ತುಂಬ ದೋಷಪೂರ್ಣವಾಗಿದ್ದು ಲಿಪಿಸಾಮ್ಯದಿಂದಾಗಿ ಸುಮಾರು ೧೨ನೆಯ ಶತಮಾನದ್ದೆಂದು ಹೇಳಬಹುದು. ಚಕ್ರವರ್ತಿಯ ಉಲ್ಲೇಖವಿಲ್ಲ. ಚಂದಿಮರಸ ಹಗರಿಟ್ಟಗೆಯ ಮಲ್ಲಿಕಾರ್ಜುನದೇವರಿಗೆ ಬಿಟ್ಟ ದತ್ತಿಯನ್ನು ಮತ್ತು ಸುಂಕದತ್ತಿಯನ್ನು ತಿಳಿಸುತ್ತದೆ. ಪ್ರಸ್ತುತ ಶಾಸನದ ೮ ರಿಂದ ೧೦ನೆಯ ಸಾಲುಗಳಲ್ಲಿ ಬರುವ "ಚಳುಕ್ಯ ವಿಕ್ರಮ ವರ್ಸದ ೫೦ನೆಯ ವಿಸ್ವ[ವಸು] ಸಂವಚ್ಚರದ ಮಗದ ಪುಣ್ಣಮೆ ಸೋಮಗ್ರಹಣಂ ಸೋಮವರದಂದು" ಎನ್ನುವ ಮಿತಿಯು ಕ್ರಿ.ಶ.೧೧೨೬ ಜನವರಿ ೧೧ ಕ್ಕೆ ಸರಿಯಿದೆ.

೧. ಬಹುಯ ನಿಯು ಸಾಧ್ಯ ಧ್ಯಾನ ಧಾರಣ ಯಮಾನ ಸುಚಿ

೨. ಗೋಜ ನಾಮಾದಿ ಸಮಸ್ತ ಸಂಪನ್ನರು ಪ್ರಸನಗೋತ್ರ ದ್ವಿಜಗುರು

೩. ದಿವಪ್ಪ. . . .ಪರರು ಲನಾಯ ಓಹು ಪ್ರತಿಹುಗಹನಪ್ಪ ತಿಗಿ

೪. ತಸ ತಿಳರು ಸಕಲದತ್ತ ವಿಪ್ರರ ನಿವಾನೂರು ಸದ್ಗುಣ ನಿರುತರು

೫. ರಪ್ಪನ್ನಿಮತು ಸರ್ವ್ವಾನಗ್ರಹಾರಂ ಹಗರಿಟ್ಟಗೆಯ ತಿಸ

೬. . . . ಗಾ ಸರ್ವ್ವರು ಶ್ರೀಮತು ಪರ. . ಚಂದಿಮರಸನಾ. . . .

೭. . . . ಯ್ಯಣ ಮಡಿಸಿದ ಶ್ರೀಮತು ಮಲ್ಲಿಕಾರ್ಜುನದೇವ

೮. . . . ಸ್ತಿ ಶ್ರೀಮತು ಚಳುಕ್ಯ ವಿಕ್ರಮ ವರಿಸದ ೫೦ ನೆಯ

೯. ವಿಸ್ವ [ವಸು]ಸಂವಚ್ಛರದ ಮಗದ ಪುಣ್ನಮೆ ಸೋಮಗ್ರಹಣಂ ಸೋ

೧೦. ಮವರದಂದು ವೆಸ ಶ್ರೀಮತು ಲಕ್ಕಣೇಸರದೇವರ ಲೋಕ

೧೧. ಯ ಕೆರೆಯ ಪಿಂದೆ ತೋಟ ಮತ್ತರು ೧

೧೨. ಅನ್ತು ಬರವರಸರ ಪುತ್ರ. . ಯ ಷಷ್ಟಿನಿಕರಸ ಮಗ

೧೩. ಳು ಚೆಬರಸಿಗೆ ಉಪಿನಕೆರೆಯಲಿ ಉಪ್ಪು ಕೊಣ್ಡಲಿ

೧೪. ಒಬಳ ಕೊಟ್ಟಲಿ ಒಬಳ ಚಂದಿಗೌಡನು ಲೆಂಚಗೌಡನು

೧೫. ಬಂಮಗೌಡನು ಎಹವಲು ಗೌಡನ ತತಗತನುಂ

೧೬. ಬಿಟ್ಟ ಗಳು ಬಿಟ್ಟ ಧಮ ಕೊಣ್ಡಲಿ ಒಬಳಂ ತುಪ್ಪ ಕೊ

೧೭. ಟ್ಟಲಿ ಒಬಳ ಮುಟ ಯ ಯೆಂ ತೊಗರಡು ಬದ್ರಮ

೧೮. ಆದಿತನು ಪಳಹನ ಈ ಧರ್ಮ್ಮವ ನತಿಯುಂ ಒಬನಿಳ

೧೯. ದ ಕವಲೆನೆ ಸಾಯಲು ಬ್ರಮಳನುಂ ಕವಿಲೆಯು

೨೦. ನಳಿದ ದೋಸಂ ಸಂಗು॥

**೧೩. ಮುದನೂರು(ಸುರಪುರ ತಾ., ಯಾದಗಿರಿ) ಕ್ರಿ.ಶ.೧೧೨೯**

ಹಿರಿಯ ಮುದನೂರಿನ ರಾಮನಾಥ ದೇಗುಲದ ಒಳಗಿನ ಗೋಡೆಯ ಕಲ್ಲಿನಲ್ಲಿ ಈ ಶಾಸನವನ್ನು ಕೆತ್ತಲಾಗಿದೆ. ಕಲ್ಯಾಣ ಚಾಲುಕ್ಯ ಚಕ್ರವರ್ತಿ ಮೂರನೆಯ ಸೋಮೇಶ್ವರನ ಅಳಿಕೆಯ ಕಾಲವನ್ನು ಹೇಳುತ್ತದೆ. ಮಹಾಮಂಡಲೇಶ್ವರ ಮಲ್ಲಿರೇವರಸರು ಅಗ್ರಹಾರ ಮುದಿನೀರ ಊರೊಡೆಯ ಹಾಗೂ ಐದುನೂರು ಮಹಾಜನರು ಉತ್ತರಾಯಣ ಸಂಕ್ರಾಂತಿ ನಿಮಿತ್ತವಾಗಿ ಮಾರ್ಕಂಡೇಶ್ವರದೇವರ ಪೂಜೆ, ಅಂಗಭೋಗ, ನೈವೇದ್ಯಗಳಿಗಾಗಿ ಭೂಮಿಯನ್ನು ಗಾಣವನ್ನೂ ದತ್ತಿಯಾಗಿ ಕೊಟ್ಟಿದ್ದಾರೆ. ನಕರರು, ಸೊಲ್ಲಿಗ ಸಮಯಗಳು ನೀಡಿದ ದಾನವೂ ಮಹಾಸಾಮಂತ ಹಂಡೆಯನಾಯಕ, ಹೆಗ್ಗಡೆ ಬಮ್ಮೆಯನಾಯಕ, ಹಗರಿಟ್ಟಗೆನಾಡಸೆಟ್ಟಿ, ಹೆರ್ಜುಂಕದ ಸುಂಕವೆರ್ಗಡೆ ನಾಗೆಯನಾಯಕರು ಬೊಲ್ಕೊಡೆ, ಸೆಟ್ಟಿದರೆ, ವಡಾ ್ದರಾವುಳ, ಎತ್ತಿನೊಕ್ಕಸಾರಿಗೆಯ ಬೀರವಣ, ಸೇಸೆ, ಇತ್ಯಾದಿಗಳನ್ನು ದತ್ತಿಯಾಗಿ ಬಿಟ್ಟ ಉಲ್ಲೇಖವೂ ಇಲ್ಲಿರುತ್ತದೆ. ಸಾಲು ೧೫-೧೬ ರಲ್ಲಿ ಬರುವ "ಶ್ರೀಮಚಾಲುಕ್ಯ ವಿಕ್ರಮ ವರ್ಷದ ೫೪ ನೆಯ ಸೌಮ್ಯ ಸಂವತ್ಸರದ ಪುಷ್ಯ ಸು ೧೨ ಸೋಮವಾರದಂದಿನುತ್ತರಾಯಣ ಸಂಕ್ರಾನ್ತಿ". ಮಿತಿಯು ಕ್ರಿ.ಶ.೧೧೨೯ ಡಿಸೆಂಬರ್ ೨೪ ಗುರುವಾರಕ್ಕೆ ಸಮಾನವಾಗಿರುತ್ತದೆ. "ಮಂಡಗೆ" (ಗ್ರಾಮನಾಮ) ಹಾಗೂ "ಸೊಲ್ಲಿಗ, ಸಮಯ" ಪದಗಳು ಗಮನಿಸುವಂಥವಾಗಿವೆ.

೧. ಸ್ವಸ್ತಿ[ ।* ] ಶ್ರೀ ಜಯಾಭ್ಯುದಯಶ್ಚ॥ ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀಪ್ರಿಥ್ವೀವಲ್ಲಭ

೨. ಮಹಾರಾಜಾಧಿರಾಜಂ ಪರಮೇಶ್ವರಂ ಪರಮಭಟ್ಟಾರಕಂ ಸತ್ಯಾಶ್ರಯ ಕುಳತಿಳಕಂ ಚಾ-

೩. ಳುಕ್ಯಾಭರಣಂ ಶ್ರೀಮದ್ಭೂಲೋಕಮಲ್ಲದೇವರ ವಿಜಯರಾಜ್ಯ ಮುತ್ತರೋತ್ತರಾಭಿವ್ರಿ

೪. ದ್ಧಿ ಪ್ರವರ್ಧಮಾನಮಾ ಚಂದ್ರಾರ್ಕ್ಕತಾರಂಬರಂ ಕಲ್ಯಾಣದ ನೆಲೆವೀಡಿನಲು ಸುಖಸಂಕಥಾ

೫. ವಿನೋದದಿಂ ರಾಜ್ಯಂ ಗೆಯ್ಯುತ್ತಮಿರೆ [ ॥*] ತತ್ಪಾದ ಪದ್ಮೋಪಜೀವಿ[॥*] ಸ್ವಸ್ತ್ಯನೇಕ ಭಂಗುರ ತರತ್ತರಂಗ ಸಂಭೂ

೬. ತವೀಛಿಚ್ಛಯ ಲವಣಾಬ್ಧಿ ವಳಯ ವಳಯಿತ ವೇಳಾವನ ಗಂಗಾತೀರ ಪಾರಿಯಾತ್ರ ತನ್ಮಧ್ಯದೇ............

೭. ಶ್ವರಂ ಮಾಹಿಷ್ಮತೀಪುರವರಾಧೀಶ್ವರಂ ಕಾರ್ತ್ತಿವೀರ್ಯ್ಯಕುಳಾನ್ಮವ (ನ್ವಯ) ಸ (ಶ) ರತ್ನಮೆಯ ಸಂಪೂರ್ನ್ನ ಚಂದ್ರವಿಭ

೮. ವಾಮರೇಂದ್ರ ............ .ಸತ್ಯಮಾಂದಾತಂ ಸತ್ಯವಿಖ್ಯಾತಂ ಕ್ಷತ್ರಿಯ ಪವಿತ್ರ ಕದನ ತ್ರಿಣೇತ್ರ..

೯. ಕಂ ಶ್ರೀಗಾತಾಭಾರ್ಯ್ಯಂ ಮಂದರಧೈರ್ಯ್ಯಂ ಏಕಾಂಗವೀರಂ (೦*) ಮದನಾವತಾರಂ ಗುಣಮಣಿಭೂಷಣ. ೧೦. ಲ ಪರೆಘೋಷಣಂ ಚತುಸ್ಸಮುದ್ರ ಪರ್ಯ್ಯಂತ ಕೀರ್ತ್ತಿ ವಿಖ್ಯಾತಂ ಶೋಭನದೀಜಾತಂ ವಿದ್ವಿಷ್ಟಗ.............ಕಂ

೧೧. ಠೀರವು(೦*) ಮಾರ್ಕ್ಕಾಲಭೈರವಂ ರಿಪುಮಂಡಳಿಕ ಸರಭ ಭೇರುಂಡ (೦*) ಜಗದೋವ್ವಗಂಡನಾ ಶ್ರಿತಜ

೧೨. ನ ಚಿಂತಾಮಣಿ ಮಂಡಳಿಕಮಕುಟ ಚೂಡಾಮಣಿಯಾಳಿಂ ಮುಂನ್ನಿರಿದವೈರಿ ಚತುರಂಗಬಲ ಮನೇಕಾಂ

೧೩. ಗದೊಳ್ಗೆಲ್ದರಿ ಭೂಪಾಲರ ಶಿರಮಂ ಪರಿದಿಕ್ಕುವ ಶರಣಾಗತ ವಜ್ರಪಂಜರಂ ವೈರಿ ದಿಕ್ಕುಂಜರಂ

೧೪. ಶ್ರೀಮನ್ಮಹಾಮಂಡಳೇಶ್ವರಂ ಮಲ್ಲಿರೇವರಸರುಂ ಶ್ರೀಮದಗ್ರಹಾರಂ ಮುದಿನೀರೂರೊಡೆಯಪ್ರಮು

೧೫. ಖ ಮಹಾಜನಂಗಳಯ್ನೂರ್ಬ್ಬರುಂ ಸ್ವಸ್ತಿ ಶ್ರೀಮಚ್ಚಾಲುಕ್ಯ ವಿಕ್ರಮ ವರ್ಷದ ೫೪ನೆಯ ಸೌಮ್ಯ

೧೬. ಸಂವತ್ಸರದ ಪುಷ್ಯ ಸು ೧೨ ಸೋಮವಾರದಂದಿನುತ್ತರಾಯಣ ಸಂಕ್ರಾನ್ತಿಪರ್ಬ್ಬನಿಮಿತ್ತದಿಂ

೧೭. ಶ್ರೀಮಾರ್ಕ್ಕಂಡೇಶ್ವರದೇವರ ಪೂಜೆಪುರಸ್ಕಾರಕ್ಕಂ ದೇವರಂಗಭೋಗನಿವೇದ್ಯಕ್ಕಂ ಧಾರಾಪೂರ್ವ್ವಕಂ

೧೮. ಮಾಡಿಬಿಟ್ಟ ಬಡಗವೊಲದ ಎಳಗೆಯ ದಾರಿಯಿಂ ಪಡುವ ವೂರೊಡೆಯರ ಮಾನ್ಯದಿಂ ತೆಂಕ ಬಿಟ್ಟ ಕೆ

೧೯. ಯಿ ಮತ್ತರು ೧೨ [।*] ಬಬ್ಬುಲಿಗಟ್ಟೆ ಮೂಡಲ ಕೆಯಿಂ ಮೂಡಣ ಬೆಳೆಯ ಸೂಳು ಸಹಿತ ಬಿಟ್ಟಗದ್ದೆ. ೨೦. ಕಮ್ಮಂ ೪೦೦ [।*] ದೇವರ ನಂದಾದೀವಿಗೆಗೆ ಬಿಟ್ಟ ಗಾಣ ೧[।*] ನಖರಂಗಳು ಅಂಗಡಿಯಲು ಬಿಟ್ಟ ಸೊಂಟಿಗೆ ಜೋಳಮಾ

೨೧. ನ ೧[।*] ಅಂಗಡಿಯಲು ಚೈತ್ರದಲು ವೀಸ ೫ ಚೈತ್ರದಲು ವೀಸ ೫ [।*] ಸೊಲ್ಲಿಗ ಸಮಯಂಗಳು ಬಿಟ್ಟಧ

೨೨. ರ್ಮ್ಮಹಟ್ಟೆಗೆ ಅರಿವೀಸ [।*] ಶ್ರೀಮನ್ಮಹಾಮಂಡಳೇಶ್ವರಂ ಮಲ್ಲಿರೇವರಸರು ಮಂಡಗೆಯ ರಾಮಿಸೆ

೨೩. ಟ್ಟಿ ಎತ್ತಿನೊಕ್ಕ ೧ ರ ಬಿಲ್ಕೊಡೆ ಕಾಹುಕಾಣಿಕೆ ಸೇಸೆ ನಾಡೋಪಾದಿ ಮೂಲೆಗ್ರಾಸವೊಳಗಾಗಿವಾಗೆ

೨೪. ಯೆರೆದು ಕೊಟ್ಟರು [।*] ಸಗರ ೫೦೦ ರುಂ ಬಾಡದ ಚು(ಕೇ)ಣಿಕಾರರಕು ಕೋಲ್ಕಾರರಕ್ಕು ಅಡ್ಡಂ ಬರ ಸಲ್ಲ ಪೆ

೨೫. ರ್ಜುಂಕದ ಸುಂಕವರ್ಗ್ಗಡೆ ಮಾದೆಯ ನಾಯಕ ಮಂಡಗೆಯ ರಾಮಿಸೆಟ್ಟಿಯ

೨೬. ಕಾಣಿಕೆ ............ ಪೆರ್ಜುಂಕ ಮೂಲೆಗ್ರಾಸವೊಳಗಾಗಿ ಸಗರ ೫೦೦ ರುಂ ಬಾಡದಲು ಅಡ್ಡಂ ಬರ ಸಲ್ಲಶ್ರೀ

೨೭. ಮನ್ಮಹಾಸಾಮಂತರ ಹಂಡೆಯನಾಕನುಂ ಹೆರ್ಗ್ಗಡೆ ಬಂಮ್ಮೆಯ ನಾಯಕನುಂ ಮಂಡಗೆಯ

೨೮. ಸೆಟ್ಟಿಯ ಎತ್ತಿನೊಕ್ಕ ೧ ರ ಕಾಹುಕಾಣಿಕೆ ಸೇಸೆ ಬಿಳ್ಕೊಡೆ ಮೂಲೆ ನಾಡೋ ಪಾದಿ ಗ್ರಾಸವೊಳಗಾಗಿ

೨೯. ಬಿಟ್ಟ ಗ ೩೦೦ ರರಲು ಸಲ್ವಂತಾಗಿ ಧಾರೆಯೆರದು ಕೊಟ್ಟರು [॥*] ಹಗರಿಟ್ಟಗೆ ನಾಡಸೆಟ್ಟಿ ಮೂಲಿಸೆಟ್ಟಿ ಎತ್ತಿ

೩೦. [ನೊಕ್ಕ*] ೧ ರ ಸೆಟ್ಟಿದೆರೆಯಂ ಧಾರೆಯೆರದು ಕೊಟ್ಟ [।*] ಹಗರಿಟ್ಟಗೆ ನಾಡ ಹೆರ್ಜುಂಕದ ಸುಂಕವೆರ್ಗಡೆನಾ–

೩೧. [ಗೆಯ] ನಾಯಕಂ ಮಂಡಗೆಯ ರಾಮಿಸೆಟ್ಟಿಯ ಎತ್ತಿನೊಕ್ಕ ೧ ರ ಕಾಹು ಕಾಣಿಕೆ ............ ಹೆರ್ಜುಂಕ ಮೂಲೆ

೩೨. ಗ್ರಾಸವೊಳಗಾಗಿ ಹಗರಿಟ್ಟಗೆ ೩೦೦ರ ಒಳಗಡ್ಡಂ ಬಾರದಂತಾಗಿ ಧಾರೆಯೆರದು ಕೊಟ್ಟ ಬಾಗಿಲ ರೇವೆಯ ನಾಯ

೩೩. [ಕನುಂ ಮಂಡಗೆಯ ರಾಮಿಸೆಟ್ಟಿಯ] ಎತ್ತಿನೊಕ್ಕ ೧ ಕ್ಕೆ ಸಗರ ೫೦೦ ರುಂ ಬಾಡದ ವಡ್ಡರಾವುಳಮಂ ಬಿಟ್ಟ ಬಿ ............

೩೪. ............ ೧ ಕ್ಕೆ ಎತ್ತಿನೊಕ್ಕಂ ಸಾರಿಗೆ ಬೀರವಣ ಸೇಸೆ ಇನಿಸುವಂ ಬಿಟ್ಟ ಮ ............

೩೫. ......................................

೩೬. ಇನ್ತೀ ಧರ್ಮ್ಮಮಂ ಪ್ರತಿಪಾಳಿಸಿದವರ್ಗ್ಗೆ ವಾರಣಾಸಿ ಕುರುಕ್ಷೇತ್ರದಲು [ಚತುರ್ವ್ವೇದ ಪಾರಗರಪ್ಪ ಬ್ರಾಹ್ಮಣರಿಗೆ]

೩೭. [ಸಹಸ್ರ] ಕವಿಲೆಗಳಂ ಕೊಟ್ಟ ಫಲಮಕ್ಕು ॥ ಈ ದರ್ಮ್ಮವಂ ಕಿಡಿಸಿದಾತಂಗೆ ಆ ತೀರ್ತ್ಥ[ದಲು ಬ್ರಾಹ್ಮಣರುಮಂ ಸಹಸ್ರ ಕವಿಲೆಗಳಂ]

೩೮. ಕೊಂದ ಮಹಾಪಾತಕಂ ಸಾರ್ಗ್ಗುಂ [॥*] ಮಂಗಳ ಮಹಾ ಶ್ರೀ ಶ್ರೀ ಶ್ರೀ [॥*]

**೧೪. ನಾದ ಕ್ರಿ.ಶ.೧೧೩೪**

ವಿಜಯಪುರ ಜಿಲ್ಲೆಯ ಇಂಡಿ ತಾಲೂಕಿನ ನಾದ ಎಂಬ ಗ್ರಾಮದ ಈ ಶಾಸನದಲ್ಲಿ ಕಾಲವು ಭೂಲೋಕಮಲ್ಲ ವರ್ಷ ೯, ಆನಂದ ಸಂವತ್ಸರ, ಕಾರ್ತಿಕ, ಸು೬, ಬೃಹವಾರಯೆಂದಿದ್ದು ಇದು ಕ್ರಿ.ಶ.೨೫.೧೦.೧೧೩೪ಕ್ಕೆ ಸರಿಹೊಂದುತ್ತದೆ. ಮೂವತ್ತಾರು ಬಾಡದ ಹಳ್ಳಿ ಚಿಕ್ಕನಾಡ ಪ್ರಭುವಾದ

ಚಂಡಿಮರಸನು ಚಂಡೇಶ್ವರ ದೇವರ ಪ್ರತಿಷ್ಠೆಯನ್ನು ಮಾಡಿ, ಆ ದೇವರ ಪೂಜೆ-ಪುನಸ್ಕಾರ, ನೈವೇದ್ಯಕ್ಕೆ ೯ ಮತ್ತರು ಭೂಮಿ, ೧. ಗಾಣ, ೧ ಮತ್ತರು ತೋಟ, ದೇವಾಲಯದಿಂದ ಪಶ್ಚಿಮಕ್ಕೆ ೧೦ ಕಯ್ಯ ಅಗಲ ೧೫ ಕೈಉದ್ದದ ನಿವೇಶನವನ್ನು ದಾನ ಬಿಡುತ್ತಾನೆ. ನಾಡು ಮತ್ತು ಮುಂಮುರಿದಂಡಗಳು ಕೂಡ ಹೊಂಗೆಯನ್ನು ಮಾರಿದರೆ, ಕೊಂಡರೆ ಇಂತಿಷ್ಟು ಹಣವೆಂದು ನಿಗದಿಪಡಿಸಿ ದಾನ ಬಿಟ್ಟ ಉಲ್ಲೇಖವಿದೆ.

೧. @ ಶ್ರೀ ನಮಸ್ತುಂಗ ಸಿರಶ್ಚುಂಬಿ ಚಂದ್ರಚಾಮರ ಚಾರವೇ ತ್ರೈಲೋಕ್ಯ ನ

೨. ಗರಾರಂಭ ಮೂಲಸ್ತಂಭಯ ಸಂಭವೇ॥ @ ಸ್ವಸ್ತಿ ಸಮಸ್ತ ಭು

೩. ವನಾಶ್ರಯ ಶ್ರೀ ಪ್ರಿಥ್ವೀವಲ್ಲಭಂ ಮಹಾರಾಧಿರಾಜಂ ಪರಮೇಶ್ವರ ಪ

೪. ರಮಭಟ್ಟಾರಕಂ ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಣಂ

೫. ಶ್ರೀಮತ್ಸರ್ವ್ವಗ್ನ, ಚಕ್ರವರ್ತಿ ಭೂಲೋಕಮಲ್ಲದೇವ ವರ್ಷದ ೯ನೇಯನಂದ ಸಂ

೬. ವತ್ಸರದ ಕಾರ್ತ್ತಿಕ ಸುದ್ಧ [೬] ಬೃಹವಾರದಂದು ಮೂವತ್ತಾರುಂ ಬಾ

೭. ಡದ ಬಳಿಯ ಬಾಡಂ ಚಿಕ್ಕನಾ[ಡ] . . ಪ್ರಭು ಚಂಡಿಮರಸನು ಶ್ರೀ

೮. ಚಂದೇಶ್ವರದೇವರ ಪ್ರತಿಷ್ಠೆಯಂ ಮಾಡಿ ಆ ದೇವರ ಖಂಡಸ್ಪುಟಿತ

೯. ಜೀರ್ಣ್ಣೋಧಾರ ಪೂಜೆಮುನಸ್ಕಾರ ನೈವೇದ್ಯಕ್ಕೆ ಸರ್ವ್ವನಮಶ್ಯವಾಗಿ

೧೦. ಧಾರಾಪೂರ್ಬ್ಬಕಂ ಮಾಡಿ ಬಿಟ್ಟ ಮತ್ತರು ೯ ಗಾಣ ೧ ತೋಂಟ ಮ

೧೧. ತ್ತರು ೧ ದೇವಾಲ್ಯಯದಿಂ ಪಡುವಲು ೧೦ ಕಯ್ಯ ಅಗಲ ನೀಳ ೧೫ ನಿವೇಶನ

೧೨. ನಾಡು ಮುಂಮುರಿದಂಡಂಗಳು ಬಿಟ್ಟರು ಹೊಂಗೆ ಕೊಟ್ಟಲ್ಲಿ ಮಾ

೧೩. ನ ೧ ಕೊಂಡಲ್ಲಿ ಮಾನ ೧ ಹೇರಿಂಗೆ ೨೫ ಎಲೆ ಹೊಂಗೆ

೧೪. ೨ ಅಡಕೆ ॥ @

**೧೫. ಮನಗೋಳಿ**

ಸಿದ್ದರಾಮಯ್ಯ ದೇವಾಲಯದ ಒಂದು ಕಲ್ಲಿನ ಮೇಲೆ On a Slab in the Siddharamayya temple [B.K. No. 100 of 1929-30; SII.XV. 24] This is dated Jagadekamalla, Dundubhi, Kartika, su. Ekadasi, Somavara which corresponds November 2, A.D. 1142, Sunday. The beginning of the record is lost. Gives the genealogy of Chalukyas from Tailapa upto Jagadekamalla III. Refers to the subordinate Dandanatha Bramhadeva and a merchant Sovisetti, son of Chettisetti and grandson of Bammisetti.

Sovisetti's family is referred as Svetavaisya Kula. States that this Vaddvyavahari Sovisetti caused the Vishnu icon as well as the gold Kalasa to the temple of the god Jagannatha. Refers to the grant of land bt Sovisetti, to the daily worship of the north facing god Kesava at the centre of village Muttage. Also records the grant of land and the boundaries of the land granted by some more persons of the village to the same god Kesava.

ಶಾಸನೋಕ್ತ ಕಾಲವು ಜಗದೇಕಮಲ್ಲ ಐದನೆಯ ವರ್ಷ, ದುಂದುಭಿ, ಕಾರ್ತಿಕ, ಶು.೧೧, ಸೋಮವಾರವೆಂದಿದ್ದು ಇದು ಕ್ರಿ.ಶ. ೧-೧೧-೧೧೪೨ಕ್ಕೆ ಭಾನುವಾರಕ್ಕೆ ಸಮನಾಗುತ್ತದೆ. ಶಾಸನದ ಆರಂಭದ ಭಾಗ ಹಾಳಾಗಿದ್ದು, ಕುಂತಳದೇಶವನ್ನಾಳಿದ ಚಾಳುಕ್ಯರ ತೈಲಪನಿಂದ ಮೂರನೆಯ ಜಗದೇಕಮಲ್ಲನವರೆಗೆ ನೀಡಲಾಗಿದೆ. ಜಗದೇಕಮಲ್ಲನ ದಂಡನಾಥ ಬ್ರಹ್ಮದೇವ. ಇವನ ಆಳ್ವಿಕೆಯಲ್ಲಿ ಸೋಮಿಸೆಟ್ಟಿಯೆಂಬುವವನಿದ್ದ. ಇವನ ತಂದೆ ಚೆಟ್ಟಿಸೆಟ್ಟಿ, ತಾತ ಬಮ್ಮಿಸೆಟ್ಟಿ. ಇವರನ್ನು ಶಾಸನವು ಶ್ವೇತವೈಶ್ಯಕುಲದವರೆಂದು ಕರೆದಿದೆ. ಈ ವಡ್ಡವ್ಯವಹಾರಿ ಸೋವಿಸೆಟ್ಟಿ ವಿಷ್ಣುಪ್ರತಿಮೆಯನ್ನು ಮಾಡಿಸಿದ್ದಲ್ಲದೆ, ತನ್ನ ತಂದೆ ಚೆಟ್ಟಿಸೆಟ್ಟಿ ಕಟ್ಟಿಸಿದ್ದ ಜಗನ್ನಾಥ ದೇವಾಲಯದ ಹೊನ್ನಕಲಸವನ್ನು ಮಾಡಿಸಿದವನಂತೆ. ಅಲ್ಲದೆ ಮುತ್ತಗೆಯ ಊರ ಮಧ್ಯಭಾಗದಲ್ಲಿದ್ದ ಉತ್ತರಕ್ಕೆ ಮುಖ ಮಾಡಿದ್ದ ಕೇಶವದೇವರಿಗೆ ನಿತ್ಯಪೂಜೆಗಾಗಿ ಈ ಸೋವಿಸೆಟ್ಟಿಯು ಭೂಮಿಯನ್ನು ದಾನವಾಗಿ ನೀಡಿದಂತೆ ಹೇಳಿದೆ. ಇವನಲ್ಲದೆ ಊರಿನ ಅನೇಕರು ಈ ಕೇಶವ ದೇವರಿಗೆ ಭೂಮಿ ದಾನ ಮಾಡಿದ್ದನ್ನು ಆ ದಾನದ ಎಲ್ಲೆಗಳನ್ನು ಶಾಸನದಲ್ಲಿ ಹೇಳಲಾಗಿದೆ.

೧. .............. ಯನ್ಯಾ .............. ಸಕಂ ..............

೨. .............. ಯುದ .............. ವಿಪ್ರೇ(ಭ್ಯೋ) ಸರ್ವ್ವ ..............

೩. ಸವರ್ಣ್ನ .............. ಹಂ ಸೋಮಸೋಮಂ .............. (ಸ)ಹಿತಾ ಸಹಿತಾಶ್ವಃ ..............

೪. ಶ್ರೀಸಹಿತಂ ಸಕಲ್ವರ್ವಾಸಹಿತಂ ಪೀತವಸ್ತ್ರ ಕೌಸ್ತುಭಶೋಭಾ ಭಾಸುರವರ್ಣ್ನಂ ಸುಪ್ರ ಸಭಾಸುರ ವಿಜಯೀ ಪ್ರಸಂನಕೇಶವನೆಸೆವಂ ॥ @

೫. ಹರಗೌರಿಗಳುಂ ವಿಘ್ನೇಶ್ವರನುಂ ಜಲಜಾತನೇತ್ರನುಂ ಭಗವತಿಯುಂ ಖರಕರನುಂ ರಕ್ಷಿಸು ಗನವರತಂ ಮುತ್ತಗೆಯ ಸರ್ಬ್ಬವಿಪ್ರೋತ್ತಮರಂ ॥

೬. ಶ್ರೀ ಕೇಶವದೇವರ ಪದಕೋಶನದ ದ್ವಂದ್ವದಿಂದವ(ಳ)ದ ಚತೂರತ್ನಾಕರ ಪರಿವೇಷ್ಟಿತ ಭೂಲೋಕದ ಭರತೋರ್ಬ್ಬಿಯಲ್ಲಿ ಕುಂತಳದೇಶಂ ॥ ಕುಂ

೭. ತಳದೇಶನತುಳಾನಂತ ಬಲೋದ್ಧೃತ್ತ ರಾಷ್ಟ್ರಕೂಟಮಹೀಭೃತ್ಸಂತತಿಯಂ ತೂಳ್ದಿ ಸುವಿಕ್ರಾಂತದೆ ಪಡೆದಂ ಚಳುಕ್ಯ ತೈಲಪಭೂ

೮. ಪಂ ॥ ತೈಲಪಭೂಪನ ತನಯಂ ಭೂಲೋಕ ಸ್ತುತ್ಯಮೂರ್ತಿ ಸತ್ಯಾಶ್ರಯಭೂಪಾಳಕನಾತನ ತನಯಂ ಭಾಳಾಕ್ಷ ಸದೃಷ ವಿ

೯. ಕ್ರಮಾದಿತ್ಯನೃಪಂ ॥ ಆತನ ತಮ್ಮಂ ಸಕಲಖ್ಯಾತಿಪರಾಯಣ ನಜಯ್ಯನಯ್ಯಣದೇ(ವಂ ಕಾ)ತರ ನಲ್ಲದ ತತ್ಸಹಜಾತಂ ಜಯಸಿಂಹಭೂ

೧೦. ಪನವೃಥಾಕೋಪಂ । ಆತನ ಪುತ್ರಂ ಶರಣಾಯಾತಾರಿಪುತ್ರಂ ಸುವಾಹನಾಹಮಮಲ್ಲಂ । ನೀತಿಯುತಂ ತತ್ತನುಜಾತಂ ಕಲಿ ಸೋಯಿದೇವನಹಿ

೧೧. ತ(ದ್ರಾವಂ) ॥ ಆ ಸೋಯಿದೇವನನುಜಂ ಭಾಸುರ ಜಂಭಾಸುರರಿಪು ವಿಭವಂ ನಿಜಮಿತ್ರಾಂ ಸಂಪತ್ತಿ ಹರನಪತ್ರಾಸಂ ಪೆರ್ಮ್ಮಾಡಿರಾಯನಸ್ತ್ರಸಹಾಯಂ ॥ ಹೆ

೧೨. ರ್ಮ್ಮಾಡಿರಾಯನ ಮಗಂ ಧರ್ಮ್ಮಾತ್ಮಂ ಸೋಮಭೂಪನಾತನ ತನುಜಂ ನಿರ್ಮಳಗ್ರಾತಂ ಸುಚರಿತಧರ್ಮ್ಮಂ ಜಗದೇಕಮಲ್ಲನರ್ತ್ಥಿಗೆ ನಲ್ಲಂ ॥ ಧೀರಂ ಜಿತಪಾಂಡಿತ್ಯಂ ಧೀರಂ

೧೩. ಜಿತಸಕಳ ವೀರವೈರಿನರೇಂದ್ರಂ ದೂರತರವರ್ತ್ತಿ ಯಶಸಂ ದೊರತರಹಿತಂ ಪ್ರತಾಪ ಪ್ರಿಥುವೀಪಾಳಂ ॥ ಜಗದೇಕಮಲ್ಲ ನ್ರಿಪಪದ ಯುಗಳಾಂಭೋಜೋಪಜೀವಿ ಸಕಳಾಧ್ಯ

೧೪. ಕ್ಷಂ ಮಿಗೆ ದಾನಿ ಪಟ್ಟಸಾಹಣಿ ವಿಗತಭಯಂ ಬ್ರಹ್ಮದೇವದಂಡಾಧೀಶಂ ॥ ಆ ದಂಡಾಧೀಶಂಗೆ ಸಂವೇದಿತ ಸಮಸ್ತ ರತ್ನಸಂಪತ್ತಿಯ(ನಾ ..... ದೆಡೆ) ಪೆರ್ಚ್ಚಿಪ

೧೫. ಸುಕೃತಕುಶೀದವ್ಯವಹಾರಿ ಸೋವಿಸೆಟ್ಟಿ ವರಿಷ್ಠಂ ॥ ಆ ನೆಗಳ್ದ ಸೋವಿಸೆಟ್ಟಿಯ ಮನೋಂನತಿವೆತ್ತ ತಾಯತಂದೆಯ ವಿಖ್ಯಾತಾನೂನವೆನಿಪ ಕುಲಸಂ

೧೬. ತಾನದ ನಿಜವರ್ಣ್ನಮೆಕ್ಕಿಯೆಂತೆ(ಸೆವೆ)ಲ್ಲಂ ॥ ಆದಿಬ್ರಹ್ಮನ ತೊಡೆಯಿಂದಾದ ಶ್ವೇತಕುಲ ವೈಶ್ಯರೊಳ್ವಿಖ್ಯಾತಮಾದಾನಿ ಬಮ್ಮಿಸೆಟ್ಟಿ ತಳೋದರಿ ದೇಲವ

೧೭. ಧುಗೊಲ್ದು ವಲ್ಲಭನಾದಂ ॥ ಆ ವೈಶ್ಯ ಬಮ್ಮಿಸೆಟ್ಟಿ ರಮಾವಲ್ಲಭನಂ ಸಮಸ್ತ ವಸ್ತುಗಳಿಂ ಸ್ತ್ರೀವೆರಸರ್ಚ್ಚಿಸಿ ಪಡದಂ ಕೈವಲ್ಯದಮ

೧೮. ರಿಯಂ ಚೆಟ್ಟಿಸೆಟ್ಟಿಯನೊ(ಲವಿಂ) ॥ ..... ವೆರಸಚ್ಯುತಾಂಘ್ರಿಯನಾರಾಧಿಸಿ ಚೆಟ್ಟಿಸೆಟ್ಟಿ ಪಡೆದಂ ಸರ್ಬ್ಬೋರ್ವ್ವೀರಾಜನ ವಡ್ಡಬ್ಯವಹಾರಿಯನಾ ಸೋ ವಿತ್ತಪದಿಗುರುಮುಖವಾಗಿ

೧೯. ವಿಸೆಟ್ಟಿಯಂ ಶಿಷ್ಟೇಷ್ಟನಂ ॥ ಮುತ್ತಗೆಯ ನಡುವೆ ಭಕ್ತಿಯಿಂದುತ್ತಮ ವಿಷ್ಣುಪ್ರತಿಷ್ಠೆಯಂ ಮಾಡಿಸಿದಸು

೨೦. ವೃತ್ತಯುತಂ ಚೆಟ್ಟಿಸೆಟ್ಟಿ ವೈಶ್ಯವರಿಷ್ಠಂ ತನ್ನಯ್ಯಂ ಮಾಡಿಸಿದ ಜಗಂನಾಥಂಗೆಸೆವ ಹೊಂನ ಕಳಸದ ಶಿಲ ಯತ್ತುಂನತಗ್ರಹವಂ ಮಾಡಿಸಿ

೨೧. ಸಂನತಿಯಿಂ ಸೋಯಿಸೆಟ್ಟಿ ವೃತ್ತಿಯನಿತ್ತಂ ॥ @ ಸ್ವಸ್ತಿ ಸಮಸ್ತ ಭುವನಾಶ್ರಯಂ ಶ್ರೀ ಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರ

೨೨. ಮಭಟ್ಟಾರಕಂ ಸತ್ಯಾಶ್ರಯಕುಳತಿಳಕ(ಂ) ಚಾಳುಕ್ಯಾಭರಣಂ ಶ್ರೀಮತು ಪ್ರತಾಪಚಕ್ರವರ್ತ್ತಿ ಜಗದೇಕಮಲ್ಲದೇವ ೨೩. ರ್ಷದಯ್ದನೆಯ ದುಂದುಭಿ ಸಂವತ್ಸರದ ಕಾರ್ತ್ತಿಕ ಶುದ್ಧ ದ್ವಾದಶಿ ಸೋಮವಾರದಂದು ಸ್ವಸ್ತಿ ಶ್ರೀಮತು ಸರ್ಬ್ಬನಮಸ್ಯದುತ್ತಮದಗ್ರಹಾರಂ

೨೪. ಮುತ್ತಗೆಯ ನಡುವಣ ಉತ್ತರಾಮುಖದ ಶ್ರೀ ಪ್ರಸನ್ನಕೇಶವದೇವರ್ಗ್ಗೆ ನಿತ್ಯನಯಮಿತ್ತಿಕದ ಪೂಜೆಗಂ

೨೫. ದೇವಾಲಯದ ಜೀರ್ಣ್ನೋದ್ಧಾರಕ್ಕಂ ಸೋವಿಸೆಟ್ಟಿ ಕೆಯ್ಯಂ ಕೊಟ್ಟಂ ॥ ಆ ಕೆಯ್ಯ ಸ್ಥಳ (ಎಂ)ಟನೆಯ ಊರಡೆಯರ ಪಂನಸಿನಲ್ಲಿ ಅಡ್ಡದಾರಿ

೨೬. ಯಿಂ ತೆಂಕಲು ಅಘೋಟವಟ್ಟೆಯಿಂ ಪಡುವಲು ತಂನ ವೃತ್ತಿಯ ......... ಗಿ ಯಿಪ್ಪತ್ತು ಮತ್ತರು ಪ್ರಭುಮುಖ್ಯ ಮಹಾಜ

೨೭. ನಂಗಳಿಗೆ ಪಾದಪೂಜೆಯಂ ಕೊಟ್ಟು ಅವರ ಕೈಯ್ಯಲು ಅರುವಣ ಭೂಮಿಯಾಗಿ ಪಡೆದು ಸೋವಿಸೆಟ್ಟಿ ಪ್ರಸಂನಕೇಶ

೨೮. ವದೇವರ್ಗ್ಸೆ ಧಾರಾಪೂರ್ಬ್ಬಕಂ ಕೊಟ್ಟಂ ಆ ಕೆಯ್ಗೆ ದೇವರು ಕುಡುವ ಅರುವಣ ಪಣ ವಿಪ್ಪತ್ತು॥ ಮತ್ತಂ ಚೌಡಿಸೆಟ್ಟಿಯರುಂ ಮಾಧವ

೨೯. ಸೆಟ್ಟಿಯಿರುಂ ಊರಡೆಯ ಚಿಕ್ಕವೀರರಸರ ಮಕ್ಕಳ ಮುದ್ದರಸ (ದುರ್ಗ್ಗ)ರಸಂಗ(ಳ) ಕೈಯಲವ (ರಾ)ನುತ್ಸಾಯಿಗೆ ಬಂದ ಮೂಡಣ ಗುಡ್ಡೆ

೩೦. ಮಾನ್ಯದೊಳಗೆ ಬೆಳ್ಳಹಾಱ ಬಸವಣ್ಣನ ಕೆಯ್ಯಿಂ ಪತ್ತಿರೆ ಪಡುವಲು (ಶ್ರೀ) ಚೆಂನಕೇಶವದೇವರ ಕೆಯ್ಯಿ ಪತ್ತಿರೆ ಮೂಡಲು ಮಣಿಗವಳ್ಳಿಯ

೩೧. ಸೀಮೆಯಿಂ ಪತ್ತಿರೆ ತೆಂಕಲು ಕೆಯಿ ಮತ್ತರು ಯಿಪ್ಪತನಾಲ್ಕು ಮತ್ತಂ ಬಾಗವಾಡಿಯ ಸೀಮೆಯಿಂ ಪಡುವಲು (ಸವಣ)ಗೆಯ್ಯಿಂ

೩೨. ಪತ್ತಇರೆ ಬಡಗಲು ಕಾಳಿಕಬ್ಬೆ ಗೆಯ್ಯಿಂ ಪತ್ತಿರೆ ಮೂಡಲು ಕರಭೂಮಿಯಿಂ ಪತ್ತಿರೆ ತೆಂಕಲು ಮತ್ತರಾಱು ಅನ್ತಱು ಮತ್ತರು ಮೂವತ್ತುಮಂ ಅವರ ಕೈಯ್ಯ

೩೩. ಲು ಧಾರೆಗೊಂಡು ಸೋವಿಸೆಟ್ಟಿಯರು ಶ್ರೀ ಪ್ರಸಂನಕೇಶವದೇವರ್ಗ್ಗೆ ಸದ್ಭಕ್ತಿಯಿಂ ಕೊಟ್ಟರು ॥ ಮತ್ತಂ ಚವುಡಿಸೆಟ್ಟಿಯರುಂ ಮಾಧವಸೆಟ್ಟಿಯ

೩೪. ರುಂ ಆ ವಿಟ್ಟರಸರ ಮಗ ಲಖಯ್ಯನ ಕೈಯಲಾಯಣನಾನುತ್ಸಾಯಿಗೆ ಬಂದ ಮೂಡಣ

೩೫. ತ್ತಿರೆ ಪಡುವಲು ವಿಷ್ಣುಭಟ್ಟ ದಂಡನಾಯಕರತ್ತೆಗಳ ಕೈಯಿಂ ಪತ್ತಿರೆ ಬಡಗಲು ಚಿಕ್ಕ ಗೋವಿಂದರಸರ ಮಾನ್ಯದಿಂ ಪತ್ತಿರೆ ಮೂಡಲು ಕಾ

೩೬. ಳಿಕಬೆ ಕೆಯ್ಯಿಂ ಪತ್ತಿರೆ ತೆಂಕಲು ಮತ್ತರು ಹದಿನಾಱುಮನಾಯಣನ ಕಯ್ಯಲು (ಧಾ)ರೆಗೊಂಡು ಸೋಯಿಸೆಟ್ಟಿಯರು ಶ್ರೀ ಪ್ರಸಂನಕೇಶ

೩೭. ವ ದೇವರ್ಗ್ಗೆ ಸದ್ಭಕ್ತಿಯಿಂ ಕೊಟ್ಟರು ॥ ಮತ್ತಂ ಶ್ರೀಮನ್ಮಹಾವಡ್ಡಬ್ಯವಹಾರಿ ಸೋಯಿಸೆಟ್ಟಿಯರು ವೂರಡೆಯ ಹಿರಿಯ ಸಂಕರಸ

೩೮. ರ ಕೈಯಲು ಅವರಾನುತ್ಸಾಯದ ಮೂಡಣ ಗುಡ್ಡೆ ಮಾನ್ಯದೊಳಗೆ ಉಕ್ಕಲಿಯ ದಾರಿಯಿಂ ಪತ್ತಿರೆ ಪಡುವಲು ಖಂಡಿಕ ದೇಸರ ಕೆಯ್ಯಿಂ

೩೯. ಪತ್ತಿರೆ ಬಡಗಲು ಚಿಕ್ಕವಿಠರಸರ ದೆಸೆಯಿಂದಿವರು ಧಾರೆಗೊಣ್ಣ ಕೆಯ್ಯಿಂ ಪತ್ತಿರೆ ಮೂಡಲು ಬಸದಿಯ ಕೆಯ್ಯಿಂ ಪತ್ತಿರೆ ತೆಂಕಲು ಮತ್ತರು

೪೦. ನಾಲ್ಕು ॥ ಮತ್ತಂ ಅವರಾನುತ್ಸಾಯದಿಂ ಬಂದ ಗುಡ್ಡೆ ಮಾನ್ಯದಂಗಡಿ ರಾಜಬೀದಿಯಿಂ ಪಡುವಲ ಮೂವರೂರಡೆಯರ ಸಮುತ್ಸಾಯದ ಮಾನ್ಯದಂಗ

೪೧. ಡಿಯ ಬಡಗಲು ಸಂಕರಸನ ಮಾನ್ಯಗೇರಿಯಿಂ ಮೂಡಲು ದಾವಣಸೆಟ್ಟಿಯರ ಕರಭೂಮಿ ಯಂಗಡಿಯಿಂ ಪತ್ತಿರೆ ತೆಂಕಲು ಅಂಗಡಿ ನಿವೇಶನ

೪೨. ವೊಂದು ॥ (ಅ)ಂತುಮನವರ ಕೈಯಲು ಧಾರೆಗೊಂಡು ಶ್ರೀ ಪ್ರಸನ್ನಕೇಶವದೇವರ್ಗ್ಗೆ ಸದ್ಭಕ್ತಿಯಿಂ ಕೊಟ್ಟರು ॥ ಮತ್ತಂ ಚವುಡಿಸೆಟ್ಟಿಯರುಂ ಮಾಧವಸೆಟ್ಟಿ

೪೩. ಯರುಂ ಊರೊಡೆಯ ಚಿಕ್ಕಗೋವಿಂದರಸರ ಮಾಮ ಗೋವಿಂದದೇವನ

೪೪. ವಿಟ್ಟರಸರ ಕಯ್ಯಲು (ದೇ)ವರು ಧಾರೆಗೊಂಡ ಹದಿನಾಱು ಮತ್ತರಿಂ ಪತ್ತಿರೆ ಪಡುವಲ ಅತ್ತವ್ವ ಕೆಯ್ಯಿಂ ಪತ್ತಿರೆ ಬಡಗಲು ಅವರ ಸ್ಥಳದೊಳಗೆ ಮತ್ತರೆರಡುಮನವರ ಕಯ್ಯ

೪೫. ಲು ಧಾರೆಗೊಂಡು ಶ್ರೀ ಪ್ರಸಂನಕೇಶವದೇವರ್ಗ್ಗೆ ಸದ್ಭಕ್ತಿಯಿಂ ಕೊಟ್ಟರು ॥ ಮತ್ತಂ ಚಊಡಿಸೆಟ್ಟಿ ಯರುಂ ಮಾಧವಸೆಟ್ಟಿಯರು ಊರಡೆಯ ಹಿರಿಯ

೪೬. ಗೋವಿಂದರಸರ ಮಗ ಬಾಚರಸನ ಅವರತ್ತಿಗೆ ಕೋಮಲದೇವಿಯ ಅನ್ತಿರ್ಬ್ಬರ ಕಯ್ಯಲು ಅವರಾನುತ್ಸಾಯಾಗೆ ಬಂದ ಮೂಡಣ ಗುಡ್ಡೆ ಮಾ

೪೭. ನ್ಯದೊಳಗೆ ಹೆಗ್ಗಡೆಗಳ ಕಾಮಯ್ಯಂಗಳು ಧಾರೆಗೊಂಡ ಕೆಯ್ಯಿಂ ಪತ್ತಿರೆ ಪಡುವಲು ಚಿಕ್ಕ ಗೋವಿಂದರಸರ ಮಾನ್ಯದಿಂ ಪತ್ತಿರೆ ಬಡಗಲು ಮೂವರೂರಡೆ

೪೮. ಯರಾನುತ್ಸಾಯ ಕೆಯ್ಯಿಂ ಪತ್ತಿರೆ ಮೂಡಲು ಮಣಿಗವಳ್ಳಿಯ ಸೀಮೆಯಿಂ ಪತ್ತಿರೆ ತೆಂಕಲು ಮತ್ತರು ಯಿಪ್ಪತ್ತುಮನವರ ಕೈಯಲು ಧಾರೆಗೊಂ

೪೯. ಡು ಶ್ರೀ ಪ್ರಸಂನಕೇಶವದೇವರ ಬ್ಯಾಖ್ಯಾನಕ್ಕೆ ಸದ್ಭಕ್ತಿಯಿಂ ಕೊಟ್ಟರು॥ ಮತ್ತಂ ಚವುಡಿಸೆಟ್ಟಿ ಯರುಂಮಾಧವಸೆಟ್ಟಿಯರುಂ ಹಿರಿಯ ಸಂ

೫೦. ಕರಸರ ಮಾನ್ಯದೊಳಗೆ ಹಂದಱುಗೆಱೆಯ ದಾರಿಯಿಂ ಪಡುವಲು ತಿಕೇಶ್ವರದೇವರ ಕೆಯ್ಯಿಂ ಪತ್ತಿರೆ ಮೂಡಲು ಚಟ್ಟೇಶ್ವರದೇವರ ಕೆಯ್ಯಿಂ

೫೧. ಪತ್ತಿರೆ ತೆಂಕಲು ಯರಳಿಗೆಯ ವೈಜರಸಂಗೆ ಧಾರೆಯಿಂ ಬಂದ

೫೨. ರೆಗೊಂಡು ಶ್ರೀ ಪ್ರಸಂನಕೇಶವದೇವರ್ಗ್ಗೆ ಸದ್ಭಕ್ತಿಯಿಂ ಕೊಟ್ಟರು ॥ ಮತ್ತಂ ಶ್ರೀಮನ್ಮಹಾ ವಡ್ಡ ಬ್ಯವಹಾರಿ ಸೋಯಿಸೆಟ್ಟಿಯರು ಹಱುಹೆಯ ಮಾಚಣನ ಕಯ್ಯ

೫೩. ಲು ಧಾರೆಗೊಂಡ ತೋಟ ಕೋಣೆಯ ಸಂಕೇಶ್ವರದೇವರ ತೋಟದಿಂ ಪತ್ತಿರೆ ಪಡುವಲು ವಿಮಳೇಶ್ವರದೇವರ ತೋಟದಿಂ ಪತ್ತಿರೆ ಬಡಗಲು ಸಿದ್ದೇಶ್ವ

೫೪. ರದೇವರ ತೋಟದಿಂ ಪತ್ತಿರೆ ಮೂಡಲು ನಿಂಬರಸರ ತೋಟದಿಂ ಪತ್ತಿರೆ ತೆಂಕಲು ತೋಟ ಕಮ್ಮ ಸಾಯಿರದಯಿನೂಱುಮಂ ಶ್ರೀ ಪ್ರಸಂನಕೇಶವದೇವರ್ಗ್ಗೆ ಸದ್ಭ

೫೫. ಕ್ತಿಯಿಂ ಕೊಟ್ಟರು॥

**೧೬. ಬೇಲೂರು(ಮುದ್ದೇಬಿಹಾಳ ತಾ–ವಿಜಾಪುರ) ಕ್ರಿ.ಶ.೧೧೪೫**

ಬೇಲೂರು ಗ್ರಾಮದ ಶಿವದೇವಾಲಯದಲ್ಲಿರುವ ಒಂದು ಕಲ್ಲಿನ ಮೇಲೆ ಕೆತ್ತಲಾದ ಶಾಸನವಿದು. ಶಾಸನೋಕ್ತ ಕಾಲವು ಜಗದೇಕಮಲ್ಲನ ವರ್ಷ ೮, ಕ್ರೋಧಿ, ಪುಷ್ಯ, ಶು.೧೩ ಆದಿವಾರ, ಉತ್ತರಾಯಣ ಸಂಕ್ರಮಣವೆಂದಿದ್ದು, ಇದು ಕ್ರೋಧಿಗೆ ಬದಲಾಗಿ ಕ್ರೋಧನವೆಂದಿಟ್ಟುಕೊಂಡಲ್ಲಿ ಇದು ಕ್ರಿ.ಶ.೨೮–೧೨–೧೧೪೫ರ ಶುಕ್ರವಾರಕ್ಕೆ ಸಮನಾಗುತ್ತದೆ. ಅಲ್ಲದೆ ಸಂಕ್ರಮಣವು ಮೂರು ದಿನಗಳ ಹಿಂದೆಯೇ ಬಂದಿತ್ತು. ಕಲ್ಯಾಣದ ಚಾಲುಕ್ಯರ ಅರಸು ಜಗದೇಕಮಲ್ಲನು ಕಲ್ಯಾಣದಿಂದ ಆಳುತ್ತಿರುವುದನ್ನು ಹೇಳಿದೆ. ಇಮ್ಮಡಿ ಜಗದೇಕಮಲ್ಲನ ಮಹಾಮಂಡಳೇಶ್ವರನಾದ ಸೇವುಣವಂಶದ ಹೆಮ್ಮಾಡಿದೇವನ ಮಹಾಪಸಾಯಿತ, ಹಿರಿಯ ಹೆಗ್ಗಡೆ, ಹಂದೆಯನಾಯಕನು ಹಗರಿಟ್ಟಗೆ ೩೦೦ ನ್ನು ತ್ರಿಭೋಗಾಭ್ಯನ್ತರದಿಂದ ಆಳುತ್ತಿದ್ದು, ಆಗ ಹಗರಿಟ್ಟಗೆ ನಾಡ ಬಳಿಯ ಗ್ರಾಮ ಬೇಲೂರು ಮೂಲಸ್ಥಾನದೇವರ ಅಂಗಭೋಗ, ನಿವೇಧ್ಯಕ್ಕಾಗಿ ಎಂಟು ಹಿಟ್ಟು, ಪ್ರಭು, ಹಿರಿಯ ರೇವರಸ ಮೊದಲಾದವರು ಸೇರಿ ತೋಟ ಹಾಗೂ ಭೂಮಿಯನ್ನು ಸುದ್ರಕಜೀಯರಿಗೆ ದಾನವಾಗಿ ಕೊಟ್ಟ ಉಲ್ಲೇಖವಿದೆ. ಈ ಶಾಸನದಲ್ಲಿ ಹೆಮ್ಮಾಡಿದೇವರಸನನ್ನು ಸೇವುಣವಂಶದವನೆಂದೂ ವಿಷಮ ಹಯಗಜಾರೂಢ, ಪ್ರವುಡ ರೇಖಾರೇವಂತ, ಅನೇಕ ಶಸ್ತ್ರಶಾಸ್ತ್ರ ಪಾರಾವಾರ, ನೀತಿಚಾಣಕ್ಯ, ಅಮೋಘವಾಕ್ಯ, ಶಂಖಚಕ್ರಗದಾಧರ, ಸಕಳ ಕಳಾಧರ ಹಾಗೂ ಶ್ರೀಮಜಗದೇಕಮಲ್ಲದೇವರ ಕಟ್ಟಿದಲಗು ಎಂಬಿತ್ಯಾದಿಯಾಗಿ ಬಹುವಾಗಿ ಹೊಗಳಲಾಗಿದೆ. ಶಾಸನದ ಕೊನೆಯ ಸಾಲುಗಳ ಭಾಷೆ ಶುದ್ಧವಾಗಿಲ್ಲ.

೧. @ ನಮಃಸ್ತುಂಗ ಶಿರಶ್ಚುಂಬಿ ಚಂದ್ರಚಾಮ

೨. ರಚಾರವೇ ತ್ರೈಲೋಕ್ಯನಗರಾರಂ

೩. ಭ ಮೂಲಸ್ತಂಭಾಯ ಸಂಭವೇ॥ ಸ್ವ

೪. ಸ್ತಿ ಸಮಸ್ತ ಭುವನಾಶ್ರಯಂ ಶ್ರೀ ಪ್ರಿಥ್ವೀವಲ್ಲಭಂ

೫. ಮಹಾರಾಜಾಧಿರಾಜ ಪರಮೇಸ್ವರ ಪರಮಭಟ್ಟಾರಕ

೬. ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀಮ

೭. ಜಗದೇಕಮಲ್ಲದೇವರ ವಿಜೆಯರಾಜ್ಯಮುತ್ತರೋತ್ತರಾ[ಭಿವೃ]

೮. ದ್ಧಿ ಪ್ರವರ್ದ್ಧಮಾನಮಾ ಚಂದ್ರಾರ್ಕ್ಕತಾ[ರ*] ಬರಂ ಕಲ್ಯಾಣ [ಪು]

೯. ರದ ನೆಲೆವೀಡಿನೊಳು ಸುಖಸಂಖತಾವಿನೋದದಿ ರಾಜ್ಯ[ಂ]

೧೦. ಗೆಯುತಮಿರೆ ॥ ತತ್ಪಾದ ಪದ್ಮೋಪಜೀವಿ ॥ ಸ್ವಸ್ತಿ ಸ

೧೧. ಮ (ದಿಗ*]ತ ಪಂಚಾಮಹಾಸಬುದ ಮಹಾಮ[ಂ*]ಡಳೇಶ್ವರಂ [ದ್ವಾ]

೧೨. ರಾವತೀಪುರವರಾಧೀಸ್ವರಂ ವಿಸಮಹಯಗಜರುಡ ಪ್ರವು

೧೩. ಡರೇಖಾರೇವಂತ ಯನೇಕಶಸ್ತ್ರ ಸಾಸ್ತ್ರಪಾರಾವಾರಾ ಪರಾಯ [ಣ]

೧೪. ಮಂಡಳಿಕನಾರಾಯಣ ಯಾದವಕುಲ ಕು[ಮು*} ದಿನೀ ನಿಶಾಕರ ಸತ್ಯರತ್ನಾ

೧೫. ಕರ ನೀತಿ ಚಾಣಕ್ಯನಮೋಘವಾಕ್ಯ ಶಂಕಚಕ್ರಗದಾ[ಧ]ರ ಸಕಳಕಳಾಧ

೧೬. ರ್ವಸಿಧು ಸೇವುಣಾನ್ವಯಪ್ರಸೂತ ಲೋಕವಿಖ್ಯಾತ ಚಕ್ರವರ್ತ್ತಿ

೧೭. ಯ ಸೇನಾಸುಭಟ ಗೋಷ್ಟಿಪ್ರಸಂಸ ವಿಬುಧಜನ ಮನೋಪದ್ಮಿನೀ

೧೮. ರಾಜಹಂಸ ರಿಪುಮಂಡಳಿಕ ಸರಭಬೇರುಂಡ ನೆರೆವೆಡೆಗಂಡ ದಂಡಮನಿ

೧೯. ರಿವಂ ಗೋಮನಸಿಂಗ ಶ್ರೀಮದಜಗದೇಕಮಲ್ಲದೇವರ ಕಟ್ಟಿದಲಗು ಕುವರಂ ಮ

೨೦. ಹಾಮಂಡಳೇಸ್ವರ ಹೆಮ್ಮಾಡಿದೇವರಸರ ಮಹಾಪಸಾಯತಂ ಸರ್ವ್ವಾಧಿಕಾ

೨೧. ರಿ ಹಿರಿಯ ಹೆಗ್ಗಡೆ ಹಂದೆಯನಾ[ಯ*] ಕಂ ಹಗರಿಟ್ಟಗೆ ೩೦೦ ಮಂ ತ್ರಿಭೋಗಾಭ್ಯಂತ್ತರದಿ(ನಾ)

೨೨. ಳುತ್ತಿರೆ [ಮ್ಪೆ ೮] ನೆಯ ಕ್ರೋಧಿಸಂವತ್ಸರದ ಪುಸ್ಯ ಸುದ್ಧ ೧೩ ಆದಿವಾರ ಮುತ್ತರಾ[ಯ]

೨೩. ಣ ಸಂಕ್ರಮಣ ನಿಮಿತವಾಗಿ ಹಗರಟ್ಟಗೆನಾಡ ಬಳಿಯ ಬಾಡ ಬೇಲೂರ [ಮೂ]

೨೪. ಲಸಾ_ನದೇ[ವ*]ರ್ಗ್ಗೆ ಯಂಗಭೋಗ ನಿವೇದ್ಯಕ್ಕಂ ಎ(ಂ*)ಟು ಹಿಟು ಪ್ರಭು ಹಿರಿಯರೇವರಸ ಮು

೨೫. [ಕ್ಯ]ವಾಗಿ ದ್ದಾರಪುರ್ಬ್ಬಕಂ ಮಾಡಿ [ಸು]ದ್ರಕ ಜೀಯರ್ಗ್ಗೆ ಕೊಟ ಮತರು ೬ ನಾವಿದಿಗೆಯ

೨೬. ದಾರಿಯಿಂ ತೆಂಕಲು ಮತ್ತೆಯುಂ ತೆಂಕ ಹಳ್ಳ ಮೇರೆ ಬಾವಿಯ ತಡಿಯ ಬ್ರಹ್ಮೇಸ್ವ

೨೭. ರ[ದೇ]ವಾರ ಕೆಯ ಸರ್ಬ್ಬನಮಸ್ಯ ಮತ್ತ ನಾರಾಯಣದೇವರ

೨೮. ಕೆ[ಯಿ*] ಮಲೆಕುಗುಹೆಯ ದಾರಿಂ ಮುಡಲು ಊರೊಡೆಯರ ತೋಟದಿಂ ಬಡಗಲು

೨೯. ಬೆರೆಕಾಲ ಕಮೆಯನಾಯಕನವೆ ಬಕವ ಮುಲತ್ತನ ದೇವರಿಗೆ ಬಿಟ್ಟ ಮತರು

೩೦. [೧]೨ ಅ[೦*]ಗಭೋಗ ನಿವೇದ್ಯಕೆ ಆ[ರು] ಮತ್ತರಿಗೆ ಆರುವಣ ಪಣ ೧ ದೇವಮನ ಕೊಟ

೩೧. ಲಿ ಮನ ೧ ಖಂಡಲಿ ಮನೆ ೧ ನಿವೇಶಣ ಕೆಈ ಈಪತೊಂದು ಹೆಡಗೆಗೆ ಬಡು..

೩೨. [ದ] ಬಡು ಕೆಈ ೨ ಒ[ಮ]ನ ಉಪು ಹೇರಿಂಗೆ ಎಲೆ ೧೦೦ ಹೊತಳಕೆ ಆವಾತು ಹಡಕೆ

೩೩. [ಸೊ]ಲಗಿ ಸದತಂ ಪರದತಂ ಆಯವ್ರೋತಿ ವಸುಂಧರ ಸೆಟ್ಟಿವರಿಸ ಸಹಸ್ರಣಿ ಈಟ್ಟ

೩೪. ಯಂ ಜಾಯತೇ ಕ್ರಿಮಿ[:]

### ೧೬. ಮುತ್ತಗಿ

ಗ್ರಾಮದ ಅದೇ ದೇವಾಲಯದ ಎಡಭಾಗದಲ್ಲಿರುವ ಒಂದು ಕಲ್ಲಿನ ಮೇಲೆ On a Slab set up to the left side of the same temple in the village [B.K. No. 97 of 1929-30; SII.XV. 35] This is dated Jagadekamalla year 10, Prabhava, Kartika, su. 12, Somavara corresponding to November 6, A.D. 1147. But the weekday was Thursday. The record begins with description of the genealogy of the Chalukya king Jagadekamalla. Refers to the grant of the village Maniyuru in Hebbalu 12 for the services of the god Chennakesava consecrated by Kaihisetti and Muttage near Taravadi 1000. by the king Jagadekamalla after a request by Dandadhipati Manevergade Bramhadevayya and Sovisetti. Another grant of manneya income of Maniyuru in the presence of the king Jagadekamalla by Dakarasa, Gonarasa, Ammarasa and Abavamallarasa to the same (south facing) god Chennakesava. ಶಾಸನದಲ್ಲಿ ಕಾಲವು ಜಗದೇಕಮಲ್ಲ ವರ್ಷ ೧೦, ಪ್ರಭವ ಸಂವತ್ಸರ ಕಾರ್ತಿಕ, ಶು ೧೨, ಸೋಮವಾರವೆಂದಿದ್ದು ಇದು ಕ್ರಿ.ಶ. ೬-೧೧-೧೧೪೭ಕ್ಕೆ ಸರಿಹೊಂದುತ್ತದೆಯಾದರೂ ಅಂದು ವಾರವು ಗುರುವಾರವಾಗಿತ್ತು. ಚಾಲುಕ್ಯ ದೊರೆ ಜಗದೇಕಮಲ್ಲನ ವಂಶದ ವರ್ಣನೆಯೊಂದಿಗೆ ಶಾಸನ ಆರಂಭವಾಗುತ್ತದೆ. ದಂಡಾಧಿಪತಿ. ಮನೆವೆರ್ಗಡೆ ಬ್ರಹ್ಮದೇವಯ್ಯ ಹಾಗೂ ಸೋವಿಸೆಟ್ಟಿಇಯರ ಬಿನ್ನಹದಂತೆ ತರ್ದವಾಡಿ ಸಾವಿರದ ಬಳಿಯ ಮುತ್ತಗೆಯಲ್ಲಿ ಹೈಹಿಸೆಟ್ಟಿಯು ಪ್ರತಿಷ್ಠೆ ಮಾಡಿದ ದಕ್ಷಿಣಾಭಿಮುಖದ ಚೆನ್ನಕೇಶವ ದೇವರಿಗೆ ಹೆಬ್ಬಾಳು ೧೨ರ ಮಣಿಯೂರನ್ನು ದಾನವಾಗಿ ಜಗದೇಕಮಲ್ಲನು ಕೊಟ್ಟಂತೆ ಹೇಳಿದೆ. ಮುಂದಿನ ಮತ್ತೊಂದು ಶಾಸನದಲ್ಲಿ ಡಾಕರಸ, ಗೋಣರಸ, ಅಮ್ಮರಸ ಹಾಗೂ ಆಹುಮಲ್ಲರಸರು ಜಗದೇಕಮಲ್ಲನ ಸನ್ನಿಧಾನದಲ್ಲಿ ಮಣಿಯೂರ ಮನ್ನೆಯದ ಹಣವನ್ನು ದಾನವಾಗಿ ಕೊಟ್ಟಿದ್ದನ್ನು ಉಲ್ಲೇಖಿಸುತ್ತದೆ.

೧. @ ಜಯತ್ಯಾವಿಷ್ಕೃತಂ ವಿಷ್ಣೋರ್ವ್ವಾರಾಹಂ ಕ್ಷೋಭಿತಾರ್ಣ್ನವಂ ದಕ್ಷಿಣೋಂನ್ನತ ದಂಷ್ಟ್ರಾಗ್ರ ವಿಶ್ರಾಂತಭುವನಂ ವಪುಃ॥ ಶ್ರೀ ರಮ್ಯೋಂನಂ ಮ್ರವಕ್ಷಸ್ಥಳನಖಿಳ ....

೨. ಪಾವನಂ ಪಾವನಂ ಕೇಯೋರಾದ್ಯನಂತ ರತ್ನಾಭರಣಪರಿವೃತಂ ಸ್ವಂಬರಂ ಸ್ವಂಬರಂ ದಂಷ್ಟ್ರೋ ರುತ್ತುಂಗಾಗ್ರದಿಂದೆತ್ತಿದನಿವನಂ

೩. ಬಾ ವರಾಹಂ ವರಾಹಾಕಾರಂ ಶ್ರೀ ಕೇಶವಂ ರಕ್ಷಿಸುಗೆ ವಸು(ಧೆ)ಯಂ ವಾಸುದೇವ ಸುದೇವಂ॥

೪. @ ಆದಿವರಾಹಂ ಬಲಿದ ಮಹಾದಂಶ್ಟ್ರಾಗ್ರಪ್ರದೇಶದಿಂದೆತ್ತಿದ ಸಪ್ತೋದಧಿವಸ್ತ್ರಾವೇಷ್ಟಿತ ಮೇದಿನಿಯ ಕಿರೀಟದಂತೆ ಮಂದರವೆಸಗುಂ ॥ ಅನ್ತೆಸೆವ ಮಂದರಾಚಳ

೫. ದಿನ್ತೆಂಕರಣದೆಸೆಯ ಲಸಿತಭಾರತವರ್ಷಾಭ್ಯನ್ತರದೊಳೊಪ್ಪಿತೋರ್ಪ್ಪುದನನ್ತಪುರಗ್ರಾಮಪಂಕ್ತಿಕುನ್ತಳ ದೇಶಂ॥ ಕುನ್ತಳದೇಶಮಂ ಸಮರಧಾರಿ

೬. ಣಿಯಲ್ಲಿಯ ರಾಷ್ಟ್ರಕೂಟಭ ಕಾನ್ತರನೆಲ್ಲರಂ ನಿಜಭುಜಾಬಳದಿಂದವೆ ಕಾದಿ ಗೆಲ್ದಂ(ಕೊಂ)ದನ್ತಪನ ಪ್ರತಾಪನವಧೀರಿತವೈರಿ ಬ

೭. ಲಾವಶೇಷ ಶ್ರಾನ್ತ ಸುವರ್ಣ್ನದಾನಿ ಸುನೃಪಂ ಕಲಿ ತೈಲಪನಾಜಿಲೋಲುಪಂ ॥ ಕ ॥ ತೈಲಪ ದೇವನ ತನಯಂ ಚಾಳುಕ್ಯಕುಳಪ್ರಶಸ್ತಿವಿಸ್ತಾರಕನಾ

೮. ಮಾಳಂಕ್ರಿತಂ ಪ್ರಜಾವನಶೀಲಂ ಸತ್ಯಶ್ರಯಂ ನೃಪೇಶ್ವರನಾದಂ ॥ ಸತ್ಯಾಶ್ರಯದೇವನ ಮಗನತ್ಯಂತ ವಿಳಾಸಿ ವಿಕ್ರಮಾದಿತ್ಯನಿಳಾಸ್ತುತ್ಯಂ ನೃಪನಾದನಾತನ ನಿತ್ಯೋದಯ

೯. ಸಹಜನಯ್ಯಣಂ ನೃಪನಾದಂ ॥ ಅಯ್ಯಣದೇವನ ತಮ್ಮನಜಯ್ಯಂ ಸರ್ವ್ವೋರ್ವ್ವಿಗೆಲ್ಲವರಸಾದಂ ಮುಂಗಯ್ಯ ಬಲದಿಂದಮಮಿತಾಕ್ಷಯ್ಯ

೧೦. ಯಶಂ ಗರುಡರಂಹನಾ ಜಯಸಿಂಹಂ ॥ ಜಯಸಿಂಹಮಹೀಪತಿಯ ಪ್ರಿಯಪುತ್ರಂ ಧಾತ್ರಿಗೆಲ್ಲ ಮೀಶ್ವರನಾದಂ ಭಯಮುಂ ಲೋಭಮುಮಿಲ್ಲದ ನಯವನ್ತಂ ಪ್ರಜೆಗೆ ನಲ್ಲ

೧೧. ನಾಹವಮಲ್ಲಂ॥ ಆಹವಮಲ್ಲ ಮಹೀಶನ ದೇಹಭವಂ ಸಕಳ ಭೂಮಿಗಧಿಪತಿಯಾದಂ ಸಾಹಸಪರಾಕ್ರಮಂ ಸಕಳಾಹಿತನ್ರಿಪ ದರ್ಪ್ಪದಳನನುತ್ತಮ ಸೋಮಂ॥ ಸೋಮನರೇಂದ್ರನ

೧೨. ತಮ್ಮಂ ಸಾಮರ್ತ್ಥ್ಯೋದ್ಧೃತ್ತ ಭೂರಿಭುಜಬಳದಿದ ಭೂಮಿಪತಿಯಾದನಾಹವಭೀಮಂ ಪೆರ್ಮ್ಮಾಡಿ ರಾಯನಾರ್ಗ್ಗವಜೇಯಂ॥ ಪೆರ್ಮ್ಮಾಡಿರಾಯನಣುಗಿನ ಹೆಮ್ಮಗನೈಖ(ದಂ) ಯುಗೀನ ನೃಪಸ

೧೩. ರ್ವ್ವಜ್ಞಂ ನಿರ್ಮ್ಮಳನಭಿನವಕಾಮಂ ಧರ್ಮ್ಮಾತ್ಮಂ ಸಾರ್ಬ್ಬಭೌಮನಾದಂ ಸೋಮಂ ॥ ಸೋಮೇಶ್ವರ ದೇವನ ಮಗನೀಮೇದಿನಿಗೆಲ್ಲವರಸನಾದಂ ಶೌರ್ಯ್ಯೋದ್ದಾಮಂ ಚಳುಕ್ಯನೃಪ ಚೂಡಾಮಣಿ ಜಗದೇಕ

೧೪. ಮಲ್ಲನೀಯಲೆ ಬಲ್ಲಂ ॥ ವೃ ॥ ಚೋಳಂ ಚಾಳಾದನಂಧ್ರಂ ಶರನಿಕರಶ್ರಿತೋರಃ ಶಿರೋರಂಧ್ರನಾದಂ ಗೌಳಂ ಗೋಳಿಟ್ಟನಂಗಂ ಹ್ರಿತಬಲಸರ್ವ್ವಾಂಗನಾದಂ ಕರಂ ನೇಪಾಳಂ ಪಾಳಾಗಿ ಪೋದಂ ನಿಜಜನಪ

೧೫. ದ್ರದಿಂ ಗುರ್ಜ್ಜರ ಲಜ್ಜೆಗಟ್ಟಂ ಕಾಲಾರ್ಳೋಳ್ಕಾದಿ ಸೋಲ್ತೆಂದಡೆ ನರರಳವೆ ಶ್ರೀಪ್ರತಾಪಕ್ಷಮಾಪ ॥ಕಂ॥ ಜಗದೇಕಮಲ್ಲನೃಪ ಪದಯುಗಳಾಂಭೋಜೋಪಜೀವಿ ಮನೆಪೆರ್ಗ್ಗಡೆ ಸರ್ವ್ವ ಗುಣನಿಧಿ ಪಟ್ಟಸಾ

೧೬. ಹಣಿ ವಿಗತಭಯಂ ಬರ್ಮ್ಮದೇವದಂಡಾಧೀಶಂ ॥ ವೃ ॥ ಜನಕೆಲ್ಲಂ ಕನಕಾಂನವಂ ನವಸುವಸ್ತ್ರ ಕ್ಷೇತ್ರಮಂ ಕೊಟ್ಟು ಮುನ್ನಿನ ಕರ್ಣಾದಿ ಗಳಿಂದೆ ನಾಲ್ವಡಿಯೆನಲ್ಮಾದಾನಿಯಾದಂ ಚಳುಕ್ಯ

೧೭. ನರಾಧೀಶ್ವರ ಪೂಜ್ಯರಾಜ್ಯ ಪದಭಾರಾಧಾರ ದೋರ್ದ್ದಂಡನಾಳ್ವನಮಾದ್ಯತ್ ಕರಿಪಟ್ಟಸಾಹಣಿ ಸುವಿಪ್ರಂ ಬ್ರಹ್ಮದಂಡಾಧಿಪಂ ॥ ಕ ॥ ಆ ಪಟ್ಟಸಾಹಣೆಗಮುರ್ವ್ವಿಪತಿಗಂ ಸರ್ವ್ವ

೧೮. ರತ್ನಸಂವೃದ್ಧಿಯನೊಲ್ದಾ ಹೊತ್ತುಂ ಮಾಡುವ ಸುವ್ಯಾಪಾರಂ ಸೋವಿಸೆಟ್ಟಿ ನೆಗಳ್ವಂ ಜಗದೊಳ್ ಆ ನೆಗಳ್ದ ಸೋವಿಸೆಟ್ಟಿಯ ಮಹೋಂನತಿವೆತ್ತ ತಾಯತಂದೆಯ ವಿಖ್ಯಾತಾನೂನವೆನಿಪ

೧೯. ಕುಲಸಂತಾನದ ಸತ್ಕೀರ್ತಿ ತಾನದಂತೆನಲೆಲ್ಲಂ ॥ ಆದಿಬ್ರಹ್ಮನ ತೊಡೆಯಿಂದಾದ ಶ್ವೇತಕುಳ ವೈಶ್ಯರೊಳ್ವಿಖ್ಯಾತಂ ಮಾದಾನಿ ಬಮ್ಮಿಸೆಟ್ಟಿ ತಳೋದರಿ ದೇಲಿಕವ್ವೆಗೊಲ್ದು ವಲ್ಲಭನಾದಂ ॥

೨೦. ವರಮೂರ್ತ್ತಿ ಬರ್ಮ್ಮಿಸೆಟ್ಟಿಯು ವರುಣಾಧರೆ ದೇಲಿಕವ್ವೆಯುಂ ಪಡೆದರ್ಸ್ಸುಸ್ಥಿರನೆನಿಪ ನಾಚಿಸೆಟ್ಟಿಯ ನುರುಧರ್ಮ್ಮದ ಚೆಟ್ಟಿಸೆಟ್ಟಿಯ ಮುದದಿಂದಂ ॥ ಆ ನಾಚಿಸೆಟ್ಟಿ ತನ್ನ

೨೧. ಸ್ತ್ರೀ ನಾಚವ್ವೆ ವೆರಸಚ್ಯುತಾಂಘ್ರಿದ್ದಯಮಂ ನಾನಾಬ್ರತದಿಂದರ್ಚ್ಚಿಸಿ ದಾನಿಯನಾ ಕೈಹಿಸೆಟ್ಟಿಯಂ ಪಡೆದರವರ್ ॥ ವೃ ॥ ನಿಯತಾಚಾರದಿನಚ್ಯುತಾಂಘ್ರಿಯುಗಮಂ ಕಾಮವ್ವೆಯುಂ ಕೈ

೨೨. ಹಿಸೆಟ್ಟಿಯುಮಾರಾಧಿಸಿ ಪುಣ್ಯದಿಂದೆ ಪಡೆದರ್ದ್ದಿರ್ಘಾಯುವಂ ಚೌಡಿಸೆಟ್ಟಿಯನತ್ಯುತ್ತಮ ಕೀರ್ತ್ತಿ ಮೂರ್ತ್ತಿಯುತನಂ ನಾಚಣ್ಣನಂ ಮಾದಿಸೆಟ್ಟಿಯನೀ ಮೂವರನೆಂಬುಜಾಸನ ಹರೀ

೨೩. ಶಪುತ್ತರಂ ಪುತ್ರರಂ ॥ ಕಂ ॥ ಆ ವಿನುತ ಚೆಟ್ಟಿಸೆಟ್ಟಿ ರಮಾವಲ್ಲಭನಂ ವಧುವರಸವ್ವೆವೆರಸು ಸದ್ಭಾವದೆ ಪೂಜಿಸಿ ಪಡೆದಂ ಶ್ರೀವನ್ತನನೆಸೆವ ಸೋವಿಸೆಟ್ಟಿಯನೊಲವಿಂ॥

೨೪. ಸ್ವಸ್ತಿ ಸಮಸ್ತ ಭುವನಾಶ್ರಯಂ ಶ್ರೀ ಪೃಥ್ವಿವಲ್ಲಭಂ ಮಹಾರಾಜಾಧಿರಾಜಂ ಪರಮೇಶ್ವರಂ ಪರಮಭಟ್ಟಾರಕಂ ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಣಂ ಶ್ರೀ ಪ್ರತಾಪಚಕ್ರವರ್ತ್ತಿ

೨೫. ಜಗದೇಕಮಲ್ಲದೇವಂ ಕಲ್ಯಾಣದ ನೆಲೆವೀಡಿನೊಳು ಸುಖಸಂಕಥಾ ವಿನೋದದಿಂ ರಾಜ್ಯಂಗೆಯು ತ್ತಿರ್ದ್ದು ಸ್ವಸ್ತಿ ಶ್ರೀಮಚ್ಚಾಳುಕ್ಯ ಚಕ್ರವರ್ತ್ತಿ ಪ್ರತಾಪ ಜಗದೇಕಮಲ್ಲದೇವ ವರ್ಷದ ಹತ್ತನೆ

೨೬. ಯ ಪ್ರಭವ ಸಂವತ್ಸರದ ಕಾರ್ತ್ತಿಕ ಶುದ್ಧ ದ್ವಾದಶಿ ಸೋಮವಾರದಂದು ಸೋವಿಸೆಟ್ಟಿಯ ಬಿಂನಪದಿಂ ಪಟ್ಟಸಾಹಣಿ ಕೈಹಿಯದಂಡನಾಯಕಂ ಬ್ರಹ್ಮದೇವಯ್ಯನುಂ ಬಿನ್ನಪಂ ಗೆಯ್ಯೆ ತದ್ದವಾ

೨೭. ಡಿಸಾಯಿರದ ಬಳಿಯ ಬಾಡಂ ಮೂವತ್ತರ ಮೊದಲಬಾಡಂ ಸರ್ಬ್ಬನಮಸ್ಯದುತ್ತಮದಗ್ರಹಾರಂ ಮುತ್ತಗೆಯ ನಡುವೆ ಕೈಹಿಸೆಟ್ಟಿ ಪ್ರತಿಷ್ಠೆಯಂ ಮಾಡಿದ ದಕ್ಷಿಣಾಮುಖ ಶ್ರೀ

೨೮. ಚಂನಕೇಶವದೇವರ್ಗ್ಗೆ ಹೆಬ್ಬಾಳು ಹಂನ್ನೆರಡರೊಳಗಣ ಮಣಿಯೂರಂ ಸರ್ಬ್ಬನಮಸ್ಯಂ ಮಾಡಿ ತ್ರಿಭೋಗಾಭ್ಯಂತರ ಸಿದ್ಧಿಯಾಗೆ ಧಾರಾಪೂರ್ವ್ವಕಂ ಕೊಟ್ಟಂ ॥ ಶ್ರೀ ಚಂನಕೇಶವ ದೇವಾಯ ನಮಃ ॥

೨೯. ಶ್ರೀ ಮಿತ್ರೇಂದ್ರಗಳುಳ್ಳಿನವೀ ಮೇದಿನಿಗೊಡೆಯನಾದನುಗ್ರ ಶಿಳಾಹಾರಾಮಿತ ತಪದಿಂದೊರ್ಬ್ಬಂ ಭೀಮಬಳಂ ಸಳರನೆಂಬಹೆಸರೆಸೆವರಸಂ॥ ಸೆಳಜಿನೃಪಾನ್ವಯದರಸರ್ಪ್ಪಲಕಾಲಂ ಸಕಲ

೩೦. ಚಕ್ರವರ್ತ್ತಿಗಳಾದರ್ಬ್ಬಳಿಕವೆ ಮನ್ನೆಯರಾದರ್ಸ್ಸಲೆ ಕಲರೀ ತದ್ದವಾಡಿಸಾಯಿರಕೆಲ್ಲಂ ॥ ಸ್ವಸ್ತಿ ಸಮಧಿಗತ ಪಂಚಮಹಾಶಬ್ದಂ ವಂದಿಜನಕನಕಾಬ್ದಂ ಮಹಾಮಂಡಳೇಶ್ವರಂ ಕೊಪಣಪು

೩೧. ರವರಾಧೀಶ್ವರಂ ॥ ಸುವರ್ಣ್ನಗರುಡದ್ವಜಂ । ವಿಜಯಲಕ್ಷ್ಮೀ ಸಂಶ್ರಿತದಕ್ಷಿಣಭುಜಂ ಜೀಮೂತ ವಾಹನಾನ್ವಯಪ್ರಸೂತಂ । ಸೌರ್ಯ್ಯರಘುಜಾತಂ । ಸೆಳಜಿಕುಳಕಮಳಮಾರ್ತ್ತಂ

೩೨. ಡಂ । ಕದನಪ್ರಚಂಡಂ । ಕಾತ್ಯಾಯನೀಲಬ್ಧ ವರಪ್ರಸಾದಂ । ಸಹಜಾಮೋದಂ । ಮನ್ನೆಯ ವಲ್ಲಭಂ ಭಯಲೋಭದುರ್ಲ್ಲಭಂ । ವಿಷಮಹಯಾರೂಢ ಪ್ರೌಢರೇವನ್ತಂ । ವೈರಿಕ್ರಿತಾಂತಂ । ನಾಮಾ

೩೩. ದಿ ಸಮಸ್ತ ಪ್ರಶಸ್ತಿಸಹಿತಂ ಶ್ರೀಮತ್ ಡಾಕ್ಟರಸನುಂ ಗೋಣರಸನುಂ ಅಮ್ಮರಸನುಂ । ಆಹು ಮಲ್ಲರಸನುವಿಸ್ತಿವರು ಮುಖ್ಯವಾಗಿ ಸಮಸ್ತ ಸಂತಾನರು ಶ್ರೀಮತ್ ಜಗದೇಕಮಲ್ಲ ದೇವರ ಸಂನಿಧಾನದಲು

೩೪. ಹೆಬ್ಬಾಳು ಹನ್ನೆರಡಜೊಳಗಣ ಮಣಿಯೂರ ಮನ್ನೆಯ ವಣವಂ ಹತ್ತನೆಯ ಪ್ರಭವ ಸಂವತ್ಸರದ ಕಾರ್ತ್ತಿಕ ಶುದ್ಧ ದ್ವಾದಶಿ ಸೋಮವಾರದಲು ಮುತ್ತಗೆಯ ನಡುವಣ ದಕ್ಷಿಣಾಮುಖದೆ ಶ್ರೀ ಚೆಂನಕೇಶ

೩೫. ವದೇವರ್ಗ್ಗೆ ಧಾರಾಪೂರ್ಬ್ಬಕಂ ಕೊಟ್ಟರು.

### ೧೮. ಮುತ್ತಗಿ

ಗ್ರಾಮದ ಅದೇ ಚಾವಡಿಯಲ್ಲಿನ ಇನ್ನೊಂದು ಕಲ್ಲಿನ ಮೇಲೆ On Another Slab in the same Chavadi in the Village [B.K. No. 102 of 1929-30; SII.XV. 116] Fragmentary. This is dated Ryamurari Sovideva year 5, Khara, Sravana, Paunnami, Adivara, Somagrahana corresponding to July 18, A.D. 1171. Refers to the regrant of the village Maniyuru to the god Channakesava (south facing) at Muttage by a group of 18 families. Consisting of Mahamandalesvara Indarasa, Ahumallarasa, Vira Gokarasa, Kacharasa, Bonteya Gonarasa. At the end gives the titles and describes a certain person (name lost). The end of the record is damaged. ತುಟಿತ ಶಾಸನದ ಕಾಲವು ರಾಯಮುರಾರಿ ಸೋವಿದೇವ ವರ್ಷ ೫ ಖರ, ಶ್ರಾವಣ, ಪೌರ್ಣಿಮೆ, ಸೋಮವಾರ, ಚಂದ್ರಗ್ರಹಣ ವೆಂದಿದ್ದು, ಇದು ಕ್ರಿ.ಶ. ೧೮-೭-೧೧೭೧ರ ಸೋಮವಾರಕ್ಕೆ ಸರಿಹೊಂದುತ್ತದೆ. ಮುತ್ತಗೆಯ ಚಂನಕೇಶವದೇವರಿಗೆ ಮಹಾಮಂಡಳೇಶ್ವರ ಇನ್ದರಸ, ಆಹುಮಲ್ಲರಸ, ವೀರಗೋಕರಸ, ಕಾಚರಸ,

ಬೊಂತೆಯ ಗೋಣರಸ ಮುಂತಾದ ೧೮ ಸಂತತಿಯವರು ಸೇರಿ ಮಣಿಯೂರನ್ನು ಪುನರ್‌ದತ್ತಿಯಾಗಿ ಕೊಡುತ್ತಾರೆ. ಶಾಸನದ ಕೊನೆಯ ಭಾಗದಲ್ಲಿ ಬರುವ ಬಿರುದುಗಳು ವ್ಯಕ್ತಿಯೊಬ್ಬನನ್ನು ವರ್ಣಿಸುತ್ತವೆ. ಶಾಸನ ಹಾಳಾಗಿರುವುದರಿಂದ ಆ ವ್ಯಕ್ತಿಯ ಹೆಸರು ತಿಳಿಯುವುದಿಲ್ಲ.

೧. ಮತ್ತಮವರನ್ವಯದ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಮಂಡಳೇಶ್ವರಂ ಇನ್ದರಸನುಂ । ಆಹುಮಲ್ಲರಸನುಂ। ವೀರ ಗೋಕರಸನುಂ । ಕಾಚರಸನುಂ । ಬೊಂತೆಯ

೨. ಗೋಣರಸನುಂ । ನಾಗಲದೇವಿಯ ಡಾಕರಸನುಂ । ಅಲದವೆಡಂಗನ ಗೋಣರಸನುಂ । ಅಮ್ಮರಸನುಂ ।ಹುಲಿಕೋಡ ಕೊಂತರಸನುಂ । ಹೌಟಗೆಯ ಚೌಡರಸನುಂ । ಅತ್ತಿನೂರಾಹು ಮಲ್ಲರಸನುಂ ।ಬುಟ್ಟಗೋಣರಸ

೩. ನುಂ । ಬಂದರಸನುಂ ಬುಟ್ಟಂಮರಸನುಂ । ಧನಸಂಗ್ರಅರಸನುಂ । ನಾಗಾರ್ಜ್ಜುನರಸನುಂ । ಗಂಡಮ ಹೆಂಮ್ಮಾಡಿಯ 'ರಸನುಂ । ಇನ್ತೀ ಹದಿನೆಂಟು ಸಂತತಿಯುಂ ಸ್ವಸ್ತಿ ಶ್ರೀಮತ್‌ಕಳಚುರಿ ಚಕ್ರವರ್ತ್ತಿ ರಾಯಮುರಾರಿ ಸೋವಿದೇವ ವ

೪. ರ್ಷದ ೫ದನೆಯ ಖರ ಸಂವತ್ಸರದ ಶ್ರಾವಣದ ಪುಣ್ಣಮಿ ಆದಿವಾರ ಸೋಮಗ್ರಹಣದಲಾ ಮಣಿಯೂರ ಮನ್ನೆಯವರಮಂ ಪುನರ್ಬರ(ಣಂ ಮಾಡಿ ಮು)ತ್ತಗೆಯ ನಡುವಣ ದಕ್ಷಿಣಾಮುಖಿ

೫. ಶ್ರೀ ಚೆಂನಕೇಶವದೇವರ್ಗ್ಗಾಭರಣ ಸಹಿತ ಧಾರಾಪೂರ್ವ್ವಕಂ ಕೊಟ್ಟರು ಸ್ವಸ್ತಿ ಸಮಸ್ತ ದುಸ್ತರಾರಾತಿ ಹಸ್ತಿಮಸ್ತಕಸ್ಥಳ ವಿದಾರಣ ಮೃಗೇಂದ್ರ ........... ಪೇಂದ । ನಟ ನಗ್ನ ಭಗ್ನ ಗಾಯ

೬. ಕ ವಂದಿಬೃಂದಸಂತರ್ಪಣ । ಕಲಿಗೆ ಮುಖದರ್ಪಣ । ಬತ್ತೀಸ ಶಸ್ತ್ರ ಶಾಸ್ತ್ರ ಪ್ರವೀಣ । ಮಿತಸಂತ್ರಾಣ ।ನಿಜಭುಜೋ .........

೭. ............. ಗೊಂಡಾಡುವ ಪರಸಮಯ ಗರ್ಬ್ಬ ಸರ್ಬ್ಬಸ್ವಸಾಧಕ । ಸಾಲಿನ ಬಂಮನ ಶಿರ(ಶ್ಛೇದ).

**೧೯. ಹೆಮ್ಮಡಗಿ(ಸುರಪುರ ತಾ. ಯಾದಗಿರಿ) ಕ್ರಿ.ಶ.೧೧೮೨**

ಗ್ರಾಮದ ಬಸವೇಶ್ವರ ಗುಡಿಯ ಮುಂದೆ ದಕ್ಷಿಣಾಭಿಮುಖವಾಗಿ ನಿಲ್ಲಿಸಿದ ಕರಿಕಲ್ಲು ಇದಾಗಿದೆ. ೫ ೧/೩ ೪ ಗಾತ್ರದ ಈ ಕಲ್ಲಿನ ಅರ್ಧದಷ್ಟು ಭಾಗ ನೆಲದಲ್ಲಿ ಹೂಳಿದ್ದು, ಮೇಲ್ಭಾಗದಲ್ಲಿ ಶಿವಲಿಂಗ, ಸೂರ್ಯ-ಚಂದ್ರ ಆಕಳು-ಕರು, ಖಡ್ಗಗಳ ಚಿತ್ರಗಳಿದ್ದು, ತುಂಬ ದುಂಡಗಿನ ಸುಂದರ ಅಕ್ಷರಗಳಿವೆ. ಕಲ್ಯಾಣ ಚಾಲುಕ್ಯ ಚಕ್ರವರ್ತಿ ತ್ರಿಭುವನಮಲ್ಲ ವೀರಸೋಮೇಶ್ವರ ಕಾಲದ ಶಾಸನವಿದು. ದಂಡನಾಯಕ ಬಮ್ಮರಸನು ಪರಮ ಮಾಹೇಶ್ವರನಾದುದರಿಂದ, ಎಮ್ಮವಾಡಿಗೆಯ ಪ್ರಭು ಪಂದಿರಾಜ ಕಟ್ಟಿಸಿದ ಪಂದೇಶ್ವರದೇವರ ಸ್ಥಾನಪತಿಯಾದ ಚಾಮುಂಡರಾಸಿಪಂಡಿತ ಮತ್ತು ಅಮಿತರಾಸಿಪಂಡಿತರ ಕಾಲ್ತೊಳೆದು ಕಂನಡನೂರು ಮತ್ತು ಹಾಲಂಗೆರೆಗಳನ್ನು ಪುನರ್ಧಾರೆಯಾಗಿ ಮಾಡಿ ಅಲ್ಲಹುಲಿದೇವರಸರಿಗೆ, ಅವರು ಎಮ್ಮವಾಡಿಗೆಯ ಪ್ರಭು ಸೌಧೊರೆ ಭಾವರಸರಿಗೆ ದೇವರ ಪೂಜಾಕಾರ್ಯಾದಿಗಳಿಗಾಗಿ ನೀಡಿದ

ವಿವರಗಳಿವೆ. ಭಾವರಸರು ಕೂಡ ನಿವೇಶನ ಮತ್ತು ಸುಂಕದತ್ತಿಗಳನ್ನು ನೀಡಿದರಂತೆ. ಪ್ರಸ್ತುತ ಶಾಸನದ ೨೪-೨೫ ನೆಯ ಸಾಲುಗಳಲ್ಲಿ ಬರುವ "ಶ್ರೀಮಚ್ಚಾಳುಕ್ಯ ಪ್ರತಾಪ ಚಕ್ರವರ್ತ್ತಿ ತ್ರಿಭುವನಮಲ್ಲ ವೀರಸೋಮೇಶ್ವರದೇವ ವರ್ಶದ ಎರಡನೆಯ ಶೋಭಕ್ರಿತು ಸಂವತ್ಸರದ ಭಾದ್ರಪದ ಸುದ್ಧಾಷ್ಟಮಿ ಸೋಮವಾರದಂದುತ್ತರಾಯಣ ಸಂಕ್ರಾಂತಿ ಸೋಮಗ್ರಹಣನಿಮಿತ್ತದಿಂ" ಎನ್ನುವ ಮಿತಿಯು ಕ್ರಿ.ಶ.೧೧೮೨ರ ಅಗಸ್ಟ್ ೯ಕ್ಕೆ ಸರಿ ಹೊಂದುತ್ತದೆ. ಆದರೆ ಅಂದು ಸೋಮಗ್ರಹಣವಿಲ್ಲ. ಶಾಸನದಲ್ಲಿ ಬರುವ ಕಲ್ಯಾಣ ಚಾಲುಕ್ಯ ವಂಶಾವಳಿ, ದಂಡನಾಯಕ ಬಮ್ಮರಸನ ವಂಶಾವಳಿ ಮತ್ತು ಎಮ್ಮೆವಾಡಿಗೆಯ ಪ್ರಭು ಭಾವರಸರ ವಂಶಾವಳಿ ಸುದೀರ್ಘವಾಗಿದ್ದು, ಇತಿಹಾಸ ದೃಷ್ಟಿಯಿಂದ ಮಹತ್ವಪೂರ್ಣವೆನಿಸುತ್ತದೆ.

೧. ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂ............

೨. ಜಯತ್ಯಾವಿಸ್ಕೃತಂ ಶಂಭೋಸ್ತಾಂಡವಾಡಂಬರಂ ವಪುಸತ್ಯಾಗ್ರಿನೂ ಹರಿಭೂತ ಬಹುಬ್ರಹ್ಮಾಂಡ ಮಂಡಲಂ ॥

೩. ...........ಯನುದರದ ವಾರಿಜದಲರೊಳ್ಪರಾಗ ರಾಗದವೊಲು ವಾಕು ಶ್ರೀ ರಮಣನಖಿಳ ವೇದವಿಶಾರದ

೪. ರಂಣ್ಯಗರ್ಬ್ಬಂ ಬ್ರಹ್ಮ ॥ ಚತುರಾಸ್ಯಂ ಸ್ವಯಂಭೂಯತಿಯಂ ತದುಬ್ರತಿ ವಿನೂತ ಮಾನವ್ಯನ ವಾಯತಿಪತಿ ಹರೀತನಿಂ ............

೫. ಹ............ಯೆಂಬ ಯತಿಯ ಪಡೆದಂ ॥ ಅಮಳಾತ್ಮನೆನಿಸಿದ ಹರೀತ ಮುನೀಂದ್ರನೆ ಪಂಚಶಿಖಾಸಮಾಖ್ಯನೆನಿಪ್ಪಾ ಯಮಿಯ ಕರಚುಳುಕ ............

೬. ಟ್ಟಿ ............ ಗೆ ನಂನಿಚಳುಕ್ಯನ್ರಿಪೇಂದ್ರರು ॥ ಆ ವಂಶಜಾತನಖಿಳಕಳಾ ವಿದನೆನಿಸಿರ್ದ್ದ ವಿಕ್ರಮಾಂಕಂಗಂ ಸಂಭಾವಿತೆ ವಿನೂತೆ ಬೋ ............

೭. ಮಾಗೆ ತನೂಭವಂ ತೈಲನ್ರಿಪಂ ॥ ಜನನಾಥಾಗ್ರಣಿ ತೈಲನಗ್ರತನಯಂ ಸತ್ಯಾಶ್ರಯಂ ಸತ್ಯಭೂಪನ ತಮ್ಮಂ ವಿಜುಗೀಷು ವಿಕ್ರಮನ್ರಿಪಂ ಶ್ರೀ ವಿ ............

೮. ತ್ಯ ದೇವನ............ ನುಂ ಜಯಸಿಂಹನಾತನ ಸುತಂ ತ್ರೈಲೋಕ್ಯಮಲ್ಲಾಂಕನಾತನ ಪುತ್ರಂ ಭುವನಯ್ಕಮಲ್ಲನ ಸುಹ್ರಿತ್ಸೆಲ್ಲಂ ಕಳಾಕೋವಿದಂ ॥ ಭುವನ............

೯. ನನುಜಂ ಭುವನತ್ರಯಕೀರ್ತ್ತಿ ಭುವನರಕ್ಷಾದಕ್ಷ ಭುವನಯ್ಕ ಭುಂಭುಕಂ ಭೂಭುವನಜನಾನಂದ ಮೂರ್ತ್ತಿ ವಿಕ್ರಮಭೂಪಂ॥ ಎನೆ ನೆಗಳ್ದ ವಿ............

೧೦. ಕನ ತನ ಯ ಭೂಲೋಕಮಲ್ಲ ನಾ ವಿಭುಗೆ ಜಗಜ್ಜನ ವಿನುತನನತಿಶಯಬಳನನಘಂ ಜಗದೇಕ ವಲ್ಲಭನೊಗೆದಂ॥ ಜಗದೇಕಮಲ್ಲನನುಜಂ ಜಗತಿ ವಿ ............

೧೧. ತುಳ ನಿಜಭುಜಬಳದಿಂ ನೆಗಳ್ದಂ ನೂರ್ಮ್ಮಡಿತೈಲಪ ಜಗದೀಶಂ ಲಾಳ ಚೋಳಗೂರ್ಜ್ಜ
ರಚಯರಂ॥ ಬಳವತಿಬ್ಬಾರಿಯಂಗತುಳರ್ಕುಳಿಶನೆನೆ ಕಾವನಿಪಾಳ............

೧೨. ದೋಜ್ವಳ ರತ್ನಾಂಶು ಪ್ರಭಾರಂಜಿತ ಪದಯುಗಳಂ ತಾರನಿಹಾರ ಹಿರ್ಮ್ಮಾಚಳ ಗಂಗಾಭಾಸ
ಕೀರ್ತ್ತಿಪ್ರಿಯನಚಳಿತ ಗಾಂಭೀಯ್ಯ ನೀರಾಕರ............

೧೩. ವಳ ಚಾಳುಕ್ಯವಂಶಾರ್ಣ್ನವ ತುಹಿನಕರಂ ಸೋಮನುರ್ವ್ವೀ ಲಲಾಮಂ ॥ ಅಸಹಾಯ ಭುಜಬಳಂ
ವೈರಿಸಮೂಹ ದಾವಾನಳಂ ವರಾಹನ ತೇ............

೧೪. ಸುಮತಿರಸಗಿಳಿದೊಡೆ ರಂಜಿಸಿರ್ದ್ದಂ ರಾಜ್ಯಲಕ್ಷ್ಮೀ ಯೋಳ್ಸೋಮೇಶಂ ॥ ಸ್ವಸ್ತಿ ಸಮಸ್ತ ಭುವನಾಶ್ರಯ
ಶ್ರೀ ಪ್ರಿಥ್ವಿವಲ್ಲಭ ಮಹಾರಾಜಾಧಿರಜ [ಜಪ]

೧೫. ರಮೇಶ್ವರ ಪರಮಭಟ್ಟಾರಕ ಸತ್ಯಾಶ್ರಯಕುಳತಿಳಕ ಚಾಳುಕ್ಯಾಭರಣ ಶ್ರೀಮತು ಪ್ರತಾಪ ಚಕ್ರವರ್ತಿ
ತ್ರಿಭುವನಮಲ್ಲ ವೀರಸೋ[ಮೇಶ್ವ]

೧೬. ರದೇವರ ವಿಜಯರಾಜ್ಯಮುತ್ತರೋತ್ತರಾಭಿವ್ರಿದ್ಧಿ ಪ್ರವರ್ದ್ಧಮಾನಮಾ ಚಂದ್ರಾರ್ಕ್ಕತಾರಂಬರಂ
ಸಲಿಸುತ್ತಮಿರೆ ಸೆಲೆಯಹಳ್ಳಿಯ ನೆಲೆವೀಡಿನೊಳು ಸುಖ[ಸಂ]

೧೭. ಕತಾ ವಿನೋದದಿಂ ರಾಜ್ಯಂಗೆಯ್ಯುತ್ತಮಿರೆ[॥] ತತ್ಪಾದಪದ್ಮೋಪಜೀವಿಯಪ್ಪ ರಾಯದಂಡಾಧಿನಾಥ
ಗಂಡಪೆಂಡಾರ ಚಾಳುಕ್ಯರಾಜ್ಯ ಸಮು[ದ್ಧರಣಂ]

೧೮. ಕುಮಾ ರಂಬಂಮ್ಮಿದೇವ ರಸ ರ ಪ್ರತಾಪಮುಂ ಗುಣೋಂನತಿಕೆಯುಮೆಂತೆಂದಡೆ ॥ ಭೂವಳೆಯಾದಿ
ನಾಯಕರ ನೋರ್ಪ್ಪನೆ ಗೆಲುದ

೧೯. ಪ್ರತಾಪದಿಂದಾವನ ಮಾಂಪರಿಲ್ಲ ಭುಜಗರ್ವ್ವದ ದೋರ್ವ್ವಳದಿಂದೆ ನಿಂದನಿಂ ಕಾವವರಾರುವಿಲ್ಲೆನುತ
ಓಡಿದರೊಲ್ಲದ ವೈರಿವರ್ಗ್ಗವೀ ಕಾವಣದಂ[ಡನಾ]

೨೦. ಥ ಸುಥ ಬಮ್ಮರಸಂ ಜಗದೇಕವೀರನೋ॥ ಬಮ್ಮನಸಾಜ ಭಾನುವಿನ ತೇಜ ಯಿರಿದ್ವೀರನೋಜೆ
ಲೋಕದೊಳು ಸೋಮನ ತಂಪು ಮೇರುವಿನ ಬಿ(ಣ್ಪು)

೨೧. ಸುರೇಶನಪೆಂಪು ನಾಡೆಯುಂ ರಾಮನ ಸತ್ವ ಬೀಸ್ಮನ ಸುಚಿತ್ವ ಮಹೇಶಮಹತ್ವಮೆಂದೊಡಿನ್ನೀ
ಮಹಿಯೊಳು ನೆಗಳ್ತೆವಡೆದಿಪ್ಪವರಾರ್ದ್ದೊರೆ ಬಂಮಿದೇವ[ನಾ॥]

೨೨. ಅಂತೆನಿಸಿರ್ದ್ದ ಬಂಮ್ಮಿದೇವ ದಂಡಾಧಿನಾಥಂ ಶ್ರೀಮನುಮಹಾಮಂಡಳೇಸ್ವರಂ ಅಲ್ಲಹುಲಿದೇವರಸರ
ಮೇಲೆ ಉಖ್ಖೇಡಿಯಾಗಿ ಬಂದು ದೇವಾಪುರದಲಿಪ್ಪ

೨೩. ಲ್ಲಿ ಎಂಮ್ಮೆವಾಡಿಗೆಯ ಶ್ರೀಮಹಲಿಂಗಮೂರ್ತ್ತಿ ಹಂಡೇಸ್ವರದೇವರ ಹೆಮ್ಮೆಯಂತಂನ್ನ ಪ್ರಧಾನವರ್ಗ್ಗದ
ಬಿಂನ್ನಪದಿಂ ಕೇಳ್ದು ತಾಂ ಪರಮ ಮಾಹೇ-

೨೪. ಶ್ವರನಪ್ಪುದರಿಂ ಧರ್ಮ್ಮಾನುರಾಗಿಯಾಗಿ॥ @ ಸ್ವಸ್ತಿ ಶ್ರೀಮಚ್ಚಾಳುಕ್ಯ ಪ್ರತಾಪ ಚಕ್ರವರ್ತ್ತಿ ತ್ರಿಭುವನಮಲ್ಲ ವೀರಸೋಮೇಸ್ವರದೇವ ವರ್ಷದ ಎರಡನೆ

೨೫. ವೆ ಶೋಭಕ್ರಿತು ಸಂವತ್ಸರದ ಭಾದ್ರಪದ ಸುದ್ಧಾಷ್ಟಮಿ ಸೋಮವಾರದಂದುತ್ತರಾಯಣ ಸಂಕ್ರಾಂತಿ ಸೋಮಗ್ರಹಣನಿಮಿತ್ತದಿಂ॥

೨೬. ಶ್ರೀ ಮಹಲಿಂಗದೇವರ ತದಂಗ ಸುರಂಗಭೋಗಮುರ್ವ್ವಿ ಮಹಾಮಾಸ್ವಾದಂಗಳೆನೆ ದೇವಗ್ರಿಹಕ್ಕೆ ರವಿಂದುಮುಳ್ಳಿನಂ ಕಾಮಭರೋ

೨೭. ಪಸೂನು ಸಗರಾವನಿಯಲ್ಲಿ ನದಿಪ್ರದೇಶದೊಳು ಸೋಮಸರಾಹುಪರ್ವ್ವದೊಳು ಕಂನ್ನಡನೂರನೆ ದತ್ತಿ ಮಡಿದಂ॥ ಮಾಡಿಮೆಂ–

೨೮. ತ್ತಂ ಮುಂನ್ನ ಚಂಡಿಗದೇವ ಕೊಳ್ಳಬಿನ ಹಾಲಂಗೆರೆಯಂ ಮಹಲಿಂಗ ಹಂದೇಸ್ವರದೇವರಿಗೆ ಧಾರೆಯಂ ಮಾಡಿ ಕೊಟ್ಟದಂ ಪುನರ್ದ್ಧಾರೆ ಮಾಡಿ ಅಂ

೨೯. ತಾ ಕಂನಡನೂರು ಹಾಲಂಗೆರೆಯ್ಮಂ ಅಲ್ಲಿಯ ಪ್ರಭುಗಳ ದಶವಂದದ ಭೂಮಿಯಂ ಕಳೆದು ಅಷ್ಟಭೋಗತೇಜಸಾಮ್ಯ ತ್ರಿಭೋ

೩೦. ಗಾಭ್ಯಂತರ ಸಹಿತಂ ಎಮ್ಮೆವಾಡಿಗೆಯ ಪ್ರಭು ಸೋಧರೆ ಭಾವರಸರ್ಗ್ಗೆ ಹಸ್ತೋದಕದಿಂದೆರಡೂರುಮಂ ಧಾರಾಪೂರ್ವಕಂ ಮಾಡಿ ಕೊಟ್ಟರು ॥ ಶ್ರೀ

೩೧. ಮನುಮಹಾಮಂಡಳೇಸ್ವರಂ ಅಲ್ಲಹುಲಿದೇವರಸರುಂ ಸಮಸ್ತ ಸಂತಾತಿ ಸಹಿತಂಆ ಎರಡೂರುಮಂ ಎಮ್ಮೆವಾಡಿಗೆಯ ಪ್ರಭು ಸೋಧರೆ.

೩೨. ಭಾವರಸರ್ಗ್ಗೆ ಹಸ್ತೋದಕದಿಂ ಧಾರಾಪೂರ್ವ್ವಕಂ ಮಾಡಿಕೊಟ್ಟರು ಎಂಮ್ಮೆವಾಡಿಗೆಯ ಪ್ರಭುಗಳು ತಮ್ಮೊಳಗೇಕಸ್ಥರಾಗಿ ದೇವರಿಗೆ ತಳವ್ರಿತ್ತಿಯಾಗಿ

೩೩. ಆರುವತ್ತುನಾಲ್ಗೇಣ ಕೋಲಲು ಚದುರಸನಿಗರಂ ಮತ್ತರು ೪ ಮುಂಜನ ಮತ್ತರು ೨ ಕನ್ನಡನೂರ ಸೀಮೆಯಿಂ ಮೂಡಲು ಕ್ರಿಷ್ಣವೇಣ್ಣಾದೇಯಿಂ ಬಡಗಲು ಕೊಟ್ಟರು.

೩೪. ದೇವದೋಟವಂ ಹಿರಿಯ ಇಂನ್ನೂರು ಕಂಬವಂ ಕೊಟ್ಟರು. ಊರ ಪೂರ್ವ್ವದ ಕೊದೆಯಿಂ ಪಡುವಲು ಪುರವಾರ್ಗ್ಗವಂ ಕೊಟ್ಟರು ಒಂದು ದೇವಗಾಣಮಂ ಕೊಟ್ಟರು ಅಲ್ಲಿಯ

೩೫. ಸಮಸ್ತ ಪ್ರಜೆಗಳು ತಂಮಿಕ್ಕುವ ಸಿದ್ಧಾಯದ ಹೊಂಗೆ ಬೇಳೆಯಂ ಕೊಟ್ಟರು........ ಮುಂಮುರಿದಂಡ ಮುಖ್ಯವಾಗಿ ಆರುಂ ಸಾಸನದ ಮನೆಗಳು ಹೆರ್ಜ್ಜುಂ

೩೬. ಕ ಬಿಲುಕೊಡೆ ಒಡ್ಡರಾವುಳ ಒಕ್ಕಲುದೆರೆ ಬೀರವಣ ಸಹಿತಂ ಸರ್ವ್ವಮಾನ್ಯವಾಗಿ ಚತುಃಸಮುದ್ರ ಪರಿಯಂತಂ ಎತ್ತು ಕತ್ತೆ ಕೋಣ ಭಂಡಿ ಜೈತ್ರ ಸಹಿತಂ ಒಂದೊಕ್ಕಲ ಸಾಸ

೩೭. ನಮಂ ಹೇರಿಂಗೆ ನೂರೆಲೆಯುಮಂ ಕೊಟ್ಟರು ಊರಲ್ಲಿ ದೇವಮಾನಮಂ ಹೊಂಗಿಮ್ಮಾನವಂ ಕೊಂಡ ಬ್ಯವಹಾರಿಗಳಲ್ಲಿ ಕೊಟ್ಟರು ಬಡಗಣ ಕೇರಿಯ ಪಡುವಲೊಂದು ನಿವೇಶನದಿಂ ಮೂ

೩೮. ಡಲು ಪದ್ಮ ಹಸ್ತದಲು ೧೨ ಕೆಯ್ಯಗಲ ೨೪ ಕೆಯಿ ನೀಳದ ಒಂದು ನಿವೇಶನ ಮಂ ಕೊಟ್ಟರು ಇಂತಿವಳಿತಮೆಲ್ಲಮಂ ಪಡೆದು ದೇವರ್ಗ್ಗೆ ಆ

೩೯. ಎರಡೂರುಮಂ ದೇವರ್ಗ್ಗೆ ಹದಿನಾರು ಮನುಶ್ಯಬ್ರಾಹ್ಮಣರ್ಗ್ಗಂ ಸಮಾನ ಭಾಗವಾಗಿ ಹಂಚ್ಚಿ ಕೊಟ್ಟ ಎಂಮ್ಮೆವಾಡಿಗೆಯ ಪ್ರಬು ಸೌಧೊರೆ ಹಂದಿಮರಸರ ಪುತ್ರಂ ಭಾವರಾಜನ ವಂಶಾ

೪೦. ವತಾರಮೆಂತೆಂದಡೆ॥ @ ಶ್ರೀಯಂ ಚಕ್ರಿಗೆ ದೇವರಾಜಪದಮಂ ಶಕ್ರಂಗೆ ತೇಜೋಧಿಕಶ್ರೀಯಂ ತೀಬ್ರಕರಂಗೆ ಬುದ್ಧಿಯೊದವಂ ಬುದ್ದಂಗೆ ಸಾಜದ ವಚಶ್ರೀಯಂ ವಾಕುಪತಿಗಿತ್ತು.

೪೧. ಶಂಭು ಜಗವಂ ಮಾಡೆಂದು ಪೇಳಲು ಜಗಜ್ಜಾಯಂ ನಿರ್ಮ್ಮಿಸಿ ಪೆರ್ಮ್ಮೆವೆತ್ತು ನೆಗಳ್ದಂ ಶಿಷ್ಟಂ ವಶುಷ್ಣೋತ್ತಮಂ* ॥ ಆತನ ವಂಶದೂಳುಪಮಾತೀತಮೆನಲು ನೆಗಳ್ದಂ ಚಂದಿರಾಜಂಗೆ ಗು

೪೨. ಣಾಂನ್ವಿತ ಸತಿ ಚಾಮಿಕವ್ವೆಗೆ ಜಿತಂ ಶ್ರೀ ನಾಗವರ್ಮ್ಮನನುಮಪ ಧರ್ಮ್ಮಂ॥ ಪೆಂರ್ಮ್ಮೆಗೆ ಮಂದರಾದ್ರಿಯೆಣೆ ದಾನಗುಣಕ್ಕೆಣೆ ಕಳ್ಪಭೂರುಹಂ ಧರ್ಮಗುಣಕ್ಕೆ ಧರ್ಮ್ಮ

೪೩. ಜನೆ ತಾನೆಣೆ ಧೈರ್ಯ್ಯಗುಣಕ್ಕೆ ಧಾತ್ರಿಯಿಂ ನೂರ್ಮ್ಮಡಿ ವಂಶವರ್ದ್ಧನ ವಿಭುತ್ವ ಚಮೂಪತಿ ನಾಗವರ್ಮ್ಮನಂ ನಿರ್ಮ್ಮಳಕೀರ್ತ್ತಿಯಂ ವಸುಧೆ ಕೂರ್ಮ್ಮೆಯ ಬಂಣ್ಣಿಸುಗುಂ ನಿರಂತರಂ॥ ಆ ನಾಗವ

೪೪. ರ್ಮ್ಮವಿಭುಗಂ ಭೂನುತೆ ದೇಕವ್ವೆ ಸತಿಗಮುದಯಿಸಿದಂ ಧಾತ್ರಿವಿನುತ ಮಲ್ಲಿದೇವಂ ಮಾನವ ರೊಳಗಗ್ರಗಣ್ಯನಗಣಿತ ಪುಂಣ್ಯಂ॥ ಆ ಮಲ್ಲಿದೇವ ಪತಿಗಂ ಭೂಮಿಸ್ತುತೆ ಬಾಚಿಕವ್ವೆಗಂ

೪೫. ಪುಟ್ಟಿದರುರ್ಬ್ಬಿಮಂಡಳಾಗ್ರಗಂಣ್ಯರು ದೇಮರಸಂ ಬಮ್ಮರಾಜ ವಿಭುಭಾವರಸರು। ಪೆರ್ಮ್ಮಗೆ ತಾನೆ ಮೊತ್ತಮೊದಲಾಗಿರೆ ತಂನ್ನಯ ಗೋತ್ರಮೆಲ್ಲಮಂ ನೂರ್ಮಡಿಯಾಗಿ ರಕ್ಷಿಸಿದ

೪೬. ನುಂನ್ನತಿವೆತ್ತಿರೆ ಭೂತಳಾಗ್ರದೊಳು ಧರ್ಮ್ಮದ ಮೇರು ತಾನೆನ್ನಿದಂ ವಸುಧಾ ತಳದಲ್ಲಿ ಸತ್ಯದಯ ನಿರ್ಮ್ಮಳ ತೇಜನೆಂದು ಧರೆ ಬಂಣ್ಣಿಸೆ ಸೌಧೊರೆ ಭಾವರಾಜನಂ॥ ಭಾವರಸಂಗವಾ ನೆಗಳ್ದ ಚಂದಲ–

೪೭. ದೇವಿಗೆ ಪುಟ್ಟಿ ಧಾತ್ರಿಯೊಳು ತಾವಧಿಕಾಗ್ರಗಣ್ಯರೆನೆ ಜೀವಿಸಿ ದಾನಗುಣೋಂನ್ನ ತಿಕ್ಕೆಯಿಂ ಭೂವಳಯಕ್ಕೆ ಸತ್ಯಗುಣದೊಳು ಪ್ರಭುಶಕ್ತಿಯೊಳೊಪ್ಪಿ ಮಲ್ಲಿದೇವಂ ವಿಭು ಪಂ

೪೮. ದಿರಾಜರೆಸೆದರ್ದ್ಧರಣಿಸ್ತುತ್ಯ ಸೇಬ್ಯರೂರ್ಜ್ಜಿತರು॥ ಈಸ್ವರಭಕ್ತಂ ಪರಮ ಮಹೇಸ್ವರನೌದಾರ್ಯ್ಯತುಂಗ ನೂರ್ಜ್ಜಿತ ತೇಜ[ಂ] ಸಾಸ್ವತಮೆನೆ ಮಾಡಿಸಿ ಪಂದೇಸ್ವರಮಂ ಸುಪ್ರಿಷ್ಟಿತಂ ಹಂದರಸಂ॥

೪೯. ಆ ಪಂದಿರಾಜಂ ಮಾಡ್ಸಿದ ಶಿವಾಲಯದ ವಿಸ್ತರಮೆಂತೆಂದಡೆ॥ ಭಾಸುಧಾಗ್ರ ಸ್ಥಿರಂ ಜಂಪುಗಳಳವಡೆ ತದ್ಭಿತ್ತಿಗಳು ಗರ್ಬ್ಭಸೌಖ್ಯಾವಾಸಂಗಳು ಚೆಲ್ವುವೆತಿರ್ದ್ದಡೆ ಕೆಲದೆರ

೫೦. ಡುಂ ಪೂರ್ವ್ವಮಧ್ಯಸ್ತರಂಗಕ್ಕಸುಸ್ತಂಭಂಗಳು ಸುತ್ತಣ ಸುರರಗ್ರಿಹಂ ವಿಶ್ವಕರ್ಮ್ಮಂಗಶಕ್ಯಂ ಲೇಸಿಂ ಶ್ರೀಲಿಂಗ ಹಂದೇಸ್ವರ ಗ್ರಿಹಮೆಸೆಯಲು ಮಾಡಿದಂ ಪಂದಿರಾಜಂ[॥]

೫೧. @ ಶ್ರೀಕಾಂತೆಗೆಣೆಯೆನಿಪ್ಪೀ ಲೋಕಸ್ತವನೀಯ ಸಾಸ್ವತೈಸ್ವರಿಯ ಗುಣ ಸ್ವೀಕಾರೆಯೆನಿಪ ಮಹಿಮೆಯೊಲೀ ಕಾಮಲದೇವಿ ನೋಂತು ಪತಿಹಿತೆಯಾದಳು ಆ ಪಂದಿರಾಜ ವಿಭುಗಂ

೫೨. ರೂಪೋತ್ತಮೆಯೆನಿಪ ಕಾಮಿಯವ್ವೆಗೆ ಪುತ್ರಂ ಶ್ರೀಪತಿಗೆಣೆಯೆನೆ ಪುಟ್ಟಿ ಗುಣೋಪೇತಂ ಭಾವರಾಜನೂರ್ಜ್ಜಿತ ತೇಜಂ॥ ಗೋತ್ರಪವಿತ್ರಂ ಬುಧಜನಮಿತ್ರಂ ಸುಜನಯ್ಯ ಭಾಂದವಂ ಸತ್ಪು.

೫೩. ರುಶಂ ಧಾತ್ರಿಗೆ ಸೇಬ್ಯಮೆನಲು ಸತುಪಾತ್ರಂ ಧರೆಯೊಳಗೆ ನೆಗಳ್ದ ಸೌಧೊರೆ ಭಾಮಂ॥ ಆ ಪಂದಿರಾಜಸುತನುರ್ವ್ವೀ ಪೂಜ್ಯಮೆನಿಪ್ಪ ಧರ್ಮ್ಮಮಂ ಪೆರ್ಮ್ಮೆ ಜಗವ್ಯಾಪಿತಮೆನ್ಸಿರೆ

೫೪. ಕಳಸಾರೋಪಣಮಂ ಮಾಡಿ ನಿಲ್ಸಿ ತಂದೆಯ ಪೆಸರಂ॥ ದರ್ಮ್ಮದ ಬಿತ್ತು ಧರ್ಮ್ಮದ ತವರ್ಮ್ಮನೆ ಪೆರ್ಮ್ಮೆಯ ಮಂದರಾದ್ರಿ ತಾಂ ನಿರ್ಮ್ಮಳಚಿತ್ತದಿಂ ಶಿವನ ಪೂಜಿಸುವಂ

೫೫. ಕರವೊಲ್ದು ರಾಗದಿಂ ಕೂರ್ಮ್ಮೆಯೊಳಿವ ಬಂಧುಜನಕರ್ಥಿಯೊಳಂ ಬಿಡುವೊಂನ್ನನೆಂದೊಂಡಿಂ ನೂರ್ಮ್ಮಡಿ ಮೇಲು ಭಾವರಸ ನಿನ್ನ ಗುಣಂ ವಸುಧಾತಳಾಗ್ರದೊಳು॥ ಎರಪವರ್ಗಿಪ್ಪ ಸಂತತಿಗೆ ಸಿಪ್ಪ ಚ.

೫೬. ಯಕ್ಕೆ ಸಗೋತ್ರಿಗಳ್ಗೆ ಸಾಕ್ಷರಿಕ ಜನಕ್ಕೆ ನಿರ್ಧ್ದನಂ ನರಾಳಿಗೆ ತಾನೊಸೆದೀವ ಪೆರ್ಮ್ಮೆಯಿಂ ಸುರತರುಕಾಮಧೇನು ಮಣಿರತ್ನ ಸುರೋಚನ ಸ್ಥಳಮೊಕ್ಕಳಂ ಸುರಿವ ಸುವರ್ನ್ನ ವ್ರಿ

೫೭. ತ್ತಿಯೆನಿಕುಂ ಪ್ರಭು ಸೌಧೊರೆ ಭಾವರಾಜನಂ ॥ ಭಾವರಸನ ಸತಿಯರ್ಸ್ಸಲೆ ಭಾವಿಸುವಡೆ ರೂಪುಗುಣದೊಳಂ ಶ್ರೀ ಸೀತಾದೇವಿಗೆಣೆ ಜಕ್ಕಣಕ್ಕಂ ಚಾಮಲದೆವಿಯರೆನುತ್ತ

೫೮. ಧರೆ ಬಂಣ್ಣಿಸುಗುಂ॥ @ ಸ್ವಸ್ತಿ ಶ್ರೀಮತು ಮಹಲಿಂಗ ಹಂದೇಸ್ವರದೇವರ ಸ್ಥಾನಪತಿಯಪ್ಪ ಚಾಮುಂಡರಾಸಿಪಂಡಿತರ್ಗ್ಗೆ ಅಮಿತರಾಸಿಪಂಡಿತರ್ಗ್ಗಂ ಎಂಮ್ಮೆವಾಡಿಗೆ ಪ್ರಭು ಸೌಧೊರೆ ಭಾವರಸರು

೫೯. ತಾವು ದೇವರಿಗೆ ಹಡದಂತಹ ವ್ರಿತ್ತಿಯೆಲ್ಲವಂ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ಕೊಟ್ಟರು ಎಂಮ್ಮೆವಾಡಿಗೆಯ ಪ್ರಭುಗಳು ತಂಮ್ಮೊಳೇಕಸ್ಥರಾಗಿ ಆ ದೇವರ್ಗ್ಗೆ ತಳವ್ರಿತ್ತಿಯಾಗಿ ಕೊಟ್ಟ

೬೦. ಈ ಧರ್ಮ್ಮಮಂ ಪ್ರತಿಪಾಳಿಸಿದವರು ಸಹಸ್ರಕವಿಲೆಯ ಕೋಡುಂ ಕೊಳಗುಮಂ ಹೊಂನ್ನಲು ಕಟ್ಟಿಸಿ ವಾರಣಾಸಿಯಲು ಚತುರ್ವ್ವೇದಪಾರಗರಪ್ಪ ಬ್ರಾಹ್ಮಣರಿಗೆ ಕೊಟ್ಟರು ಈ ಧರ್ಮ್ಮಕ್ಕಹಿತ

೬೧. ಬಗೆದರ್ಗ್ಗೆ ಈವಿನಿತುವನಳಿದ ಪಾಪಮಕ್ಕು॥ @ ಸ್ವದತ್ತಂ ಪರದತ್ತಂ ವಾಯೋಹರೇತಿ ವಸುಂಧರಾ ಸಷ್ಟಿರ್ವ್ವರುಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ @ ಮಂಗ

೬೨. ಳ ಮಹಾ ಶ್ರೀ ಶ್ರೀ ಶ್ರೀ @

## ೨೦. ಚಿಕ್ಕಸೂಗೂರು(ರಾಯಚೂರು ಜಿಲ್ಲೆ) ಕ್ರಿ.ಶ.೧೧೯೪

ರಾಯಚೂರು ತಾಲೂಕಿನ ಚಿಕ್ಕಸೂಗೂರು ಗ್ರಾಮದಲ್ಲಿನ ಎರಕಲ್ ಮಲ್ಲನಗೌಡನ ಹೊಲದಲ್ಲಿನ ವೀರಗಲ್ಲಿನ ಮೇಲಿರುವ ಶಾಸನವಿದು. ಶಾಸನದಲ್ಲಿ ಕಾಲವು ಶಕವರ್ಷ ೧೧೧೫, ಪ್ರಮಾದಿ ಸಂವತ್ಸರ, ಮಾಘ, ಶು.೧ ಬ್ರಿ(ಹಸ್ಪತಿವಾರ)ದ ಉಲ್ಲೇಖವಿದ್ದು, ಇದು ಕ್ರಿ.ಶ.೨೫-೨-೧೧೯೪ ರ ಮಂಗಳವಾರಕ್ಕೆ ಸರಿಹೊಂದುತ್ತದೆ. ಮಹಾಮಂಡಳೇಶ್ವರ ಹಂದಿಯರಸ ಮತ್ತು ಮೊರಟದ ಮಲ್ಲರಸರು ಗೆದ್ದರೆ ಲಕ್ಷ್ಮಿ ದೊರೆಯುತ್ತದೆ. ಸತ್ತರೆ ಸುರಾಂಗನೆಯರು ದೊರೆಯುತ್ತಾರೆ. ಕ್ಷಣದಲ್ಲಿ ನಾಶವಾಗುವ ಈ ದೇಹವನ್ನು ರಣರಂಗದಲ್ಲಿ ಬಿಡಲು ಏಕೆ ಚಿಂತಿಸಬೇಕು ಎಂಬ ತತ್ವವನ್ನು ತಿಳಿದು ತಳಹನೂರು ಕೋಟೆಯಲ್ಲಿ ಕಾದಾಡಿ ತಳಹನೂರನ್ನು ನೆತ್ತರುವಟ್ಟವಾಗಿ ಪಡೆದ ವಿಷಯವಿದೆ.

೧. [೧] ೧೧೫ ಪ್ರಮಾದಿ ಸಂವತ್ಸರ ಮಾಘ[ಶು] ಬ್ರಿ ಶ್ರೀ । ಶ್ರೀಮನ್ಮಹಾಮಂಡಳೇ[ಶ್ವರ]

೨. ಕ್ಕರಂ ವೀರ ಹ(೦)ದಿಯರಸುನುಂ ಮೊರಟದ ಮಲ್ಲರಸುನುಂ ಕಾದುವಲ್ಲಿ ತಳಹನೂರ ಕೋಟೆಯ ನಾಯ ೩. ಕನ ತಳಹನೂರು ವೀರ ವ್ರಿತ್ತಿಯಂ ನೆತ್ತರುವಟ್ಟಾಗಿ ಹಡದು । ಜಿತೇನ ಲಭ್ಯತೇ ಲಕ್ಷ್ಮೀ ಮ್ರಿತೇನಾಪಿ ಸುರಾಂಗ ೪. ನಾ ಕ್ಷಣ ವಿಧ್ವಂಸನಿ ಕಾಯೇ ಕಾ ಚಿಂತಾ ಮರಣೇ ರಣೇ ಯೆಂಬವಾ(ಕ್ಯ)ತವನುಂಟು ಮಾಡಿ............ ಕಾದಿಯ

## ೨೧. ಮಲ್ಲಟ(ಮಾನ್ವಿ ತಾ., ರಾಯಚೂರು ಜಿಲ್ಲೆ) ಕ್ರಿ.ಶ.೧೧೯೬

ರಾಯಚೂರು ಜಿಲ್ಲೆಯ ಮಾನ್ವಿ ತಾಲೂಕಿನ ಮಲ್ಲಟವೆಂಬ ಗ್ರಾಮದ ಊರಹೊರಗಿನ ಅಲ್ಲಮ ದೇವಾಲಯದಲ್ಲಿರುವ ಕಲ್ಲಿನ ಮೇಲೆ ಈ ಶಾಸನವನ್ನು ಕೆತ್ತಲಾಗಿದೆ. ಶಾಸನದಲ್ಲಿ ಉಲ್ಲೇಖಿತ ಕಾಲವು ಶಕ ೧೧೧೮, ನಳ, ಮಾರ್ಗ್ಗಸಿರ, ಅಮಾವಾಸ್ಯೆ, ಉತ್ತರಾಯಣ ಸಂಕ್ರಮಣವೆಂದಿದ್ದು, ಇದು ಕ್ರಿ.ಶ.೨೧-೧೨-೧೧೯೬ ಶನಿವಾರಕ್ಕೆ ಸರಿಹೊಂದುತ್ತದೆ. ಕಲ್ಯಾಣದ ಚಾಲುಕ್ಯವಿಕ್ರಮನ ಕಾಲದಲ್ಲಿ ಅವನ ಮಹಾಮಂಡಳೇಶ್ವರನಾಗಿ ಮೊರದ ಮಲ್ಲನೆಂಬುವನಿದ್ದ, ಇವನ ತಂದೆ ಹಲ್ಲಿಗದೇವ, ತಾಯಿ ರೇಕಲದೇವಿ. ಈ ಮಲ್ಲನನ್ನು ಮಾಹಿಷ್ಮತೀಪುರವರಾಧೀಶ್ವರ, ಅಹಿಹಯ ವಂಶೋದ್ಭವ, ಅತ್ಯುಗ್ರನರಸಿ ದರ್ಪಣದ್ವಜ, ಮಾಲಪರೆ ಘೋಷಣ, ನಾಲ್ಕು ಭಾಷೆಯ ಜಗಬಿರುದ ಮಂಡಳಿಕರ ಗಂಡ, ಶೌಚ ಗಾಂಗೇಯ, ಪರಾಂಗನ ಪುತ್ರ, ಮಲ್ಲಿಕಾರ್ಜುನ ದೇವರ ದಿವ್ಯ ಶ್ರೀ ಪಾದಾರಾಧಕ ಮುಂತಾದ ವಿಶೇಷಣಗಳಿಂದ ಕರೆಯಲಾಗಿದೆ. ಈ ಮಲ್ಲದೇವರಸ ಅವನ ಪಿರಿಯರಸಿ ಪಟ್ಟಮಹಾದೇವಿ ಮಾಕಲದೇವಿ ಮತ್ತಿತರ ರಾಣಿಯರು, ಇವರ ಮಕ್ಕಳಾದ ಅಲ್ಲಹುಲಿದೇವ, ಹಲ್ಲಿಗದೇವ, ಬಯಿರುಗಿದೇವರು, ಸಮಸ್ತ ಪ್ರಧಾನರು, ಮತ್ತಿತರರ ಸಮೇತವಾಗಿ ಅಯ್ಯಣಸಿರಿವುರದ ನೆಲೆವೀಡಿನಲ್ಲಿ ರಾಜ್ಯಭಾರ ಮಾಡುತ್ತಿದ್ದಾಗ, ಕೊಡೆಯ ಹಂದಿಗನು, ಬಿಲ್ಲಮನ ಸಾಹಣಿ ಬ್ರಹ್ಮನು ಒಟ್ಟಾಗಿ ದಂಡೆತ್ತಿ ಬಂದು ಅವರ ಮೇಲೆ ಯುದ್ಧಮಾಡಿ ೧೭೦೦ ತಲೆಯನ್ನು ರಾಸಿ ಮಾಡಿ ಜಯವನ್ನು ಪಡೆದರು. ಸಂಕ್ರಾಂತಿಯ ಹಬ್ಬದ ನಿಮಿತ್ತವಾಗಿ ಮೊರಟದ ಸಪ್ತನಾಥದೇವರ ಸೇವಕನಾದ ಅವುಜದ ಮಾಳಯನು, ಸಕಳೇಶ್ವರ ದೇವರ ಮಾದಿರಾಜಯ್ಯನ

ಹೆಸರಿನಲ್ಲಿ ದೇವರ ಪ್ರತಿಷ್ಠೆ ಮಾಡಿದಾಗ ಮಾಳಯ್ಯನ ಮಗಳು ಮತ್ತು ಮಲ್ಲರಸನ ಹೆಂಡತಿ ಬೆಸವಲ ದೇವಿಯರು ಸೇರಿ ಮಾದೇಶ್ವರ ದೇವರ ಅಂಗಭೋಗ, ರಂಗಭೋಗ, ಪಾತ್ರಪಾವುಳ, ಖಂಡಸ್ಫುಟಿತ ಜೀರ್ಣೋದ್ಧಾರ ಮಹೇಸ್ವರದೇವರ ಆಹಾರ ದಾನಕ್ಕೆಂದು ಗಣಮಠವಾಗಿ ಕಲ್ಲಯ್ಯನಿಗೆ ಮಲ್ಲರಸರು ಭೂದಾನ ನೀಡುತ್ತಾರೆ. ಈ ಶಾಸನಗಳಲ್ಲಿ ದಾನದ ಗಡಿಗಳನ್ನು ಹೇಳುವಾಗ ಲೋಕೇಶ್ವರದೇವ ಮತ್ತು ಮಲ್ಲಿಕಾರ್ಜುನದೇವರ ಉಲ್ಲೇಖ ಬಂದಿದೆ. ಅಲ್ಲದೆ ಕುರುಕುಂದೆ, ಬೆಳಗೆರೆ ಊರುಗಳ ಉಲ್ಲೇಖವಲ್ಲದೆ, ಗೂಳಯ್ಯ, ಓಬಯ್ಯ, ರಾಜವ್ವೆ, ಆಯ್ತ ಮುಂತಾದ ವ್ಯಕ್ತಿಗಳನ್ನು ಹೆಸರಿಸಿದೆ. ದಾನ ನೀಡಿದ ಭೂಮಿಯನ್ನು ಕುರುಕುಂದೆಯ ಹಿರಿಯ ಗಡಿಂಬದಲ್ಲಿ ಅಳೆದು ದಾನ ನೀಡಿರುತ್ತಾರೆ.

೧. ಶ್ರೀ ಮಲ್ಲಿಕಾರ್ಜುನ ದೇವ ಶರಣು। ನಮಃಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ತ್ರಯಿಲೋಕ್ಯ ನಗರಾರಂಭ ಮೂಲಸ್ತಂಭಾ

೨. ಯ ಸಂಭವೇ॥ ಸ್ವಸ್ತಿ ಸಮಸ್ತ ಭುವನಾಶ್ರಯಂ ಶ್ರೀ ಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರ

೩. ಕಂ ಸತ್ಯಾಸ್ರಯ ಕುಳತಿಳಕಂ ಚಾಳುಕ್ಯ ವಿಕ್ರಮಗಾಲದಂದು ॥ ಅರಿಭೂಭ್ರಿಚ್ಛಂಡ ದಾವಾನಳ

೪. ನಹಿತ ನ್ರಿಪಾಳೋಘ ಮತ್ತ ದ್ವಿಭ ಪ್ರೋದ್ದುರ ಸಿಂಘಂ ವಯಿರಿ ವೀರಾವನಿಪತಿ ದಾನು ಜಾನಂತನುದು ವ್ರಿತ್ತಂ ದರ್ಪ್ಪಿಷ್ಟ ರಿಪು

೫. ಕ್ಷ್ಮಾಪಾಳ ಧಾತ್ರಿಧರ ವಿಧಳಿತ ವಜ್ರಾಯುಧಂ ತಾನೆನಲು ಭಾಸುರತೇಜ ಭ್ರಾಜಿತಂ ಕಣ್ಗೆಸೆದನಸದಲಂ ಪಲ್ಲವ ಕ್ಷೋಣಿ

೬. ಪಾಳ ॥ ಸ್ವಸ್ತಿ ಸಮಸ್ತ ನಿಜ ನಾಮಾಂಕ ಮಾಳಿಕಾ ಪ್ರಶಸ್ತಿ ಸಹಿತಂ ಶ್ರೀ ಮನ್ಮಹಾಮಂಡಳೇಶ್ವರಂ ಹಲ್ಲಿಗದೇವಂಗೆ ಲೋ

೭. ಕಾಂಬಿಕೆಯೆನಿಪ ಮಹಾಸತಿ ರೇಕಲದೇವಿಗಂ ಪುಟ್ಟಿದಾತ ಮಹಿಮೆಯೆಂತೆಂದಡೆ ॥ ಗುರುಗುರಿಸಿದ ಡೊರೆ

೮. ನಟ್ಟಿದನುರದೆಕಳಂ ಬೇಳ್ದು ಕಾದದಿರ್ದ್ದಡೆ ಸುಟ್ಟಂ ಪೊರವೊಳಲಂ ಮಲ್ಲನ್ರಿಪಂ ಕೊರದಂ ಹಂದಿಗನ ಹೊಲ್ಲರಂ.

೯. ಡೆಯ ತಲೆಯಂ ॥ ಬಂದಂ ಮೊರಟದ ಮಲ್ಲಂ ಕೊಂದಪನೆಲೆ ಕಂದಹಂದ ಹೋಗೆನುತಂ ತಾಂ ನಿಂದಾತ ೧೦. ವೀರ ಬಿಜ್ಜಂ ಪಂದಲೆಯಂ ಕೊಟ್ಟು ತಂನ್ನ ಮಗನಂ ಕೊಂಡಂ ॥ ಒಂದೇ ಧನುವಿಂದೆ ಕುರುಬ್ರಿಂದಮ ೧೧. ನಾಟೋಪದಿ ಕೊಂದ ಪಾರ್ತ್ಥನ ತೆರದಿಂದೊಂದ ಡ್ಡಾಯುಧದಿಂದಂ ಕೊಂದಂ ಹಂದಿಗನ ಸೇನೆಯಂ ಮಲ್ಲ ನ್ರಿ

೧೨. ಪ॥ ಸ್ವಸ್ತಿಯನೇಕ ಭಂಗುರ ತರಂಗ ಸಂಘಾತ ವೀಚೀ ನಿಚಯ ಲವಣಾಬ್ಧಿವಳಯ ವಳಯಿತ ವೇಳಾವನ

೧೩. ಗಂಗಾತೀರ ಪಾರಿಯಾತ್ರ ತನ್ಮಧ್ಯ ದೇಶಾಧೀಶ್ವರಂ ಮಾಹಿಷ್ಮತಿ ಪುರವರಾಧೀಶ್ವರಂ ಸಹಸ್ರ ಬಾಹು ಪ್ರತಾ ೧೪. ಪಂ ಭೂಪದಿಳೀಪನಹಿಹಯ ವಂಶೋದ್ಭವಂ ವಿವೇಕ ಕಮಳೋದ್ಧವನ ತ್ಯುಗ್ರ ನರಶಿರ ದರ್ಪ್ಪಣಧ್ವಜ ವಿರಾಜ

೧೫. ಮಾನ ದಾನಕಾನಿನ ಮಾಲಪರೆ ಘೋಶಣ ನ್ರಿಪರತ್ನಭೂಷಣ ಸಮರ ಪ್ರಚಂಡ ಮೂರು ಲೋಕದ ಗಂ.

೧೬. ಡ ಅರಸಂಕ ಸಂಕರ ಸಮರ ಭಯಂಕರ. ನರಲೋಕ ಜಗದಳಸಮರದೊಳಸದಳ ನಾಲುಕು ಭಾಷೆಯ ಜ

೧೭. ಗ ಬಿರುದ ಮಂಡಳಿಕರ ಗಂಡ ನುಡಿದಂತೆ ಗಂಡ ಸತ್ಯರಾಧೇಯ ಸೌಚ ಗಾಂಗೇಯನಾಳಿಂ ಮುಂನಿರೆವ ಸೌರ್ಯ್ಯ

೧೮. ವಂ ಮರವಂ ಮೆರೆವಂ ಶರಣಾಗತ ವಜ್ರ ಪಂಜರ ವಯಿರಿ ದಿಕುಂಜರನತಿ ವಿಶಮ ಹಯರೂಢ ಪ್ರೋದರ ಪೊಬಾ

೧೯. ಗವಂತ ಪರಬಳ ಕ್ರಿತಾಂತ ರಣರಂಗನರಿರಾಯ ಕಟಕ ತೊಂಡಿಕಾರ ಅಸಹಾಯ ಸೌರ್ಯ್ಯ ಮಂದರದ್ಯೆರ್ಯ್ಯ ಪರ

೨೦. ಬಳ ಮಂಡಳಿಕ ಮದನ ಮಾಹೇಸ್ವರ ಪರಹಿತ ವಿಯಚ್ಚರಾದೀಶ್ವರ ಸುಭಟರಾದಿತ್ಯ ಸಕಲ ಜನಸ್ತುತ್ಯ.

೨೧. ವಿದ್ಧರಾಮ ಸಾಹಸಭೀಮ ಸಯಿಗೋಲ ಪಾರ್ತ್ಥ ಗಂಡರತಿತ್ತಿಮುದಗನೂರ ರೊಡೆಯ ವೀರಬಿ

೨೨. ಜ್ಜ ನೆಲೆಗೊಂಡಂ ನುಡಿದಂತೆ ಗಂಡ ಚಲಕಿ ಬಲುದಲೆ ಕಲಿಗೆ ಮಾರ್ತ್ತಲೆವ ಜಯಾಂಗನಾವಲ್ಲಭ, ಜ

೨೩. ಯಲೋಭ ದುರ್ಲ್ಲಭ, ಗೋತ್ರ ಪವಿತ್ರಂ ಪರಾಂಗನಾ ಪುತ್ರಂ ಶ್ರೀ ಮಲ್ಲಿಕಾರ್ಜುನ ದೇವರ ದಿವ್ಯ ಶ್ರೀಪಾದಾರಧಕಂ

೨೪. ಪರಬಲ ಸಾಧಕ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾ ಮಂಡಳೇಶ್ವರಂ ವೀರ ಮಹೇಸ್ವರಂ.

೨೫. ಮಾರಟದ ಮಲ್ಲಿದೇವರಸರುಂ ಪಿರಿಯರಸಿ ಪಟ್ಟಮಹಾದೇವಿ ಮಾಕಲದೇವಿಯರು ಪ್ರಮುಖ ರಾಣಿಯವಾಸಂ

೨೬. ಗಳುಂ ಅಲ್ಲಹುಲಿದೇ[ವ] ಹಲ್ಲೆಗೆದೇವ ಬಯಿರುಗಿದೇವ ಮುಖ್ಯವಾಗಿ ಕುಮಾರರುಂ ಸಮಸ್ತ ಪ್ರದಾನರುಂ ಸಕಳ ಪ.

೨೭. ರಿಜನ ಬೆರಸಾ ಆಯ್ಯಣಸಿರಿವುರದ ನೆಲೆವೀಡಿನೊಳು ಸುಖಸಂಕಥಾ ವಿನೋದದಿಂ ರಸ್ತಾಯುವಾಗಿ ರಾಜ್ಯಂ

೨೮. ಗೆಯ್ಯುತ್ತಿರಲು ಕೊಡೆಯ ಹಂದಿಯತನುಂ ಬಿಲ್ಲಮನ ಸಾಹಣಿ ಬ್ರಹ್ಮವನುಂ ಕಿಳ್ಪೊಕ್ಕು ತಮಗಾದ ಹಿರಿದ

೨೯. ಹ ಭಂಗ ಕಾರಣಂ ಹೆಲ್ಲದ ಸವ್ವರಣವೆರಸು ವೆತ್ತಿಬರಲು ಇದಿರಾಗಿ ನಡದು ಕಾದಿ ದೆಸಾದಿವ್ಯಂ ಮಾಡಿಬಡಿ

೩೦. ಸಿ ಹಲಂಬರಂ ಕೊಂದು ನಾಲರು ಸಾಸಿರದೊಳನೂರು ತಲೆಯಂ ರಾಸಿವಡಿ ಜಸವಂ ಪಡೆದು ಜಗಕೆಲ್ಲಂ

೩೧. ವೀರವಂ ಯರವುತ್ತಿರಲು ಸಕವರಿಸ ೧೧೧೮ ನೆಯ ನಳಸಂವತ್ಸರದ ಮಾರ್ಗ್ಗಶಿರದಮಾವಾಸ್ಯೆ ಸೋಮ

೩೨. ವಾರದಂದುತ್ತರಾಯಣ ಸಂಕ್ರಾಂತಿಯ ಪರ್ವ್ವ ನಿಮಿತ್ತವಾಗಿ ರಾಜಧಾನಿ ಪಟ್ಟಣಂ ಮೊರಟದ

೩೩. ಶ್ರೀ ಸಪ್ತನಾಥದೇವರ ತೊತ್ತು ಮಹಾಮಹೇಶ್ವರ ಆವುಜದ ಮಾಳಯ್ಯಂ ಸಕಳೇಶ್ವರ ದೇವರ ಮಾದಿರಾಜಯ್ಯಂ

೩೪. ಗಳ ಹೆಸರಲು ಪ್ರತಿಷ್ಠೆಯಂ ಮಾಡಲು ಆ ಮಾಳಯ್ಯನ ಮಗಳು ಮಲ್ಲರಸನ ಅರಸಿ ಬೆಸವಲದೇವಿಯರು. ೩೫. ಮಾಡಿದ ಧರ್ಮ್ಮ ಶ್ರೀ ಮಾದೇಶ್ವರದೇವರ ಅಂಗಭೋಗ ರಂಗಭೋಗ ಪಾತ್ರ ಪಾವುಳ ಖಂಡಸ್ಪುಟಿತ ಜಿರ್ನ್ನೋದ್ಧಾರಂ

೩೬. ಕ್ಕಂ ಮಹೇಶ್ವರರಾಹಾರ ದಾನಕ್ಕಂ ಗಣಮತವಾಗಿ ಕಲ್ಲಯ್ಯಂಗೆ ಸರ್ವ್ವಭಾಧೆ ಪರಿಹಾರವಾಗಿ ಮಲ್ಲರಸರು ಧಾ

೩೭. ರಾಪೂರ್ವ್ವಕಂ ಮಾಡಿಕೊಟ್ಟ ಭೂಮಿ ಹುಣಸೆಯಹಟ್ಟಿಯ ದಾರಿಯಿಂದಂ ಮೂಡಲು ಗೂಳಯ್ಯನ ಮಸ

೩೮. ಬಿನ ಕೆಯಿಂದಂತೆಂಕಲು ಲೋಕೇಶ್ವರದೇವರ ಕೆಯಿಂದಂ ಪಡುವಲು ಮೂಡ * ಹೊರಕುನಿಯಾಗಿ ಓಬಯನ ಕೆಯಿಂ

೩೯. ಪಡುವಲು ಮಲ್ಲಿಕಾರ್ಜ್ಜುನದೇವರ ಕೆಯಿ ಬಡಗಲು ಬಾವಿಯರೆಯಿಂ ಮೂಡಲು * ಕುರುಕುಂದೆಯ ಹಿರಿಯ ಗಡಿಂಬದಲು

೪೦. ಬಿಟ್ಟ ಕರಿಯ ನೆಲ ಮತ್ತರು ಹನ್ನೆರಡು ಬೆಳುಗೆರೆಯ ಮುಂದಣ ಅಡ್ಡದಾರಿಯಿಂ ಬಡಗಲು ರಾಜವ್ವೆಯ ಕೆಯಿಂ

೪೧. ಮೂಡಲು ಆಯ್ತನ ಕೆಯ್ಯ ಬಾಗಿಂದಂ ತೆಂಕಲು ಹಿರಿಯ ಹಳ್ಳದಿಂಪಡುವಲು * ಚತುರಾಸ್ತಯವಾಗಿ ಕುರಿ.

೪೨. ಕುಂದೆಯ ಹಿರಿಯ ಗಡಿಂಬದಲು ಬಿಟ್ಟ ಮಸಂಬು ಮತ್ತರು ಆರು ದೇವರ ಹೂದೋಟಕ್ಕೆ ಹಳ್ಳದಿಂ ಮೂಡಲು ಲೋಕೇಶ್ವರದೇವರ ತೋ

೪೩. ಟದಿಂ ಬಡಗಲು ಬಿಟ್ಟ ಕಂಮ್ಮ ೧೫೦ ನಂದಾದೀವಿಗೆ ಯೆಣ್ಣೆಗೆ ತೆರ ಸಹಿತವಾಗಿ ಕೊಟ್ಟ ಗಾಣ ೧ ಯಿಪ್ಪತ್ತು ಕಯಿ ಅಗಲ

೪೪. ಯಿಪ್ಪತ್ತು ಕರ ನೀಳ ನಿವೇಶಣ ೧ ಹೊಂಗೆ ಕೊಟ್ಟಲ್ಲಿ ಕಾಣಿ ಕೊಂಡಲ್ಲಿ ಕಾಣಿಯಂ ಪಟ್ಟೆ ಕಪ್ಪುರವಾಡಿಯಾಗಿ

೪೫. ತೂರಡ ಬಂಡಕ್ಕೆಲ್ಲಂ ಕೊಟ್ಟರು ದೇವರ ಹಡಪಕ್ಕೆ ಹೇರಿಗೆ ಆಯಿವತ್ತು ಹೇರಿಗೆ ಯಿಪ್ರತ್ತಯ್ದೆಲೆಯಂ ಕೊಟ್ಟರು ಸುಟ್ಟುಗ ಭ

೪೬. ತ್ತವಂ ಕೊಟ್ಟರು ಗಾಣದಲು ಸೊಟಿಗೆಣ್ಣೆಯ ಕೊಟ್ಟರು ಇಂತೀ ಧರ್ಮ್ಮವಂ ನಡೆಸಿದ ಮಹಾ ಪುರುಶಂಗೆ ವಾರಣಾಸಿಯ

೪೭. ತಡಿಯಲು ವೇದ ಪಾರಗರಪ್ಪ ಸಾವಿರ ಮಾನಿಸ ಸುಬ್ರಹ್ಮಣರಿಗೆ ಸಾವಿರ ಕವಿಲೆಯಂ ದಾನಂ ಗೊಟ್ಟ ಪಲವಕ್ಕು ಈ ಧರ್ಮ್ಮವಂನಾ

೪೮. ತಡಿಯಲೀಯದೇ ಕೆಡಿಸಿಹೆನೆಂದು ಮನದಂದವಂಗೆ ಆ ಬ್ರಾಹ್ಮಣರುವನಾ ಕವಿಲೆಯ್ಮನಳಿದ ಮಹಾಪಾತಕ

೪೯. ನಕ್ಕು ॥ ಸ್ವದತ್ತಂ ಪರದತ್ತಂ ವಾಯೋ ಹರೇತಿ ವಸುಂಧರಾ ಸಷ್ಟಿವರ್ಶ ಸಹಸ್ರಾಣಿ ಮಿಷ್ಟಾನಾಂ ಜಾಯತೇ ಕೃಮಿ॥ ಚಿತ್ತದೊಳಿಂ

೫೦............ವನೆತ್ತಾನುಂ ಕೆಡಿಪೆನೆಂಬ ಪಾತಕ ನರನುಂ ಸುತ್ತಿ ಕುಟುಂಬ ಸಹಿತಂ ಮತ್ತೆನಿಸದೆ ರೌರವಕ್ಕೆ ಗಳಗಳನಿಳ್ಗು ॥

**೨೨. ಕವಿತಾಳ(ಮಾನ್ವಿ ತಾ-ರಾಯಚೂರು ಜಿಲ್ಲೆ) ಕ್ರಿ.ಶ.೧೧೯೯**

ಯಾದವ ಜೈತುಗಿದೇವನು ದೇವಗಿರಿ ನೆಲೆವೀಡಿನಿಂದ ರಾಜ್ಯಭಾರ ಮಾಡುತ್ತಿರುವಾಗ, ಹೈಹಯ ಹಲ್ಲರಸದೇವನ ಮಗ ಮಲ್ಲಿದೇವ ಮಹಾಮಂಡಳೇಶ್ವರನಾಗಿದ್ದನು. ಸಂಕರ ಸೆಟ್ಟಿಯ ಉಲ್ಲೇಖವಿದ್ದು, ಚಾಮೇಶ್ವರದೇವರಿಗೆ ದತ್ತಿಬಿಟ್ಟ ಉಲ್ಲೇಖವಿದೆ.

೧. ಶ್ರೀ ಗಿರಿಜಾಲಿಂಗನ ಸಂಭೋಗ (ಶ್ರೀಗಿರಿಜೇಶ್ವರನ ಖ್ಯಾತಭೋಗ) ದಯಾಧರನ ಚಿಂತ್ಯ ಗಜಾಕರುಣಂ ಕಾಮಹ

೨. ರನ ಮರವೆಂದಾತ ಚಾಮೇಶ್ವರ ದೇವನಿಗೆ ಸುಖ ಸಂಪದವನು ಓಂ ನಮಃ ಶಿವಾಯ

೩. ಓಂ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರಚಾರವೇ ತ್ರೈಲೋಕ್ಯ ನಗರಾರಂ

೪. ಭ ಮೂಲಸ್ತಂಭಾಯ ಶಂಭವೇ ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀಪೃಥ್ವೀವ

೫. ವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕಂ ಸತ್ಯಾಶ್ರಯ

೬. ಕುಳತಿಳಕಂ ಚೋಳಕುಳಾನ್ತಕಂ ಅರಿರಾಯ ವಂಶೋದ್ಭವಂ ಯಾದವನಾರಾ

೭. ಯಣಂ ಪ್ರತಾಪಚಕ್ರವರ್ತಿ ಜಯ್ತುಗೀದೇವನ ವಿಜಯರಾಜ್ಯಮುತ್ತ

೮. ರೋತ್ತರಾಭಿವೃದ್ಧಿ ಪ್ರವರ್ದ್ಧಮಾನ ಚಂದ್ರಾರ್ಕ್ಕ ತಾರಂಬರಂ ಸಲುತ್ತಿರಲು ದೇವ

೯. ಗಿರಿಯ ನೆಲೆವೀಡಿನೊಳು ಸುಖ ಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತ

೧೦. ವಿರಲುನಹಿಹಯ. ............. ............ ............ .ಕೊಂಡ ಗಂಡನದಟರ ಗಂಡಂ

೧೧. ಹಲ್ಲರಸದೇವ............ ............ . .ಸ್ಸರಿಯ ಆ ಮಲ್ಲದೇವನ ಪ್ರತಾ

೧೨. ಪವೆಂತೆಂದಡೆ ॥ ಸ್ವಸ್ತಿಯನೇಕ ಭಂಗುರತರಂಗ ಸಂಘಾವೀಚಿನಚಯಲವಣಾಬ್ದಿ

೧೩. ವಳಯ ವೇಳಾವನ ಗಂಗಾತೀರ ಪರಿಯಾತ್ರ ತನ್ಮದ್ಯ ದೇಶಾಧೀಶ್ವರಂ ಮಾ

೧೪. ಹಿಷ್ಮತಿ ಪುರವರಾಧೀಸ್ವರಂ ಸಹಸ್ರ ಬಾಹು ಪ್ರತಾಪಂ ಭೂಪ ದಿಳೀಪನಹಿಹಯ

೧೫. ವಂಶೋದ್ಭವಂ ವಿವೇಕ ಕಮಳೋದ್ಭವನತುಗ್ರ ನರಸಿರವಿರಾಜಮಾನದಾನಕಾ (ಶಿರದರ್ಪ್ಪಣಧ್ವಜ ವಿರಾಜಮಾನ ದಾನಕಾ)

೧೬. ನೀನ ಮಾಲಪರೆ ಘೋಷಣ ನ್ರಿಪರತ್ನಭೂಷಣ ಸಮರ ಪ್ರಚಂಡ ಮೂರು

೧೭. ಲೋಕದ ಗಂಡನೈಯಣಾದಿತ್ಯನರಸಂಕ ಶಂಕರ ಸಮರ (ಸಂಖರಂಗಮರ)ಭಯಂ

೧೮. ಕರ ನುಡಿದಂತೆ ಗಂಡ ಸತ್ಯರಾಧೇಯ ಜಗದಳಂ ಕದನದಲಸದಳಂ ನಾಲ್ಕು ಭಾಸೆಯಜ

೧೯. ಗಬಿರುದ, ಮಂಡಳೀಕರಗಂಡ ರಾಯಕಟಕ ತೋಟಿಕಾರಂಮ

೨೦. ತಳಹನೂರ ............................ ಗಂಡ ಹಂದಿಯರಸನ ಸರ್ಬ್ಬಾಂಗ ಸೂ

೨೧. ರೆ ಕಾರ .................................. ವೀರಗೋಮರಸನ ಸ್ವಸೂರೆಕಾರಂ

೨೨. .................................. ತುರೆಯ ಗರಟ್ಟ ಸರಘಟ್ಟ

೨೩. ನರಿ. .................................. ವಿಜಯ ಲಕ್ಷ್ಮೀಕಾಂತಂ ಸಕಳ .............

೨೪. ಕ್ಷ್ಮೀವಲ್ಲಭ .................................. ಶೌಚಗಾಂಗೇಯ ಗೋತ್ರ ಪವಿತ್ರಂ

೨೫. ಪರಾಂಗನ ಪುತ್ರ .................................. ದೇವರ ದಿವ್ಯಶ್ರಿ ಪಾದಪದ್ಮಾರಾಧಕ

೨೬. ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಮಂಡಳೇಶ್ವರಂ ವಿ

೨೭. .................................... ಭುಜಬಳದಿಂದ ವೈ

೨೮. .................................... ದಿಂ ರಾಜ್ಯಂಗೆಯ್ಯುತ್ತ ಮಿರೆ

೨೯. ....................................ನನುಪಮಪುತ್ರಂ ಪ್ರತ್ಯಕ್ಷ

೩೦. .................................... ಆ ಸಂಕರಸೆಟ್ಟಿಯ ಚಿ

೩೧. .................................... ನ್ನವ ಪ್ರ

೩೨. (ಇಲ್ಲಿಯ ಸಾಲುಗಳು ಸಿಮೆಂಟಿನಿಂದ ಮುಚ್ಚಿಕೊಂಡಿರುತ್ತವೆ.)

೩೩. ....................................೧೧೨೧

೩೪. ....................................ಸೂರ್ಯಗ್ರಹಣ

೩೫. .................................... ಶ್ವರದೇವರ ಅಂಗಭೋಗ ರಂಗಭೋ

೩೬. .................................... ಅಲ್ಲಿಯ ತಪೋಧನರ ಗ್ರಾಸ ನಿಮಿತ್ತ

೩೭. .................................... ಸರ್ವ್ವ ನಮಸ್ಯವೆಂದು ಧಾರಾಪೂರ್ವ್ವಕಂ ಮಾಡಿಕೊಟ್ಟ

೩೮. .................................... ಆಭಾಗಿಂದ ಮೂಡಲು ಬಾಯ ಭಾಗಂ

೩೯. ................................ ಘಣಕೋಲಲು ಮತ್ತರು ೧೦ ಆ ನೆವರಿಯ ಬಟ್ಟೆಯ

೪೦. .................................... ೧೦ ತೆಂಕಲು ಮಸಬು ಮತ್ತರು ೪

೪೧. .................................... ಸಿಧೇಶ್ವರ ದೇವರ ಸುತ್ತಲು ಹೂದೋಟ

೪೨. .................................... ವೇನು ಮಾರುದಡೆ

೪೩. .................................... ಯಕೆ ಹನ್ನವಣಿಗರು

೪೪. ....................................

೪೫. .................................... ।

೪೬. .................................... ವೇದಪಾರಗರಪ್ಪ ಬ್ರಾಹ್ಮಣರಿಗೆ ಕೊಟ್ಟ ಘಳವಂ

೪೭. ಸ್ವದತ್ತಂ ಪರದತ್ತಂ ವಾಯೋ ಹರೇತಿ ವಸುಂಧರಾ ಷಷ್ಟಿವರಿಷ ಸಹಸ್ರಾಣಿ ಮಿಷ್ಟಾ

೪೮. ಯಾಂ ಜಾಯತೇ ಕ್ರಿಮಿ ಶ್ರೀ ಸರಸ್ವತ್ಯೈ ನಮಃ)

## ೨೩. ಕೂಡಲ ವೀರಗಲ್ಲು(ಹಾನಗಲ್ ತಾ., ಹಾವೇರಿ ಜಿಲ್ಲೆ)

ಕ್ರಿ.ಶ.೧೨ನೆಯ ಶತಮಾನ ಕಲ್ಯಾಣ ಚಕ್ರವರ್ತಿ ೬ನೇ ವಿಕ್ರಮಾದಿತ್ಯನ ಕಾಲದಲ್ಲಿ ಹಾನಗಲ್ ಕದಂಬ ಇಮ್ಮಡಿ ತೈಲಪನು ಮಹಾಮಂಡಲೇಶ್ವರನಾಗಿ ಆಳುತ್ತಿರುವಾಗ, ಯಾವುದೋ ಗ್ರಾಮದ ಕೋಟೆಯ ಮುತ್ತಿಗೆಯಲ್ಲಿ ಹಂದೆಯ ನಾಯಕನೊಬ್ಬ ಯುದ್ಧಮಾಡಿದ್ದನ್ನು ಶಾಸನ ತಿಳಿಸುತ್ತದೆ. ಶಾಸನವು ತ್ರುಟಿತ (ಮುಕ್ಕಾದ)ಗೊಂಡಿರುವುದರಿಂದ ವಿವರಗಳು ಅಸ್ಪಷ್ಟವಾಗಿವೆ. ಐದನೆಯ ಪಟ್ಟಿಕೆ

೧. [ಸ್ವ]ಸ್ತಿ ಸಮಸ್ತ ಪ್ರ[ಶ]ಸ್ತಿ ಸಹಿತಂ ಶ್ರೀಚಾಳುಕ್ಯವಿಕ್ರಮಕಾ

೨. ಲದ ೪೯ ನೆಯ ವಿತ(ಳಂ)ಬ ಸಂ[ವ]ತ್ಸರದ ಕಾರ್ತಿ ಮೂರನೆಯ ಪಟ್ಟಿಕೆ

೩. ಕ ಬಹುಳ ದಸ(ಶ)ಮಿ ಆದಿವಾರದಂದು ॥ಸ್ವಸ್ತಿ ಸಮಸ್ತ

೪. ಪ್ರಸ(ಶ)ಸ್ತಿ ಸಹಿತಂ ಶ್ರೀಮನು ಮಹಾಮಂಡಳೇಸ್ವ(ಶ್ವ)ರಂ ತೈಒಂದನೆಯ ಪಟ್ಟಿಕೆ

೫. ಲಪದೇವರಿಗೆ ಪೆರ್ಮ್ಮಾಡಿಯ ಖಸ ..... ವಳುಗ್ರಾಮ ಕೋಟೆಯಂ ಯ

೬. ತಿಯೂರನ್ ............ ನೆಯ ಹಬ್ಬಾಗಿ ............ ರದೊಳಗೆ ಹೊಕ್ಕಿ

೭. ರಿದಂ ಪಂದೆಯ ನಾಯಿಗೆ ಸತ್ತುದು ............ ಯನಾ

೮. ಯಕಂ ॥ ಶ್ರೀ ಶ್ರೀ

## ೨೪. ಹಂಡರಗಲ್

೧೨ನೇ ಶತಮಾನ ತುಟಿತ ಕಾಲದ ಉಲ್ಲೇಖವಿರದ ಈ ಶಾಸನದಲ್ಲಿ ಎರಡು ಶಾಸನಗಳಿವೆ. ಒಂದು, ಎರಡನೆಯ ಜಗದೇಕಮಲ್ಲನ ಆಳ್ವಿಕೆಯ ಕಾಲದ್ದಾದರೆ, ಇನ್ನೊಂದು ಸೇವುಣರ ಕಾಲದ ಶಾಸನವಾಗಿದೆ. ಇಮ್ಮಡಿ ಜಗದೇಕಮಲ್ಲನ ಸಾಮಂತನಾಗಿ ಮಹಾಮಂಡಳೇಶ್ವರ ಕುಮಾರ ಹೆಮ್ಮಾಡಿಯ ಸೇವಕ ತಂತ್ರಪಾಳ ತೊಂಡಮ ಎಂಬುವವನಿದ್ದ. ಇವನ ಸಹೋದರ ಬಮ್ಮರಸ. ಕುಮಾರ ಹೆಮ್ಮಾಡಿಯನ್ನು ಚಾಳುಕ್ಯಚಕ್ರವರ್ತಿ ಜಗದೇಕಮಲ್ಲನ ಕಟ್ಟಿದಲಗು ಎಂದೂ, ತೊಂಡಮನನ್ನು ಹೆಮ್ಮಾಡಿ ಮಹಿಪಾಳಕನ ವಿಜಯಶ್ರೀಗೆ ಕಟ್ಟಿದಲಗು ಎಂದೂ ಕರೆದಿದೆ. ಬಮ್ಮರಸ ಹಾಗೂ ಅವನ ಮಡದಿ ಬಾಗಿಯಬ್ಬರಸಿಯರು ತ್ರಿಕೂಟಾಚಲವನ್ನು ಮಾಡಿಸಿ, ದೇವರ ಪೂಜಾಕಾರ್ಯಗಳಿಗೆ ಭೂಮಿದಾನವಾಗಿ ಕೊಟ್ಟಿದ್ದಾರೆ. ಎರಡನೆಯ ಶಾಸನವು ಯಾದವ ಅಥವಾ ಸೇವುಣರ ರಾಜ್ಯಸ್ಥಾಪನೆಯಾದ ವಿಷಯವನ್ನು ಉಲ್ಲೇಖಿಸುವ ಶಾಸನವು ಮೇಲಿನ ಶಾಸನದ ಕಾಲಕ್ಕಿಂತ ಸ್ವಲ್ಪ ಮುಂದಿನದು. ಹೆಮ್ಮಾಡಿದೇವರಸನ ಕಟ್ಟಿದಲಗು ತಂತ್ರಪಾಳ ತೊಂಡರಸನ ಮಗ ಚಿಕ್ಕಬ್ರಹ್ಮಯ್ಯನನ್ನು ಸೋಮಯ್ಯನು ಗೆದ್ದು ಸೇವುಣ ರಾಜ್ಯವನ್ನು ನಿಲ್ಲಿಸಿದಾಗ ತೊಂಡೇಶ್ವರ. ದೇವರ ಮಠದಾಚಾರ್ಯ ಆನೆಯ ದೇವರ ಶಿಷ್ಯ ಸರ್ವೇಶ್ವರ ಪಂಡಿತನಿಗೆ (ಹನ್ನೆರಡು ಮತ್ತರು ಭೂಮಿಯನ್ನು) ದಾನವಾಗಿ ಕೊಟ್ಟ ವಿಷಯವನ್ನು ಹೇಳಿದೆ. ಶಾಸನದಲ್ಲಿ ಹೆಮ್ಮಾಡಿಯರಸ ಮತ್ತು ತೊಂಡಮನನ್ನು ಅತಿಶಯವಾಗಿ ಹೊಗಳಲಾಗಿದೆ.

೧. ಜಯನ್ತಿ ಸ್ಥಾಯಿನಸಂಚಾರಿ ಭಾವಾಭಿನಯಭಾವಕಾಃ । ನೀಲಲೋಹಿತ ಶೈಲೂಷಭ್ರೂಲತಾ ಲಾಸ್ಯವಿಭ್ರಮಾಃ॥

೨. ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ । ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ ॥ ಸ್ವಸ್ತಿ

೩. ಸಮಸ್ತ ಭುವನಾಶ್ರಯಂ ಶ್ರೀ ಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರಂ ಪರಮಭಟ್ಟಾರಕಂ ಸತ್ಯಾಶ್ರಯ

೪. ಕುಳತಿಳಕ ಚಾಳುಕ್ಯಾಭರಣಂ ಶ್ರೀಮತು ಪ್ರತಾಪಚಕ್ರವರ್ತ್ತಿ ಜಗದೇಕಮಲ್ಲದೇವರ ವಿಜಯರಾ

೫. ಜ್ಯಮುತ್ತರೋತ್ತರಾಭಿವ್ರಿದ್ಧಿ ಪ್ರವರ್ದ್ಧಮಾನಮಾ ಚಂದ್ರಾರ್ಕ್ಯ ತಾರಂ ಸಲುತ್ತಮಿರೆ ತತ್ಪಾದ ಪದ್ಮೋಪ ಜೀವಿ ಸಮ

೬. ಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಮಣ್ಡಳೇಶ್ವರಂ ಜಗದೇಕಮಲ್ಲದೇವರ ಕಟ್ಟಿದಲಗು ಕುಮಾರಂ ಹೆಮ್ಮಾ

೭. ಡಿದೇವರಸರು ॥ ವ್ರಿ ॥ ಉಱದರನಿಕ್ಕಿ ಬೀರಸಿರಿಯಂ ಸಲೆ ಸಜ್ಜವಿರ್ದ್ಧನರ್ತ್ಥಿಗಳಂ ನೆಱೆಯದೆ ಮಣ್ಡಳೇಸ್ವರರೆ ಯಾ

೮. ಚಕರಾಗಿರೆ ಕೊಟ್ಟು ಚಾಗಮಂ ನಿಱೆಸಿದನಾತ್ಮಕೀರ್ತ್ತಿವಧು ಹಾಲ್ಗಡಲೊಳು ಜಳಕೇಳಿಯಾಡೆ ಕಣ್ದೆಱೆಸಿದನೆನ್ದೊ

೯. ಡೇ ವೊಗಳ್ವುದುನ್ನತಿಯಂ ಕಲಿ ಹೆಮ್ಮಭೂಪನ ॥ @ ಹಿಡುಗನಡುರ್ತ್ತು ಹುಯ್ದುಸಿತಗಂ ಕಟಕಂ ಕವಿ ಕಲ್ಲೆಯಾಗಿ

೧೦. ಕೂಗಿಡಲಿಱೆದಾವೆದೊಟ್ಟೆಯ್ಸಿ ಬನ್ದ ಪಟಂ ರಿಪುಚಕ್ರಮಂ ಪಡಲ್ವಡಿಸಿದ ಗರ್ವ್ವದುಬ್ಬರದ ಸಾಸಿಗನೀ ನೆರೆಯೊಡಗಂ(ಡ)ನೀರೆಡೆ

೧೧. ಯೊಳದೆಂನುತ್ತವೇಂ ಭುಜಬ(ಳೋ)ನ್ನತರೇ ನೆಗಳ್ದನ್ಯ ಭೂಭುಜರ್ ॥ ನುಡಿದುದೆ ನನ್ನಿ ನೋಡಿದುದೆ ಮಂಗಳವಿತ್ತುದೆ ತಾಂಬ್ರಶಾಸನಂ ನಡೆ

೧೨. ದುದೆ ಸಾಧ್ಯವಿಳ್ದುದೆ ಜಯಾಪಹ(ವೆ)ನ್ದುದೆ ಪೂಣ್ಕೆ ಸಂಗ(ರಂ) ಬಡೆದುದೆ ಸಯ್ಪುಗೆಲ್ಸಲೆಧನೀಂ ಜಸದರ್ತ್ಥಿಯೆ ವ್ರಿತ್ತಿ ಲೀ

೧೩. ಲೆಯಿಂ ಪಿಡಿದುದೆ ಪೆರ್ಚ್ಚು ವಿಭುವಿಕ್ರಮಮೆ ಸೌಷ್ಠವವೀ ನೆರೆಯೊಡೆ ಗಣ್ಡನ ॥ ತಲೆಯಂ ಕೊಟ್ಟವನಾತನಾ ವನೆಣಿಪೇಂ ಯುದ್ಧಕ್ಕೆ ತಾವಂಜಿ ಬಾ

೧೪. ಳ್ದಲೆಯಂ ತತ್ತವನಾವನೆಣಿಪೇಂ ದೋರ್ಗ್ಗರ್ಬ್ಬಮಂ ಬಿಟ್ಟು ಕೋಟಲೆವ(ಲ್ಪಾ)ಡಿದರಾರ ನಾವನಱೆವೆಂ ನೂಱೆಂಟು ಸಂಗ್ರಾಮ

೧೫. ಮಂ ಸಲೆ ಗೆಲ್ದೆಕ್ಕಲ ವೀರನಾರ್ಗ್ಗವರಿಯಂ ಪೆರ್ಮ್ಮಾಡಿಭೂಪಾಳಕಂ ॥ ಕಂ ॥ ಸರಿಯು ಮುಮಿಲ್ಲನ ದೇತರದಿಂ ನೂಜೆಂಟು ಸಮರದೊಳ್

೧೬. ಜಯಮಂ ಬಿತ್ತರಿಸಿದನೆನ್ನಡೆ ಕೇಳ್ದಚ್ಚರಿವಡದವರೊಳರೆ ಪೆರ್ಮ್ಮನ್ರಿಪ ವಿಕ್ರಮಮ ॥ ವ ॥ ಅನ್ನು ಅಭಂಗನಾಥ ಕ್ಷತ್ರಿಯನೆನಿ

೧೭. ಸಿ ನೆಜೆ ನೆಗಳ್ತೆಗಂ ಪೊಗಳ್ತೆಗಂ ನೆಲೆಯಾದ ಮಂಡಳಿಕನಾರಾಯಣಂ ಗೋಮನ ಹೆರ್ಮ್ಮಾಡಿದೇವ ನನ್ನಾತನ ವಿಜಯರಾಜ್ಯಕ್ಕೆ । ಕ ।

೧೮. @ (ತಾ)ನೆ ಮೊದಲೆನಿಸಿ ನೆಗಳ್ದುದ್ದಾನಿಯೊಳಾ ಹೆರ್ಮ್ಮನ್ರಿಪನ ನಚ್ಚಿನ ಜಯಸಂಸ್ಥಾನಕರ ಕಟ್ಟಿದಲಗನದನಜೆಯಿರೆ ತಂತ್ರಹಾಳನಂ ತೊಂಡಮನ ॥ ಚಾಳುಕ್ಯ ಚಕ್ರವ

೧೯. ರ್ತ್ತಿಗಳೊಳಾ(ವು)ದೆ ಕಟ್ಟಿದಲಗು ಹೆಮ್ಮಾಡಿ ಮಹೀಪಾಳಕ(ನಾ)ತನ ವಿಜೆಯಶ್ರೀ ಲೀಲೆಗೆ ಕಟ್ಟಿದಲಗಿ(ದೆ)ನಿಪಂ ತೊಂಡ ॥ ವ್ರಿ ॥ ತನಗಾಳ್ವಲ ನೆರೆಯೊಡೆಗಂ(ಡ)

೨೦. (ಮ)ಹಿಪಂ ಹೆಮ್ಮಾಡಿ ಭೂಪಾಳಕಂ ಜನವನ್ಣಂ ಜಸಕಂ ಗುಣಾಢ್ಯನುದಯಾದಿತ್ಯಂ ಮಹತ್ಪುಣ್ಯಮಂ (ಘ)ನತೆಯಿಂ ಭೂನುತ ಜಕ್ಕಿಯ

೨೧. ಬ್ಬರಸಿಯೆನ್ದಂದೆಣ್ಣಸೆಯ್ಪಿಂಗೆ .... ಳ್ನೋನ್ತವರಾರೊ ಭಾವಿಸುವಡಿಂತೀ ತಂತ್ರಪಾಳಂಬರ ॥ ಕ ॥ನಾಡಿಂ ..... ಡಿಯ ....

೨೨. ೦ ತಾನೆ ದಿಟಕೆ ಮಾನಸನೆನೀಪೀ ರೂಢಿಮಿಗೆ ಧಾತ್ರಿಸಲೆ ಕೊಂಡಾಡುವುದೀ ತಂತ್ರಹಾಳನಂ ತೊಂಡಮನ ॥(ವ ॥) ಅನ್ತೆನಿಸಿ ನೆಗಳ್ದ ತಂತ್ರಹಾಳ (ತೊಂ)

೨೩. ಡಮರಸಂಗನುಜಾತನಾಗಿಯುಂ ಗುಣಆಗ್ರಜಾತನುವಭಿರೂಪನುಂ ಪ್ರಖ್ಯಾತನುಮೆನಿಸಿ ॥ ವ್ರಿ ॥ ವಿನಯಮನಪ್ಪುಕೆಯ್ದು ನುಡಿ ಭಾವದೊಳೊಂದಿದ ಚಿತ್ತ

೨೪. ಗಳುಂ ನೆನೆ ಕೊನೆಯಾಗುತಿಪ್ಪ ವಿಭವಂ ಸಲೆ ಸಜ್ಜನವಾಗಲಕ್ಷ್ಮಿನೆಟ್ಟನೆ ದೊರೆವೆತ್ತಿ ಮಾನಸಿಕೆ ರಂಜಿಸೆ ತಂನ್ನೊಳುದಾತ್ತಪುಣ್ಯ ಮಂಡನನೆನಿಸಿದಂ ಬರ್ಮ್ಮ(ರ)

೨೫. ಸನಂತೆ ಕ್ರಿತಾರ್ತ್ಥರೆ ಮಿಕ್ಕಮಾನವರ್ ॥.... ದಾಳಂಗಿತನಾ ದಿ. ತವಿ ಜಯ ಭೂಜೋಚ್ಚಂಡ ಕೌಷೇಯಕ ಬಿತ್ತರದಿಂದಿಂತೀ

೨೬. ತನ(ಣ್ಣಂ)ಗೆರಡನೆಯ ತನು ತ್ರಾಣನರ್ತ್ಥಿ ಬ್ರಜಕ್ಕಾದರದಿಂದಿಂತೀ ..... ತ್ರಂ ಚಿತ್ತನಿಧಿ ನಿಜವಂ ಶಾಂಬುಜ(ಕ್ಕೀತನಾ) ಭಾಸ್ಕರನೆನ್ದಂದಿ

೨೭. ತ್ತಲುಂ ಬಮ್ಮರಸನನೊಲವಿಂ ಬಣ್ಣಿಕಂ ಭೂವಿಭಾಗ ॥ ಹ್ರಿದಯಮೆ ರಸಗ ... ಬನ್ದು ಧರ್ಮ್ಮ ವಿನೋದೆ ಜಕ್ಕಿಯಬ್ಬರಸಿ ........... ಪುಟ್ಟಿದನೆನೆ ಬ

೨೮. ಮ್ಮರಸನವೋಲ್ಪೋಂತ ಮನುಜನಾವಂ ಧರೆಯೊಳ್ ॥ ವ ॥ ಇನ್ತು ನೆಗರ್ತೆವೆತ್ತ ಬಮ್ಮರಸಂಗ
ರ್ದ್ಧಾಂಗನಿವಾಸಿನಿಯೆನಿಸಿ ॥ ವ್ರ ॥ ನಯವತಿಯೆನ್ನು ಬ

೨೯. ವತಿಯೆನ್ನು ಯಶೋವತಿಯೆನ್ನು ಪುಣ್ಯಸಂಶ್ರಯವತಿಯೆನ್ನು ಸತ್ಯವತಿಯೆನ್ನು ದಯಾವತಿಯೆನ್ನು
ವಲ್ಲಭಪ್ರಿಯವತಿಯೆನ್ನು ಭಾಗ್ಯವ

೩೦. ತಿಯೆನ್ನು ಭೋಗ್ಯವತಿಯೆನ್ನು ಜಗಂ ಪೊಗಗಳಲ್ಕೆ ಸದ್ಗುಣೈ(ಕ)ದಯವತಿ ಬಾಗಿಯಬ್ಬರಸಿ ಬಮ್ಮರ
(ಸ)ಂಗನುಕೂಲೆ ವರ್ತ್ತಿಪಳು ವಿನ ...

೩೧. ಮೊಳ್ಪುಂ ಭಾಗ್ಯಮವಿನಿತುಂ ತನಗೇಕಭೋಗವೆನೆ ಬಮ್ಮರಸಂಗನುಕೂಲೆ ಬಾಗಿಯಬ್ಬರಸಿ ನಿತಾಂತಲಕ್ಷ್ಮಿ
ಯನ್ತೆ ವಕ್ಷದೊಳಿಪ್ಪ(ಳು ॥)

೩೨. ನಿರುಪಮ ಪುಣ್ಯರೂಪರಿವರಾದರ(ದಿಂ) ಸಮಸನ್ನು ಮುಂನ್ನೆ ನಿ ....... ಶಿವಯೋಗದಿಂ .....
...... ಡರ್ಚಿದ ಸಿದ್ಧಲಿಂಗಮಂ ಸ್ಥಿ

೩೩. ರವೆನೆ ಕಂಡು ಧರ್ಮ್ಮರತಿಯಿನ್ದೆ ತದೀಯ ನಿವಾಸಮಂ ಮನೋಹರಮನಪೂರ್ವ್ವಮಂ ಪಡೆದು
ಮಾಡಿಸಿ ಧರ್ಮ್ಮದೆ (ತ್ರಿಕೂ)

೩೪. (ಟ)ಮ ॥ @ ಸಿರಿ ನಿಟ್ಟೆಯಲ್ತು ಧರ್ಮ್ಮವೆ ಪರಮಧನಂ ಬಗೆವಡೆನಿಸಿ ಸಲೆ ಧರ್ಮ್ಮಸ್ಯ ತ್ವರಿತಾ
ಗತಿಯೆಂಬಿದನಾದರಿಸಿ

೩೫. ಯೆನೆ ಮಾಡಿಸಿದರೀ ತ್ರಿಕೂಟಾಲಯಮಂ ॥ ಒಡಲೊಡವ ಹೆಂಡಿರೆಂಬವರೊಡವಾರದು ಪುಣ್ಯರೂ

೩೬. ಪವೆಂಬಿವೆ ಪುರುಷಂಗೊಡವಪ್ಪುವೆಂನ್ದು ಮಾಡಿದರೆಡೆಯುಡುಗದೆ ಭಕ್ತಿಯಿಂ ತ್ರಿಕೂಟಾಲಯಮ॥
ಅನ್ತು

೩೭. ತಮ್ಮುತನಿಬರುಂ ಮಾಡಿಸಿದ ಶ್ರೀ ತ್ರಿಕೂಟಾಲಯಕ್ಕೆ ಪೂಜೆಪುನಸ್ಕಾರಕ್ಕೆ ನಡವನ್ತಾಗಿ ತಮ್ಮಗುಡ್ಡೆ ಮಾ

೩೮. ನ್ಯ ಸ್ಥಳದೊಳಗೆ ಮೊದಲ ಭಾಗದಲು ಬಿಟ್ಟ ಕೆಯ್ಮತ್ತರು ಹಂನೆರಡು ॥ ಇ ಧರ್ಮ್ಮಮಂ ಪ್ರತಿಪಾಳಿಸಿ

೩೯. ದವರ್ಗ್ಗೆ ಕುರುಕ್ಷೇತ್ರದಲು ಶ್ರೀ ವಾರಣಾಶಿಯಲು ದಿಬ್ಬತಪೋ

೪೦. ಧನರ್ಗ್ಗಂ ಸಹಸ್ರಭೋಜನವನಿಕ್ಕಿದ ಫಲವಿದನಾವನೋರ್ವ್ವಂ ಪಾಪಕರ್ಮ್ಮನಳಿಹಿಂದ

೪೧. ದ್ವೇಷದಿಂದ ಕಿಡಿಸಿದನವಂ ಘೋರನರಕಾರ್ಣ್ಣವಕ್ಕೆ ಗಳಗಳನಿಪ್ಪತ್ತೊನ್ದು ತಲೆಯಹಿತರರೊಳ

೪೨. ಗಾಗಿ ಯಿಳಿವರು ॥ ಸ್ವದತ್ತಾಂ ಪರದತ್ತಾಂ ವಾ ಯೋ ಹರೇತ ವಸುಂಧರಾಂ ಷಷ್ಟಿರ್ವ್ವರುಷ ಸಹ

೪೩. ಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ । ಮದ್ವಂಶಜಾಃ ಪರಮಹೀವಂಶಜಾ ವಾ ಪಾಪಾದಪೇ

೪೪. ತಮನಸೋ ಭುಮಿ ಭೂಮಿಪಾಳಾಃ ಯೇ ಪಾಲಯಂತಿ ಮಮ ಧರ್ಮ್ಮಮಿದಂ ಸಮಸ್ತಂ ತೇಷಾಂ

೪೫. ಮಯಾ ರಚಿತಮಂಜಳಿರೇಷ ಮೂರ್ದ್ಧ್ನಿ ॥ ಜಯತ್ಯಾಬ್ರಹ್ಮಸಂಕೇತಂ ಸಾಕ್ಷಾದಬ್ಯಕ್ತ ಬೋಧಕಂ ಸ

೪೬. (ತ್ಯ)ಬ್ದವಾಚ್ಯಂ ತಲ್ಲಿಂಗಮಖಂಡಾನನ್ನಬುದ್ಬುದಂ ॥ ಜಯನ್ತಿ ಪಿಯೂಷಕಣಾ

೪೭. ನ್ನಿರನ್ತಃ ಮನೋರಥಪ್ರೇಮರಸಾನ್ದುಹನ್ತಃ ಸಮಸ್ತಲೋಕೇಪ್ರತಿವರ್ತ್ತನ್ತ್ಯಸ್ಸಮಗ್ರ

೪೮. ವಾಚಃ ಕವಿಪುಂಗವಾನಾಂ ॥ ಸತ್ಯವಿಪ್ರಮುಖಾಂಭೋಜಂಭೂತಾ ಹಿ ಸರಸ್ವತೀ .........

೪೯. ಜಗದ್ರಂಗೇ ಲೀಲಾಲಾಸ್ಯಂ ಮನೋಹರಂ ॥ ಕಿಂ ಸ್ತುವೇ(ವೈ)ಖ(ರೀಂ) ವಾಣೀ ಯಯಾ ಸಂ

೫೦. ತೇಜ ........... ಕಿಂ ಸ್ತುವೇ ಸಾಪಿ ಯತ್ರಾಸೀತ್ತತ್ಕವೀಂದ್ರ ಮುಖಾಂಬುಜಂ ॥ ಜನ್ಮಾನ್ತರ ಸಹಸ್ರೇಭ್ಯೋ ಯತ್ನಂ

೫೧. ಸಾರಮಹತ್ಸುಖಂ ತತ್ಸರ್ವ್ವಂ ಸತ್ಕವೀಂದ್ರೇಭ್ಯ ಸ್ಸೂಕ್ತಿಗಮ್ಯಮುದಾಹ್ರಿತಂ ॥ ನಮಶ್ಶಿವಾಯ

೫೨. ಸ್ವಸ್ತಿ ಸಮಸ್ತಪ್ರಸಸ್ತಿ ಸಹಿತಂ ಶ್ರೀಮನ್ಮಹಾಮಂಣ್ಡಳೇಸ್ವರಂ ದ್ವಾರಾವತೀಪುರವರಾಧೀಸ್ವರಂ ನೆರೆವೊಡೆಗಂ

೫೩. .......... ಹೆಂಮಾಡಿದೇವರಸರ ಕಟ್ಟಿದಲಗು ತಂತ್ರಪಾಳ ತೊಂಣ್ಡರಸನುಂ ಮಗಂ ಚಿಕ್ಕಬ್ರಮ್ಮಯ್ಯ

೫೪. ............ ದೇವರಸಂ ನೋಡಲು ಸೋಮಯ್ಯ ತೊಂಡಯ್ಯನು ಗೆಲ್ದು ಸೇವುಣ ರಾಜ್ಯವಂ ನಿಲಿಸಿ ಹಲಬರ ಕೊನ್ದು

೫೫. . . . . . . . . . ಶ್ರೀ ಸ್ವಯಂಭು ತೊಂಡೇಸ್ವರದೇವರ ಮಠದಾಚಾರ್ಯ್ಯರಾನೆಯದೇವರ ಶಿಷ್ಯ ಸರ್ವ್ವೇಸ್ವರಪಂಡಿತರ್ಗ್ಗೆ ಹನ್ನೆ

೫೬. ......... ಧರ್ಮ್ಮ ಕಾರೆಯ ಮಾಱಿಕೊಂಡವರಲ್ಲಿ ವಿ ೫ ಕೊಟ್ಟರು ಸೊಂಟಿಗೆ ಯೆಣ್ಣೆ

೫೭. @ ದೇವರ ಹೊರಗಣ ತೋಟ ಒಂದು

**೨೫. ಗೂಳಪಾಳ್ಯಂ (ಗುತ್ತಿ–ಆಂಧ್ರ ಪ್ರದೇಶ) ಕ್ರಿ.ಶ.೧೪೦೭**

ಆಂಧ್ರಪ್ರದೇಶದ ಗುತ್ತಿ ತಾಲೂಕಿನ ಗೂಳಪಾಳ್ಯಂ ಎಂಬ ಗ್ರಾಮದ ಪೂರ್ವ ದಿಕ್ಕಿನಲ್ಲಿರುವ ಹೊಲವೊಂದರಲ್ಲಿರುವ ಒಂದು ಕಲ್ಲಿನ ಮೇಲೆ ಈ ಶಾಸನವನ್ನು ಕೆತ್ತಲಾಗಿದೆ. ಇದು ತ್ರುಟಿತವಾಗಿದೆ. ವಿಜಯನಗರದ ದೊರೆ ದೇವರಾಯನ ರಾಜ್ಯಭಾರದ ಕಾಲದ ಈ ಶಾಸನದಲ್ಲಿ ಶಕ ೧೩೨೬ ಸರ್ವಜಿತು ಸಂವತ್ಸರ. ಜ್ಯೇಷ್ಟ ಶು ೧೫ ಶನಿವಾರ, ಸೋಮಗ್ರಹಣ ಎಂದು ತೇದಿ ಇದೆ. ಇದು ಕ್ರಿ.ಶ.೧೪೦೭. ಮೇ ೨೧ ಶನಿವಾರಕ್ಕೆ ಸರಿಹೊಂದುತ್ತದೆ. ಅಂದು ಚಂದ್ರಗ್ರಹಣವೂ ಇತ್ತು. ಹಂಡೆಪನಾಯಕ ಎಂಬುವವನು ಗುತ್ತಿಯ ಭಟ್ಟರೊಬ್ಬರಿಗೆ (ಹೆಸರು ಹಾಳಾಗಿದೆ) ತನ್ನ ಕೊಂಡಕುಂದೆಯಸೀಮೆಯ ವೃತ್ತಿಯ ಭೂಮಿಯನ್ನು ದತ್ತಿ ಕೊಟ್ಟನೆಂದು ಇದು ದಾಖಲಿಸುತ್ತದೆ. ಈ ಶಾಸನವನ್ನು ತಿಂಮೋಜನ ಮಗ ಲಂಗೋಜಯ್ಯನು ಬರೆದಿದ್ದಾನೆ.

೧. ಶ್ರೀ ಮಾಧವರಾಯನೇ ಗತಿ

೨. ಶ್ರೀ ಗಣಾಧಿಪತಯೇ ನಮಃ

೩. ಸ್ವಸ್ತಿ ಶ್ರೀಮನ್ಮಹಾರಾಜಾಧಿರಾಜ ರಾಜಪರಮೇ[ಶ್ವ]ರ

೪. ಶ್ರೀ ವೀರಪ್ರತಾಪ ದೇವರಾಯ ಮಹಾರಾಯರು ಸುಖ

೫. ಸಂಕಥಾ ವಿನೋದದಿಂದ ರಾಜ್ಯವನ್ನಾಳುತ್ತಿರಲು ಗುತ್ತಿಯ

೬. ............ .ಮಕಳು ಹಂಡೆಪನಾಯಕರು ತನಗೆ ಕೊಟ್ಟ

೭ ............ ಗುತ್ತಿ............ತಡಿಯಲ್ಲಿ ಕೊಂಡಕುಂ

೮. ............ ದೆಯ ಸೀಮೆಯ ವ್ರಿತ್ತಿಯುಮಂ

೯. ............ ಶಕ ವರುಶ ೧೩೭೯ ನೆಯ ಸರ್ವ್ವ

೧೦. [ಜಿತು ಸಂವತ್ಸರದ] ಜೇಷ್ಟ ಸು ೧೫ ಶನಿವಾರ

೧೧. ದ ಶ್ರೀ ಸೋಮಗ್ರಹಣ ಪುಣ್ಯ ಕಾಲದಲು ಭಾ

೧೨. ............ .ಭಟ್ಟರ ಮಕ್ಕಳು ಗುತ್ತಿಯ

೧೩. ............ .ಭಟರು ಕರಿಯ ಕೆಯಿ ವೊಕ್ಕಳದ ಬೀಜ

೧೪. ............ .ಗಡಿಂಬದ............ .ಯಕೆ ಬಿಟ್ಟ

೧೫. ............ನಲಿಹ

೧೬. ............ .ಇಕ್ಕುಳದ ಬೀಜವರಿ

೧೭. ............ .ಬೀಜವರಿ ಭೂಮಿಯನೂ

೧೮. ಧಾರಾ............ .ಆಚಂದ್ರಾರ್ಕ್ಕ ಸ್ಥಾಯಿಯಾಗಿ ನಿಮಗೆ

೧೯. ............ .ಭೋಗಿಸೋದು ಈ ಧರ್ಮ್ಮಕ್ಕೆ ಆ

೨೦. ............ .ವಾರಣಾಸಿಯಲು

೨೧. ಕಪಿಲೆ............ .ದಲು [ಹೋ]ಹರು ಮಂಗಳ ಮಹಾ

೨೨. ಶ್ರೀ ಶ್ರೀ ಶ್ರೀ ಶ್ರೀ............ .ಸಮ

೨೩. ಕ್ಷ ಕುಂದೂರು ಸೇನಬೋವ............ . .

೨೪. ............ .ಜಯಮ............ .

೨೫. ಯ ಶಾಸನದ ಬರೆದಾತ[ನು] ತಿಂಮೋಜನ

೨೬. ಮಗ ಲಿಂಗೋಜಯ್ಯ ॥

## ೨೬. ಕಡದರಬೆಂಚಿ (ಗುತ್ತಿ–ಆಂಧ್ರಪ್ರದೇಶ) ಕ್ರಿ.ಶ.೧೫೭೭

ಆಂಧ್ರಪ್ರದೇದ ಅನಂತಪುರ ಜಿಲ್ಲೆಯ ಗುತ್ತಿ ತಾಲೂಕಿನ ಕಡದರಬೆಂಚಿ ಎಂಬ ಗ್ರಾಮದ ಉತ್ತರ ದಿಕ್ಕಿನಲ್ಲಿರುವ ಭಾವಿಯೊಂದರ ಬಳಿಯಿರುವ ಒಂದು ಕಲ್ಲಿನ ಮೇಲೆ. ಇದು ತ್ರುಟಿತವಾಗಿದೆ. ಶ್ರೀರಂಗರಾಯದೇವ ಮಹಾರಾಯನ ಆಳ್ವಿಕೆಯ ಕಾಲದ ಇದರಲ್ಲಿ ಶಾಲಿವಾಹನ ಶಕ ೧೫೦೦ ಈಶ್ವರ ಸಂವತ್ಸರ, ಜೇಷ್ಟ, ಬ ೧೨ ಎಂದು ತೇದಿ ಇದೆ. ಅದು ಕ್ರಿ.ಶ.೧೫೭೭ ಜೂನ್ ೧೩ ಗುರುವಾರಕ್ಕೆ ಸರಿಹೊಂದುತ್ತದೆ. ದೊರೆಯು ರಾಜ ಹಂಡೆಯ ಹನುಮನಾಯಕ ಅಯ್ಯನವರಿಗೆ ಆದವಾನಿ ದುರ್ಗಕ್ಕೆ ಸಲ್ಲುವ ಪೆರು............ .ಲ ಕೆರೆಯ ಜೀರ್ಣೋದ್ಧಾರಕ್ಕಾಗಿ ಗ್ರಾಮವೊಂದನ್ನು ಸರ್ವಮಾನ್ಯವಾಗಿ ಕೊಡುತ್ತಾನೆ ಎಂದು ದಾಖಲಿಸಿದೆ.

೧. ಶುಭಮಸ್ತು

೨. ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶ

೩. ಕವರುಷ ೧೫೦೦ ನೆಯ ಯೀಶ್ವರ ಸಂವತ್ಸರದ ಜೇ

೪. ಷ್ಟ ಬ ೧೨ ಯ ಶ್ರೀಮನ್ಮಹಾರಾಜಾಧಿರಾಜ ರಾಜಪ

೫. ರಮೇಶ್ವರ ಶ್ರೀ ವೀರ ಪ್ರತಾಪ ಶ್ರೀರಂಗರಾಯದೇ

೬. ವ ಮಹಾರಾಯರು ಪ್ರುಥ್ವೀ [ಶಿಂಹಾಸನಾ] ರೂಢರಾಗಿ

೭ ರಾಜ ಶ್ರೀ ಹಂಡೆಯ ಹನುಮನಾಯಕ ಅಯ್ಯನವರಿ

೮. ಗೆ ಪಾಲಿಸಿದಂಥಾ ಆದವನಿ ದುರ್ಗಕ್ಕೆ ಸಲುವ ಪೆರು

೯. ......................... ಲ [ಕೆರೆ]ಗೆ ಸಲುವ ......................... ಮದಲರ

೧೦. ......................... ಯವನರ .........................

೧೧. .........................

೧೨. ......................... ಮಾರುಗೆ ಕೊಟ್ಟ

೧೩. (ರಿಂದ ೧೫ ಸಾಲುಗಳು ಹಾಳಾಗಿವೆ.)

೧೬. ......................... ಅಗಿಸಿ ಸಿ ನೀರು ಕಾಣಿಸಿದ ನಿಮಿತ್ತ. .

೧೭. .........................

೧೮. ......................... ದಿ ನಾಡ

೧೯. ......................... [ಲಿ]ಂಗದ ಹಳ್ಳಿಯಲು

೨೦. ........................ ಮಾನ್ಯವನು ಕೊಟೆಉ ಆ ಮಾಂ

೨೧. ........................ ಸರ್ವಸಾಮಾನ್ಯವಾಗಿ ನಿಂ

೨೨. ........................ [ಪ] ಉತ್ರ ಪಾರಂಪರ್ಯ

೨೩. ಚಂದ್ರರು ಉಳಂದಿಗೆ ........................

೨೪. ........................ ಯೆಂದು ಕೊಟ್ಟ ........................

೨೫. ಶಾಸನಶ್ರೀ ಸ್ವದತ್ತಾ ........................ ಪ

೨೬. ರದತ್ತಾನುಪಾಲನ ........................ ತ್ತಾಪ [ಹಾ]ರೇಣ

೨೭. ಸ್ವದತ್ತಂ ನಿಷ್ಫಲಂ............ .

**೨೭. ಮುದಗಲ್(ರಾಯಚೂರು ಜಿಲ್ಲೆ) ಕ್ರಿ.ಶ.೧೫೬೮**

ಮುದಗಲ್ ಕೋಟೆಯ ಬಾಗಿಲ ಬಲಗೋಡೆಯ ಜಾಗದಲ್ಲಿನ ಬುರುಜಿನ ಮೇಲೆ ಇಡಲಾದ ತೋಪಿನ ಮೇಲಿನ ಲೋಹ ಶಾಸನ. ಶಾಸನದಲ್ಲಿ ಪ್ರಭವ ಸಂವತ್ಸರದ ಉಲ್ಲೇಖವಿದ್ದು, ಇದು ಕ್ರಿ.ಶ.೧೫೬೮/೧೬೨೮ಕ್ಕೆ ಸರಿಹೋಗಬಹುದು. ಹಂಡರಸ ಗಂಡ ಎಂಬ ಉಲ್ಲೇಖವಿದೆ.

೧. ಶ್ರೀ ಪ್ರಭವ ಸಂವತ್ಸರದಲು ಹಂಡ

೨. ರಸ ಗಂಡ

**೨೮. ಮುಕ್ಕುಂದೆ(ಸಿಂಧನೂರು ತಾ., ರಾಯಚೂರು ಜಿಲ್ಲೆ) ಕ್ರಿ.ಶ.೧೫೯೪**

ರಾಯಚೂರು ಜಿಲ್ಲೆಯ ಸಿಂಧನೂರು ತಾಲೂಕಿನ ಮುಕ್ಕಂದೆ ಗ್ರಾಮದ ವೀರಲಿಂಗೇಶ್ವರ ದೇವಾಲಯದ ಬಲಗಡೆ ದೊಡ್ಡ ಗುಂಡಿನ ಮೇಲಿನ ಶಾಸನವಿದು. ತ್ರುಟಿತ ಮತ್ತು ಅಪೂರ್ಣ. ಕಾಲದ ಉಲ್ಲೇಖವಿಲ್ಲದ ಈ ಶಾಸನದಲ್ಲಿ ಜಯ ಆಶ್ವೀಜ, ಶು.೧೦ ರ ಉಲ್ಲೇಖವಿದ್ದು ಇದು ಕ್ರಿ.ಶ.೧೫-೫-೧೫೯೪ ರ ಶನಿವಾರಕ್ಕೆ ಸರಿಹೊಂದುತ್ತದೆ. ಮಹಾರಾಜ ಹಂಡೆ ಯಿಂಮಡಿ............ .(ಹೆಸರು ಹಾಳಾಗಿದೆ) ರ ಉಡುಕುಂದಿ ಸೀಮೆಯ ಮುಕ್ಕುಂದಿ ಗ್ರಾಮದ ಮುರಾರಿ ದೇವಾಲಯದ ಸಮೀಪದಲ್ಲಿ ಏನನ್ನೋ ಮಾಡಿಸಿದ ಉಲ್ಲೇಖವಿದೆ.

೧. ಶುಭಮಸ್ತು ॥ ನಮಃಸ್ತುಂಗ ಸಿರಶ್ಚುಂಬಿ ಚಂದ್ರಚಾಮರ ಚಾರವೇ। ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ । ಸ್ವಸ್ತಿ ಶ್ರೀ ಜಯಾ

೨. ಸಂವತ್ಸರದ ಆಶ್ವೀಜ ಸು. ೧೦ ಲು ಶ್ರೀ ಮನ್ಮಹಾರಾಜಾಧಿರಾಜ ರಾಜೇಶ್ರೀ ಹಂಡೆ ಯಿಂಮಡಿ ............ ರಿ ............ ಮಿ ............ ನಾಯಕ ಸು ............ ರೊಬರಕಾ............ರ್ಯ

೩. ಯರು ಹ। ರ ಉಡಕುಂದೆ ಸೀಮೆಯ ವಳಗಣ ಗ್ರಾಮ ಮುಕ್ಕೊಂದಿಯ ಮುರಾರಿದೇವರ ಸಮೀಪದಲು ರಾಜೇಶ್ರೀ ಹಂಡೆ ಯಿಂಮಡಿ ತಿಲಖ ಮಾಡಿ ............ ಯ ............

**೨೯. ಮುಕ್ಕುಂದೆ(ಸಿಂಧನೂರು ತಾ., ರಾಯಚೂರು ಜಿಲ್ಲೆ) ಕ್ರಿ.ಶ.೧೬೦೩**

ರಾಯಚೂರು ಜಿಲ್ಲೆಯ ಸಿಂಧನೂರು ತಾಲೂಕಿನ ಮುಕ್ಕುಂದೆ ಗ್ರಾಮದ ಸಮೀಪದಲ್ಲಿರುವ ಅರಳೀಹಳ್ಳಿಯೆಂಬ ಬೇಚಿರಾಕ್ ಗ್ರಾಮದಲ್ಲಿನ ಶಾಸನವಿದು. ಶಾಸನದಲ್ಲಿ ಕಾಲವು ಶಾಲಿವಾಹನ ಶಕವರ್ಷ ೧೫೨೫. ಸೋಭಕೃತು. ಶ್ರಾವಣ, ಬ೫ರಲ್ಲಿ ಅಂದರೆ ಕ್ರಿ.ಶ.೧೬-೯-೧೬೦೩ ರ ಮಂಗಳವಾರಕ್ಕೆ ಸರಿಹೊಂದುತ್ತದೆ. ಹಂಡೆ ಮಲಕಪ್ಪನಾಯಕನು ಸಜ್ಜನ ಶುದ್ಧ ಶಿವಾಚಾರ ಸಂಪನ್ನನಾದ ಬೆಂಡೆಗೆರೆಯ ಸಿದ್ಧವೀರಂಣದೇವನ ಶಿಷ್ಯನಾದ ಭಂಡಾರಿ ಸಿಧರಾಮದೇವನಿಗೆ ಅರೆಯಹಳ್ಳಿ ಗ್ರಾಮವನ್ನು ಪುರವರ್ಗವಾಗಿ ದಾನ ನೀಡುತ್ತಾನೆ. ತನ್ನ ತಂದೆ ತಾಯಿಗಳಿಗೆ ಪುಣ್ಯವಾಗಬೇಕೆಂದು ನೀಡಿದ ಈ ಗ್ರಾಮಕ್ಕೆ ಚತುಸ್ಸೀಮೆಗಳ ಮೇರೆಯನ್ನು ಹೇಳಿದೆ.

೧. ನಮಸ್ತುಂಗ ಶಿರಸ್ತು

೨. ೦ಭಿ ಚಂದ್ರಚಾಮರ ಚಾ

೩. ರುವೇ ತ್ರೈಲೋಕ್ಯ ನಗರಾ

೪. ರಂಭಾ ಮೂಲಸ್ತಂಭಾ

೫. ಯ ಶಂಭುವೇ ।

೬. ಶ್ರೀ ಸ್ವಸ್ತಿ ಶ್ರೀಜಯಾದ್ಭುದಯ ಶಾಲಿವಾಹನ ಶಕ ವರುಶಂಗಳು

೭. ೧೫೨೫ ನೆಯ ಶೋಭಕ್ರುತು ಸಂವತ್ಸರದ ಶ್ರಾವಣ ಬ ೫ ಲು ಶ್ರೀಮತು ಸಜ್ಜನ ಸುದ್ಧ ಶಿವಾ

೮. ಚಾರ ಸಂಪನರಾದ ಆಚಾರದ ಅಗ್ರಗಣ್ಯರಾದ ದೇವಾ ಪ್ರುಥ್ವೀ ಮಹಾಮಹತ್ತಿನೊಳಗಾದ ಬೆಂ.

೯. ಡಗೆರೆಯ ಸಿದವೀರಂಣದೇವರ ಶಿಷ್ಯರು ಭಂಡಾರಿ ಸಿಧರಾಮದೇವರಿಗೆ ಶ್ರೀಮನ್ಮಹಾ

೧೦. ರಾಜಾಧಿರಾಜ ರಾಜೇಶ್ರೀ ಹಂಡೆ ಮಲುಕಪ್ಪನಾಯಕರು ಕೊಟ್ಟ ಪುರವರ್ಗ*

೧೧. ಸಿಲಾ ಶಾಸನದ ಕ್ರಮವೆಂತೆಂದರೆ ಉಡುಕುಂದಿ ಸೀಮೆವಳಗಣ ತುಂಗಭದ್ರಾ

೧೨. ತೀರ ಅರಯಹಳಿಯ ಗ್ರಾಮವನು ಸೋಮವಾರ ಸಂಕುರಾನ್ತಿ ಪುಂಣ್ಯಕಾಲದಲು ನಂ.

೧೩. ಮ ಗುರುಹಿರಿಯರು ಮತಾಪಿತುರಗಳಿಗೆ ಪುಂಣ್ಯವಾಗಬೇಕೆಂದು ಮನೋ

೧೪. ವಾಕ್ಕಾಯ ಕರ್ಮ ತ್ರಿಕರಣ ಶುಧಿಯಾಗಿ ಉತ್ತರದ ಮುಕುಂದಿ ಮೇಲೆ ಪೂರ್ವ

೧೫. ನದಿ ತಟಾಕ ಮೇಲೆ ದಕ್ಷಿಣ ಸಿಂಗಾಪುರ ಮೇರೆ ಪಶ್ಚಿಮ ಮುಕುಂದಿ ಹೊಲ

೧೬. ಮೇರೆಯಾ ಚತುಸ್ಸೀಮೆ ವಳಗಾದ ಅರೆಹಳಿ ಗ್ರಾಮವನೂ ದಾರಾಪೂರ್ವಕ

೧೭. ವಾಗಿ ಪುರವರ್ಗವನು ಮಾಡಿಕೊಟು ಯಿದೇಲು ಆ ಗ್ರಾಮದಲು(ಈ ಶಾಸನದ ಪಕ್ಕದಲ್ಲಿ ಮುಂದುವರಿಸಲಾಗಿದೆ)

೧೮. ಕಾಡಾರಂಭ ನೀರಾರಂಭ ಅಕ್ಷೀಣಿ ಆಗಾಮಿ ಜಲಪಾಶಾಣ

೧೯. ನಿಧಿ ನಿಕ್ಷೇಪ ಸಿಧ ಸಾಧ್ಯಂಗಳೆಂಬ ಅಷ್ಟ ಭೋಗ ತೇಜೋ

೨೦. ವಾರ್ಧಿನೆಯನು ನಿಂಮ್ಮ ಪುತ್ರ ಪಉತ್ರ ಪಾರಂಪರಿ

೨೧. ಯಾಗಿ ಆಚಂದ್ರಾರ್ಕ್ಕ ಸ್ಥಾಯಿಗಳಾಗಿ............ ............ .ಓಂ

೨೨. ಅನುಭವಿಸುವದುಯೆಂದು ಕೊಟ

೨೩. ಅರೆಯಹಳಿಯ ಪುರವರ್ಗ ದಾನಪಾಲನೆಯ್ಯೋರ್ಮಧ್ಯೇ ದಾನರ್ಛೇಯೋ ನ್ರುಪಾ

೨೪. ಲನಾದಾನಾ ಸ್ವರ್ಗಮವಾಪ್ನೋತಿ ಪಾಲನದಚ್ಯುತಂ ಪದಂ

೨೫. ವಕುದತ್ತಂ ಮನೋದತ್ತಂ ಧಾರಾದತಂ ನದೀಯತೆ ಶಷ್ಟಿರ್ವರುಶ

೨೬. ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ.

೨೭. ಸ್ವಧರಾ ದ್ವಿಗುಣಂ ಪುಣ್ಯಂ ಪರದತಾನು ಪಾಲನ ಪರ

೨೮. ದತ್ತಾಪ ಹಾರಿಣಾಂ ಸ್ವದತಂ ನಿಷ್ಫಲಂ ಭವೇತ್

**೩೦. ಅಂದ್ರಾಳು(ಬಳ್ಳಾರಿ ಜಿಲ್ಲೆ – ಬಳ್ಳಾರಿ ತಾಲೂಕು) ಕ್ರಿ.ಶ.೧೬೬೩**

ಆಂಜನೇಯ ದೇವಾಲಯದ ಮುಂದೆ ಶಾಸನದಲ್ಲಿ ಶಕ ವರ್ಷ ೧೫೮೪ ಶುಭಕೃತ್ ಸಂವತ್ಸರ ಕಾರ್ತಿಕ ಮಾಸ ಶು. ೧೫ ಚಂದ್ರಗ್ರಹಣ ಎಂದಿದ್ದು ಇದು ಕ್ರಿ.ಶ. ೧೭–೧೦–೧೬೬೩ ಕ್ಕೆ ಸರಿಹೊಂದುತ್ತದೆ. ಆದರೆ ಆದಿನ ಚಂದ್ರಗ್ರಹಣವಿರುವುದಿಲ್ಲ. ಹಂಡೆ ಚಿಕಮಲುಕಪನಾಯಕರು ಶಿವಬಸಪ್ಪ ಎಂಬುವವನಿಗೆ ಬಳ್ಳಾರಿದುರ್ಗದ ಸೀಮೆಗೆ ಸೇರಿದ ಹಂದರಹಾಳು ಎಂಬ ಗ್ರಾಮವನ್ನು ದಾನ ನೀಡುತ್ತಾನೆ. ಈ ಪ್ರದೇಶವನ್ನು ಅಲಿಪಂಣ ಸಾಹೇಬ ಎಂಬುವವನು ಇವರ ವಜೀರಿಕೆಗೆ ಕೊಟ್ಟಿದ್ದು.

೧. ಶುಭಮಸ್ತು । ನಮಸ್ತುಂಗ ಶಿರ

೨. ಷ್ಟುಂಬಿ ಚಂದ್ರಚಾಮರ ಚಾರವೇ ॥ ತ್ರೈ

೩. ಲೊಕ್ಯ ನಗರಾರಂಭ ಮೂಲಸ್ತಂಬಾ

೪. ಯ ಶಂಭವೇ । ಸ್ವಸ್ತಿಶ್ರೀ ಜಯಾಭ್ಯುದಯ

೫. ಶಾಲಿವಾಹನ ಶಕವರ್ಷ ೧೫೮೪ನೆಯ

೬. ಶುಭಕೃತ್ಸಂವತ್ಸರದ ಕಾರ್ತಿಕ ಸು. ೧೫ ಚಂ

೭. ದ್ರಗ್ರಹಣ ಪುಣ್ಯಕಾಲದಲಿ । ಶ್ರೀ ಮನ್ಮ

೮. ಹಾ ರಾಜಾಧಿರಾಜ ಖಂಡೆಯ ಸಮಸ್ತ

೯. ವೀರ ಪ್ರತಾಪದೇವರು ಶ್ರೀ ರಾಮೇಶ್ವರ ದೇವರ ವರಪು

೧೦. ತ್ರರಾದ ಹಂಡೆ ಚಿಕಮಲಕಪನಾಯಕರು ರಾ

೧೧. ಕಾರ ಶಿವಬಸಪ್ಪಗೆ ಶಿಲಾಕ್ಷರದಿಂದ ಬರ ಶಿ

೧೨. ಕೊಟ ಗ್ರಾಮ ದಾನದ ಶಾಸನದ ಕ್ರಮವೆಂತೆಂದರೆ

೧೩. ಆಲಿಂಪಣ ಸಾಹೇಬರು ನಮಗೆ ವಜೀರಿಕೆಗೆ

೧೪. ಕೊಟ್ಟ ಪರಿಗಣದ ಬಳ್ಳಾರಿ ದುರ್ಗಕೆ ಸಲುವ ಶೀಮೆ

೧೫. ಯವೊಳಗಣ ಹಂದರಹಾಳೆಂಬ ಗ್ರಾಮ

೧೬. ವನು ............. ಸರ್ವಹಿತವಾಗಿ ಸಮರ್ಪಿ

೧೭. ಸ್ತೆವು .............. ಗಾದ ವೀರ

೧೮. .............. ರಾ ........... ದರ

**೩೧. ಕೂಡ್ಲಿ ಶೃಂಗೇರಿ ಮಠ(ಶಿವಮೊಗ್ಗ ಜಿಲ್ಲೆ) ಕ್ರಿ.ಶ.೧೬೬೭**

ಈ ಕೂಡ್ಲಿ ಶೃಂಗೇರಿಮಠದ ಶ್ರೀ ಮದ್ರಾಜಗುರು ಶೃಂಗೇರಿ ಶ್ರೀ ನಾರಸಿಂಹಭಾರತಿ ಸ್ವಾಮಿಗಳವರ ಕರಕಮಲಸಂಜಾತರಾದ ಶೃಂಗೇರಿ ಶ್ರೀ ಶಂಕರಭಾರತಿ ಸ್ವಾಮಿಗಳಿಗೆ ಹಂಡೆ ಪಾಳೆಯಗಾರ ರಾಮಪ್ಪನಾಯಕರ ಪುತ್ರ ಪವಾಡಪ್ಪನಾಯಕರು ಬರೆದುಕೊಟ್ಟ ಭೂದಾನ ಧರ್ಮಶಾಸನ ಹೀಗಿದೆ. ಪ್ಲವಂಗ ಕಾರ್ತಿಕ ಶು ೧೫ ಶಾ.ಶ.೧೫೮೯ ಅಂದರೆ ಕ್ರಿ.ಶ. ೧೬೬೭ ರಂದು ಗ್ರಹಣ ಪುಣ್ಯ ಕಾಲದಲ್ಲಿ ಶ್ರೀ ವಿದ್ಯಾಶಂಕರದೇವರ ದೀಪಾರಾಧನೆಗೆ ಅಲ್ಲಾಪುರವೆಂಬ ಗ್ರಾಮವನ್ನು ಸಕಲ ಸುವರ್ಣಾದಾಯ ಸಹಿರಣ್ಯೋದಕ ಧಾರಾಪೂರ್ಣಕ ಗ್ರಾಮಸ್ಥಳ ನಿರ್ದೇಶನ ಮಾಡಿ ಬಿಟ್ಟುಕೊಟ್ಟಿರುವರು ಹಂಡೆ ಅರಸರು ಧಾರ್ಮಿಕ ಕಾರ್ಯಗಳಿಗೆ ಅನೇಕ ಕಡೆಗೆ ದಾನ ನೀಡಿದಂತೆ, ಕೂಡ್ಲಿ ಶೃಂಗೇರಿ ಮಠಕ್ಕೂ ಇಲ್ಲಿ ದಾನ ನೀಡಿದ್ದಾರೆ.

**೩೨. ಬಾದರ್ಲಿ(ಸಿಂಧನೂರು ತಾ.-ರಾಯಚೂರು ಜಿಲ್ಲೆ) ಕ್ರಿ.ಶ.೧೬೬೭**

ರಾಯಚೂರು ಜಿಲ್ಲೆಯ ಸಿಂಧನೂರು ತಾಲೂಕಿನ ಬಾದರ್ಲಿ ಗ್ರಾಮದಲ್ಲಿರುವ ಹನುಮಂತನ ಗುಡಿಯ ಸಮೀಪದ ಹೊಲದಲ್ಲಿರುವ ಶಾಸನವಿದು. ಶಾಸನದ ಕಾಲವು ಶಾಲಿವಾಹನ ಶಕ ೧೫೯೯,

ಹೇಮಳಂಬಿ, ಶ್ರಾವಣ ಬ ೫ ಎಂದಿದ್ದು, ಇದು ಕ್ರಿ.ಶ.೧೬೬೭ಕ್ಕೆ ಸಮನಾಗುತ್ತದೆ. ಆದರೆ ಹೇಮಳಂಬಿ ಸಂವತ್ಸರವು ಕ್ರಿ.ಶ.೧೬೫೭ ರಲ್ಲಿ ಬರುತ್ತದೆ. ಹಂಡೆ ಹಣುಮಿನಾಯಕರ ಉಲ್ಲೇಖವಿದೆ.

೧. ಸ್ವಸ್ತಿ ಶ್ರೀಜಯಾದ್ಬುದಯ ಶಾಲಿವಾಹನ ಸಕವರುಷಂಗಳು

೨. ೧೫೯೯ ನೆಯ ಹೇಮಳಂಬಿ ನಾಮ ಸಂವತ್ಸರದ ಶ್ರಾವಣ ಬಹು

೩. ೪ ೫ ಲು ಶ್ರೀಮನ್ಮಾಹಾರಾಜಾಧಿರಾಜ ರಾಜೇಶ್ರೀಯದರ ಗೋತ್ರದ

೪. ಹಂ[ಡೆ] ಹಣುಮಿನಾಯಕರು ಕೊ ............. ಶ್ರಿ ........... ತುಲುಕ

೫. ............ ಅಮರ ............ (ಮುಂದೆ ಮಣ್ಣಿನಲ್ಲಿ ಹೂತುಹೋಗಿದೆ)

**೩೩. ಎಸ್.ಮಣೂರು(ಸಿರುಗುಪ್ಪ ತಾ-ಬಳ್ಳಾರಿ ಜಿಲ್ಲೆ) ಕ್ರಿ.ಶ.೧೭ನೆಯ ಶತಮಾನ**

ಬಳ್ಳಾರಿ ಜಿಲ್ಲೆಯ ಸಿರಗುಪ್ಪ ತಾಲೂಕಿನ ಎಸ್.ಮಣೂರು ಗ್ರಾಮದ ಆಂಜನೇಯ ದೇವಾಲಯದ ಕಂಬದಲ್ಲಿನ ಶಾಸನ ಇದಾಗಿದೆ. ವೆಂಕಟಪತಿ ದೇವರಾಯನು ಪೆನುಗೊಂಡೆಯಿಂದ ಆಳುತ್ತಿದ್ದಾಗ ಅವನ ಸಾಮಂತನಾದ ಹಂಡೆ ಹನುಮಿ(ಹನುಮ)ನಾಯಕ ಅಂಕುಸರಾಯನು ರಾಜನಿಂದ ಅಮರಮಾಗಣೆಯಾಗಿ ಪಡೆದಿದ್ದ ಬಳ್ಳಾರಿ ಸೀಮೆಯ ಮಣುಊರನ್ನು ತನ್ನ ಮಗನಾದ ರಾಮಪ್ಪನಿಗೆ ಪುಣ್ಯವಾಗಬೇಕೆಂದು ಕರಿಯವೀರಣ್ಣೊಡಯನ ಶಿಷ್ಯ ನಾದ ಚನ್ನಮಲ್ಲಿಕಾರ್ಜುನದೇವನ ಶಿಷ್ಯನಾದ ಕೇದಾರದೇವನಿಗೆ ದಾನವಾಗಿ ನೀಡುತ್ತಾನೆ.

**ಮೊದಲ ಮುಖ**

೧. ............ ಯ ಹೇ

೨. ............ ಖಿ ನಾಮ

೩. ............ ದ ಮಾ

೪. ............ ಸೆ ಸ್ತಿರವಾ

೫. ............ ಮದ್ರಾಜಾ

೬. ............ ಪರಮೇಶ್ವರ

೭. ............ ಕಟಪತಿ ದೇ

೮. ............ ಯರು ಪೆನು

೯. ............ ಟಣದಲ್ಲಿರ

೧೦. ............ ಸ ನಾರಾಗಿ

೧೧. ............ ಂದಿ ಯಿದು

೩೬. ಮಿನಾಯಕ ಅ

೩೭. ಂಕುಶರಾಯ

೩೮. ರು ಕೊಟ ಭೂದಾ

**ಮೂರನೇಯ ಮುಖ**

೩೯. ನಧರ್ಮಸಾಸ

೪೦. ನದ ಪಡೆದ

೪೧. ಕ್ರಮವೆಂತೆ

೪೨. ಂದರೆ ರಾಊರ

೪೩. ನಮಗೆ ಅಮರ

೪೪. ಮಾಗಣೆಗೆ ಪಾ

೪೫. ಲಿಸಿದ ಬಳಾರಿ ಸೀ

೧೨. ............ ಸಮಸ್ತಮ
೧೩. ............ ಯಮ ನಿಯ
೧೪. ............ ದಾಯಮ
೧೫. ............ ಧ್ಯಾನ ಧಾರ
೧೬. ............ ಷ್ಟಾಂಗ ಯೋ
೧೭. ............ ರಾ.ಶ್ರೀ ನಂ
೧೮. ............ ಮಂಗ್ಗಿನಾಥ
೧೯. ............ ದ್ರ ದೇವರು ಯ
೨೦. ............ ಪಾರಂಗ ಸಿ
೨೧. ............ ವದಾಲ್ಲಿದ್ದೆ ಧೇ
೨೨. ............ ಮಹಾಮ

**ಎರಡನೆಯ ಮುಖ**

೨೩. ಹತ್ತಿ ನೊಳಗಾ
೨೪. ದ ದಶಮುಖ
೨೫. ದ ಕರಿಯ ವೀರ
೨೬. ಂಣೊಡೆರ ದೇ
೨೭. ವರಸಿಷ್ಯರು ಚೆ
೨೮. ಂನ ಮಲ್ಲಿಕಾರ್ಜು
೨೯. ನ ದೇವರು ಅವ
೩೦. ರ ಸಿಷ್ಯರು ಭಂ
೩೧. ಡಾರಿ ಕೇದಾರ
೩೨. ದೇವರಿಗೆ ಶ್ರೀಮ
೩೩. ನ್ಮಹಾರಾಜಾಧಿ
೩೪. ರಾಜರಾಜಶ್ರೀ
೩೫. ಹಂಡೆಹನು
೪೬. ಮೆಯೊಳಗಣ
೪೭. ಮಣುವೂರ ಗ್ರಾ
೪೮. ಮವನುನಂಮ
೪೯. ಕೊಮಾರದೊಢ
೫೦. ತಿ ಆ. ರಾಮಪ್ಪ
೫೧. ಗೆ ಕೈಲಾಸಪುಣ್ಯ
೫೨. ಲೋಕವಾಗಬೇಕೆ
೫೩. ಂದು ಅಗ್ರಾಮಕೆ

**ನಾಲ್ಕನೆಯ ಮುಖ**

೫೪. ಸಲುವ ಚತುಸೀಮೆವಳುಗಾ
೫೫. ಗಿ ಕಾಡರಂಭ ನೀರಾರಂಬ
೫೬. ಸಕಲ ಸುವರ್ಣಾದಾಯ ಸ
೫೭. ಕಲ ಭತ್ತಾದಾಯ ಸುಂ
೫೮. ಕ ಅನು ಪನ ಕಾಸು ಹಲು
೫೯. ವೊಲ ಹರಿಪುರವಳ್ಳಿಗೆ ಸಕಲ
೬೦. ಜೊಪ್ಪ ............ ಸಹವಾಗಿ
೬೧. ಧಾರಾಪೂರ್ವಕವಾಗಿ ಲಿಂಗ
೬೨. ಗ ಮುದಾಕಲ್ಲು ಹಾಕಿ ಮರ
೬೩. ವರ್ಗವಮ್ಮಾಡಿ ನಿಂಮ
೬೪. ಮುತ್ರಪವುತ್ರ ಪಾರಂಪ
೬೫. ರೆ ಆಚಂದ್ರಾರ್ಕ ಸ್ಥಾಯ
೬೬. ವಾಗಿ ಅನುಭುವಿ
೬೭. ಸಿ ಕೊಂಡಿಹುದುಯ
೬೮. ಂದು ಬರೆಸಿಕೊಟ್ಟ
೬೯. ದಾನ ಪಟ್ಟೆ ।

## ೩೪. ಮರಳಿ(ಲಿಂಗಸೂಗೂರು ತಾ., ರಾಯಚೂರು ಜಿಲ್ಲೆ) ಕ್ರಿ.ಶ.೧೭ನೆಯ ಶತಮಾನ

ರಾಯಚೂರು ಜಿಲ್ಲೆಯ ಲಿಂಗಸೂಗುರು ತಾಲೂಕಿನ ಮರಳಿ ಎಂಬ ಗ್ರಾಮದಲ್ಲಿರುವ ಹನುಮಂತನ ದೇವಾಲಯದಲ್ಲಿರುವ ಶಾಸನವಿದು. ಶಾಸನೋಕ್ತ ಕಾಲವು ಸರ್ವಧಾರಿ, ವೈಶಾಖ, ಶು ೩ ಎಂದಿದ್ದು ಇದು ಕ್ರಿ.ಶ.೧೭ನೆಯ ಶತಮಾನಕ್ಕೆ ಸೇರಿದುದಾಗಿದೆ. ಶಾಸನದ ಆರಂಭದಲ್ಲಿ ಕಲ್ಲೇಶ್ವರದೇವರನ್ನು ಕೀರ್ತಿಸಲಾಗಿದೆ. ಹಂಡೆಪಾಳೆಗಾರರ ಅರಸ ಹನುಮನಾಯಕ ಅಂಕುಷರಾಯನು ವಿನಯದಿಂದ ತನ್ನ ಗುರು ಕರಡಿಲಿಂಗಬಸಪಯ (?) ರಾಜದೇವರಿಗೆ ದಾನವನ್ನು ಬಿಟ್ಟ ವಿವರವಿದೆ. ತಾವರಗೆರೆ ಸೀಮೆಗೆ ಸಲ್ಲುವ ಮರಳಿ ಎಂಬ ಗ್ರಾಮವನ್ನು ಗುರುಗಳಿಗೆ ಅರ್ಪಿಸಲಾಗಿದೆ. ನಾಲ್ಕೂ ಸೀಮೆಯ (ಗಡಿಗಳ) ವಿವರವನ್ನು ಹೇಳುವ ಭಾಗದಿಂದ ಶಾಸನ ಸಂಪೂರ್ಣ ಹಾಳಾಗಿದೆ.

೧. ೦॥ ಶ್ರೀ ಸರ್ವಧಾರಿ ನಾಮಸಂತ್ಸ

೨. ರದ ವಯಿಶಾಕ ಶುದ ೩ಲು ಶ್ರೀಮ

೩. ದನೇಕ ಬ್ರಂಹ್ಮಾಂಡ ಭಾಂಡಗರ್ಭ

೪. ಗರ್ಭೀಕೃತ ವಿಧಿಮಧುಸೂದನ ತ್ರೇ.

೫. ದಸಾಧಿ ಸರದನೇಕ ದೇವತಾಮಗು

೬. ಟ ಮಣಿಗಣ ಕಿರುಣ ದೀಪ್ತ ಪಾದಪ

೭. [ದ್ಮೋ]ಪ । ಸರಸಿ । ಲೀಲೋಸ್ವೀಕ್ರುತ । ಕಲ್ಲೇ[ದೇವ]

೮. ರಂ । ಮಹಿದೇವ ಪ್ರಥ್ವೀ ಮಮಾ

೯. ಹತ್ತು ಮುಖ್ಯವಾದ । ಗುರುಮೂರ್ತಿ

೧೦. ಯತ್ತಿರಾಯ ಕರಡಿ ಲಿಂಗಬಸ

೧೧. ಪಯರಾಜದೆವರ ದಿವ್ಯಪದ ಪದ್ಮಂ

೧೨. ಗಳಿಗೆ । ಸ್ವಾಮಿಯ ಸಿಷ್ಯ ಹಂಡೆಯ

೧೩. ಹನುಮಿನಾಯಕ ಅಂಕುಷರಾಯ

೧೪. ನು ಸದುವಿನಯ ನಯಭಕ್ತಿಯಿಂದ

೧೫. ಸಾಷ್ಟಾಂಗ ವ ............ । ಪೊಡವಟ್ಟು ಮಾಡುವ

೧೬. ............ ರನಹಲು । ನಾವು । ಸ್ವಾಮಿಯ ಪಾದಕ್ಕೆ

೧೭. ............ ಟದಾನ ಪಟಿದ ॥ ಬೀಂನವತ್ತಳೆಯ ಶಾ

೧೮. ನ । ವೆಂತೆದರೆ । ತಾವರೆಗೆರೆಯ ಸೀ

೧೯. ಗೆ ಸಲುವ । ಕಿಟದೂರ ಸಮತ್ತಿನೊಳ

೨೦. ............ ಕಮ್ಮರಿಳಿಯೆಂಬ । ಗ್ರಾಮವನು

೨೧. ............ .ಗ್ರಾಮಕೊ। ಚತುಸೀಮೆ (ಮುಂದಿನ ಸಾಲುಗಳು ಹಾಳಾಗಿವೆ)

**೩೫. ಚಲ್ಲಕೂಡಲೂರು (ಸಿರುಗುಪ್ಪ ತಾ., ಬಳ್ಳಾರಿ ಜಿಲ್ಲೆ) ಕ್ರಿ.ಶ.೧೭ನೆಯ ಶತಮಾನ**

ಬಳ್ಳಾರಿ ಜಿಲ್ಲೆಯ ಸಿರುಗುಪ್ಪ ತಾಲೂಕಿನ ಚಲ್ಲಕೂಡಲೂರು ಗ್ರಾಮದ ಗೋನಾಳ ವೀರಭದ್ರಪ್ಪನವರ ಹೊಲದಲ್ಲಿನ ಶಾಸನ ಇದಾಗಿದೆ. ೧೭ನೆಯ ಶತಮಾನದ ಲಿಪಿ. ಕೂಡಲೂರ ಅಂಕುಸರಾಯನ ಮಗ ಸಣಂಮಾಯಿದೇಶಾಯಿ ತಳವರ ನಾಗಣ ಪೂತಯಗೆ ಸರ್ವಮಾನ್ಯ ನೀಡಿದ ಉಲ್ಲೇಖವಿದೆ.

೧. ಕೂಡಾಲೂರ ಅಂಕು

೨. ಸ ರಾಯ ವೊಡೆಯರ

೩. ಪೌತ್ರ ಸಣಂಮಾಯಿ

೪. ದೇಶಾಯಿ ತಳವರಿ ನಾ

೫. ಗಣ ಪೂತಯ ಗ (?)

೬. ಳಿಗೆ ಚಾಮರ ಮೂರು

೭. ಸರ್ವ ಮಾನ್ಯ

**೩೬. ಕಾಂಛನಗಡದ ಶಾಸನ(ಸಿರುಗುಪ್ಪ ತಾ., ಬಳ್ಳಾರಿ ಜಿಲ್ಲೆ) ಕ್ರಿ.ಶ.೧೭೭೯**

ವಿಜಯನಗರ ಸಾಮ್ರಾಜ್ಯ ಪತನಾನಂತರ ಬಿಜಾಪುರದ ಆದಿಲ್‌ಶಾಹಿಗಳು ತುಂಗಭದ್ರ ನದಿ ಯಾಚೆಗಿನ ದಕ್ಷಿಣದ ಬಹುಪ್ರದೇಶಗಳನ್ನು ತಮ್ಮ ಹತೋಟಿಗೆ ತೆಗೆದುಕೊಂಡರು. ಕೇಂದ್ರಾಡಳಿತದ ಅಧಿಕಾರದ ತೆಕ್ಕೆ ಆದಿಲ್‌ಶಾಹಿಗಳದಾದರೂ ಸ್ಥಳೀಯಮಟ್ಟದ ವ್ಯವಹಾರವೆಲ್ಲ ಸ್ಥಾನಿಕರ, ಸೇನಾಧಿಕಾರಿಗಳ, ಊರ ಗೌಡರ ಹಿಡಿತದಲ್ಲೇ ಇತ್ತು. ಇಂಥ ಸಂದರ್ಭದಲ್ಲಿ ಮುತ್ತಿಗೆ ಎಂಬ ಗ್ರಾಮದಲ್ಲಿ ಹಂಡೆ ಮನೆತನದ ಹಂಡೆ ಹನುಮಪ್ಪ ನಾಯಕನು ಊರಗೌಡಿಕೆ ಮಾಡಿಕೊಂಡು ಇದ್ದನು. ಜೊತೆಗೆ ಆದಿಲ್‌ಶಾಹಿಗಳ ನಿಷ್ಠ ಸರದಾರ ಆಗಿದ್ದನು. ಈ ವೇಳೆಗೆ ಬಂಕಾಪುರದಲ್ಲಿ ಅರಾಜಕತೆ ಎದ್ದಿದ್ದರಿಂದ ಅದನ್ನು ಶಮನ ಮಾಡಲು ಸಮರ್ಥ ವ್ಯಕ್ತಿಯೋರ್ವನು ಸುಲಾ ್ತನರಿಗೆ ಬೇಕಿತ್ತು. ಆಗ ಎರಡನೇ ಇಬ್ರಾಹಿಂ ಆದಿಲ್‌ಷಾಹನ ಗಮನಕ್ಕೆ ಬಂದವನೇ ಇದೇ ಹಂಜೆ ಹನುಮಪ್ಪ ನಾಯಕ. ಬಂಕಾಪುರದ ಅರಾಜಕತೆಯನ್ನು ಹತ್ತಿಕ್ಕುವ ಸಲುವಗಿ ಆದಿಲ್‌ಶಾಹಿಗಳು ಹನುಮಪ್ಪ ನಾಯಕನನ್ನು ನೇಮಿಸುತ್ತಾರೆ. ನಂತರ ಬಂಕಾಪುರದ ಮೇಲೆ ದಂಡೆತ್ತಿ ಹೋಗಿ ಕ್ರಿ.ಶ.೧೫೧೦ರಲ್ಲಿ ಜಯಗಳಿಸುತ್ತಾನೆ. ಪ್ರತಿಯಾಗಿ

ಬಳ್ಳಾರಿ, ಬಂಕಾಪುರ, ಶಿರಿವಾಳ, ಕುಂದರ್ಪಿ, ಅನಂತಪುರ, ಸಿರುಗುಪ್ಪ ಪ್ರದೇಶಗಳ ಒಡೆತನವು ಲಭ್ಯವಾಗುತ್ತದೆ. ಸಿರುಗುಪ್ಪ ಸೀಮೆಯ ಒಡೆತನವನ್ನು ಗಳಿಸಿದ ಹನುಮಪ್ಪನಾಯಕನು ಕಾಂಚನಗಡ ಸೇರಿದಂತೆ ಕುರುಗೋಡು, ಸಿರುಗುಪ್ಪ ಪ್ರದೇಶಕ್ಕೆ ತನ್ನ ಸಂಬಂಧಿಯಾದ ಬಸನಗೌಡ (ಚಿಕ್ಕಣಗೌಡನ ೧ನೇ ಹೆಂಡತಿಯ ಮಗ) ಎಂಬುವವನನ್ನು ಗ್ರಾಮಗೌಡನನ್ನಾಗಿ ನೇಮಿಸಿ ಮುಂದೆ ಬಳ್ಳಾರಿಗೆ ತೆರಳುತ್ತಾನೆ. ಬಳ್ಳಾರಿ ಕೋಟೆಯನ್ನು ನಿರ್ಮಿಸುವುದರ ಮೂಲಕ ಬಳ್ಳಾರಿ, ಕುರುಗೋಡು ಸೇರಿದಂತೆ ಹಂಡೆಮನೆತನದ ಸ್ಥಾಪನೆಗೆ ಕಾರಣಕರ್ತನಾಗುತ್ತಾನೆ. ಈತನಿಗೆ ಐದು ಜನ ಮಕ್ಕಳು. ಅವರನ್ನು ಐದು ವಿಭಾಗಗಳಿಗೆ ನೇಮಿಸುವ ಮೂಲಕ ತನ್ನ ಪಾಳೆಯಪಟ್ಟನ್ನು ವಿಸ್ತರಿಸುವ ಯೋಚನೆ ನಾಯಕನದಾಗುತ್ತದೆ. ಅದರಲ್ಲಿ ನಾಲ್ಕನೇ ಪುತ್ರ ಹಿರೇಮಲಕಪ್ಪ ನಾಯಕನಿಗೆ ಬಳ್ಳಾರಿ, ಕುರುಗೋಡು ಪ್ರದೇಶದ ಹೊಣೆಗಾರಿಕೆ ಲಭಿಸುತ್ತದೆ. ಈತನ ೬ನೇ ಸಂತತಿ ಬಳ್ಳಾರಿ ಪಾಳೆಯಗಾರ ದೇವಪ್ಪನಾಯಕ (ಕ್ರಿ.ಶ.೧೭೯೩–೧೭೦೮)ನ ವರೆಗೆ ಈ ಪ್ರದೇಶಗಳು ಅಧೀನದಲ್ಲಿದ್ದು ಈತನ ಅವಧಿಯಲ್ಲಿ ಕೆಂಚನಗುಡ್ಡವನ್ನೊಳಗೊಂಡಂತೆ ಸಿರುಗುಪ್ಪೆಯ ನಾಡಗೌಡಿಕೆಯನ್ನು ಮುದುಕಣಗೌಡನಿಗೆ ಕೆಂಚನಗುಡ್ಡದ ಸಮೀಪ ನದಿಗೆ ಅಡ್ಡಲಾಗಿ ಆಣೆಕಟ್ಟನ್ನು ಕಟ್ಟಿದರ ಹೊರತಾಗಿ ಮುಂದಿನ ೨೫೦ ವರ್ಷಗಳಲ್ಲಿ ಮತ್ಯಾವ ವಿವರಗಳು ಲಿಖಿತವಾಗಿ ದಾಖಲಾದಂತೆ ಕಂಡುಬರುವುದಿಲ್ಲ. ಗಂಗಾಧರ

೧. ಸ್ವಸ್ತಿ ಶ್ರೀಜಯಾಬ್ದೆಯ ಶಾಲಿವಾಹನ ಶಕವರುಷಂಗಳು ೧೬೩೦ ನೆಯ ಸರ್ವ

೨. ಧಾರಿ ನಾಮ ಸಂವತ್ಸರದ ಮಾರ್ಗಶಿರ ಶು.೫ ಯಲ್ಲು ಶ್ರೀಮತು ವಡೆರಹಟ್ಟಿ ಪುರವರ್ಗಕ್ಕೆ

೩. ಕಾರಣಕರ್ತರಾದ ರಾಜೆಶ್ರೀ ಮೂಲೆಮಟದ ರಾಚೋಟಿದೇವರ ಶಿಷ್ಯರಾದ ಪಂಚ

೪. ಮ ಕುಲೋತ್ಪಂನ್ನ ಸಿರಿಕುಪ್ಪೆ ಸಿಮೆ ಮಜಕೂರು ವ ದೇವರಸನ ಕಾಲುವೆ ವ ಮಂಗಾಪು

೫. ರ ವರ ಯಿಭರಾಮಾಪುರದ ಗೌಡ ಮಲ್ಲಿನಾಯಕನ ಕೊಮಾರ ಚಿಕ್ಕಣಗೌಡನು ಆತಗೆ

೬. ಹೆಂಡರೂ ಯಿಬ್ಬರು ವಬ್ಬ ಹೆಂಡತಿಗೆ ಮಗ ಗಿಡ್ಡ ಕೆಂಚಣಗೌಡ ವ ಬಸವಣಗೌಡ.

೭. ಯಿಬ್ಬರದು ನಷ್ಟಸಂಥಾನವಾಯಿತು ಯರಡನೆ ಹೆಂಡತಿ ಮಗ ದೇಮಣಗೌಡನು ಆತ.

೮. ಗೆ ಮಕ್ಕಳು ಯಲ್ಲಣಗೌಡ ೧ ಕೆಂಚಣಗೌಡ ೧ ಕೆಂಚಣಗೌಡಗೆ ಮಕ್ಕಳು ಯಿಲ್ಲ.

೯. ವು ಯಲ್ಲಣಗೌಡಗೆ ಮಕ್ಕಳು ನಾಲ್ಲವರು ರಾಮಂಣಗೌಡ ೧ ದೇಮಣಗೌಡ ೧ ನಾಗ

೧೦. ಣಗೌಡ ೧ ಮುದುಕಣಗೌಡ ೧೪ ಯಿದರವಳಗೆ ರಾಮಣಗೌಡನ್ನು ಮುದುಕಣಗೌಡನ್ನ ಕೆ.

೧೧. ಂಚನಗೌಡಗೆ ಸಾಕಕೊಟ್ಟರು ರಾಮಣಗೌಡಗೆ ವಬ್ಬ ಮಗಯಿದ್ದಾತ ದೈವಿಕವಾದನು ಮು

೧೨. ದಕಣಗೌಡನು ಹಜರತಿ ಅಬ್ದುಲ್ಲ ಮಹಬಸಾಹೇಬನ ಮಗ ಮಲಿಕಿ ಸಾಹೇಬನ ಕಾ

೧೩. ಲಕಿರ್ದಿಲಿ ಪರಗಣೆ ಸಿರಿಕುಪ್ಪೆ ಸೀಮೆಯ ನಾಡಗೌಡಿಕೆ ಪಡವನು ಯೀತಗೆ ಮಕ್ಕಳು ನಾಲ್ಲೋರು

೧೪. ದೇಮಣಗೌಡ ೧ ಕೆಂಚಣಗೌಡ ೧ ಸಾಹೇಬವಗೌಡ ೧ ರಾಮಣಗೌಡ ೧ ಯೀ ಮುದ

೧೫. ಕಣಗೌಡನು ತನ್ನ ಮಗ ಕೆಂಚಣಗೌಡನ್ನ ತಂಮ್ಮ ಅಣ ರಾಮಣಗೌಡಗೆ ಸಾಕು ಕೊ

೧೬. ಟ್ಟರು ಯೀ ಕೆಂಚನಗೌಡನು ಮಿರಾಸಿ ವುದ್ಧಾರ ಮಾಡಿ ವೈರಿ ಮೋರೆಮೇಲೆ ಹೊ

೧೭. ಡದು ನಾಡಗೌಡಿಕೆ ವುಂಮ್ಮಳಿ ಗ್ರಾಮ ಮಂಗಾಪುರದ ಭೂಮಿವಳಗೆ ಗುಡಹೊ

೧೮. ಸೂರದುರ್ಗ ನಿರ್ಮಿತ ಮಾಡಿದ ಮುಹೂರ್ಥವು ಪ್ರಮಾದಿನಾಮ ಸಂವತ್ಸ

೧೯. ರದ ಚೈಯಿತ್ರ ಬ ೧೪ ಮಂಗಳವಾರ ರೋಹಿಣಿನಕ್ಷತ್ರ ಪ್ರೀತಿನಾಮ ಯೊ

೨೦. ಗ ಗಳಿಗೆ ೧೬ರಲಿ ಆರಂಭ ಮಾಡಿದನು ಸರ್ವಜಿತುನಾಮ ಸಂವತ್ಸರದಲಿ

೨೧. ಸರನಾಡಗೌಡಿಕೆ ಪಡೆದನು ಸರ್ವಧಾರಿನಾಮ ಸಂವತ್ಸರದ ವೈಶಾಖ

೨೨. ಬ ೧೨ ಗುರುವಾರ ಅಮ್ರುತಸಿದ್ದಿಯೋಗದಲಿ ಶ್ರೀ............ಸಾ್ವಮಿ ವಾಸವಾದರು ಶ್ರೀ

೨೩. ಸ್ವಾಮಿ ರಥೋತ್ಸವ ಯೀ ಸಂವತ್ಸರದ ಪಾಲ್ಗುಣ ಶು ೪ ಬುಧವಾರ ಬಸವಪಠ ಕಟ್ಟಿ

೨೪. ಯೀ ಶು ೧ ಮಂಗಳವಾರ ............ ದಲಿ ರತೋತ್ಸವ ನೇಮಾ ಮಾಡಿ ಯಿಧೀತು ಯೀ ಕೆಂ

೨೫. ಚಣಗೌಡಗೆ ಮಕ್ಕಳು ೩ ಮುದುಕಣಗೌಡ ೧ ವಿರೂಪಾಕ್ಷಗೌಡ ೧ ವೀರಣಗೌಡ ೧ ಬಾದ

೨೬. ಶಾಹಿ ಮೊಗಲಾಯಿ ಅಂಠರಂಗಶಾಹನ ಅಂತ್ಯ ಭಾಗವು। ಕಸಬೆ ಗೌಡಿಕೆ ಪಾಲು ೯ಕ್ಕೆ ಮೂರು ಷಾ

೨೭. ಲು ಗೌಡಿಕೆ ನಂಮ್ಮವು ವುಳದ ಆರುಪಾಲಿಗೆ ಕಟ್ಟೆಕೇರಿ ಅವರದು ೧ ಬೋಗ ಅವರದು ೧ ಗುಣೀಸೆಟ್ಟಿ ಅವ

೨೮. ರದು ೧ ಬಾಲೆನವರುದು ೧ ಅಯ್ಯಪ್ಪ ತಿಂಮ್ಮಣಗೌಡನವರುದು ೧ ಪಟ್ಲಶೆಟ್ಟಿ ಅವರುದು ೧ ಕುಲರ್ಣಗ

೨೯. ಳ ಬಣ ೪ಕ್ಕೆ ಅಕ್ಕಣಯ್ಯನವರದು ೧ ವೆಂಗಳಪ್ಪಯಲ್ಲರಸನವರುದು ೧ ವಿರುಪಾಕ್ಷಯ್ಯನ

೩೦. ವರದು ೧ ನರಹರಿ ಅವರದು ೧ ತಳವಾರ ಗಡಿ ನಂದಿನಾಯಕ ಕಂಮಾರ ಫಣಿಯೋಜ ಬಡಿಗೆ ಸಂ ೩೧. ಬೋಜ ಅಸಗರ ದೇವರಾಜ ಕೋನರಾಜ ಜಕ್ಕರಾಜ ನಾಯಿಂದರ ಮುದಿವಿರೋಜ ಕುಂಭಾರ ಯೆಲ್ಲಿಸೆಟ್ಟಿ ಮ

೩೨. ಠಪತಿ ಚೆಂನೆವಡೆರು ಬೋಯಿಸಿಕೆಂಮ್ಮೀಸೆ ಅವರು ಪಾದೇಮಣಭಟ್ಟರು ಭಾರಿಕ ಮಲ್ಲಯ್ಯ ಅಕ್ಕಸಾಲೆ.

೩೩. ಮಣೋಜ ಮಾದಾರ ಬೆಕ್ಕಿನ ಸುಂಕ ಮಾದಿಗರ ಹೊಂನ್ನುಗಯಲ್ಲುಗನು। ಯೀ ಗುಡ್ಡದ ತಳವಾ

೩೪. ರ ............ ಹನಿಮಿನಾಯಕ ಏಂಮ್ಮಿನಾಯಕಕ ಪೆಂನ್ನಿನಾಯಕ ಶ್ರೀ ಶ್ರೀ ಶ್ರೀ

**೩೭. ಕೂಡ್ಲಿ ಶೃಂಗೇರಿಮಠ(ಶಿವಮೊಗ್ಗ ಜಿಲ್ಲೆ) ಕ್ರಿ.ಶ.೧೭೪೬**

ಹಂಡೆ ಅರಸ ಪವಾಡಪ್ಪನಾಯಕನ ಅನಂತರ ೮೦ ವರ್ಷಗಳ ತರುವಾಯ ಈ ಪವಾಡಪ್ಪ ನಾಯಕನ ಪ್ರಪೌತ್ರ ಪ್ರಸನ್ನಪ್ಪನಾಯಕನ ಪುತ್ರ ಹಂಡೆ ರಾಮಪ್ಪನಾಯಕನು ಅನಂತಪುರ, ಬುಕ್ಕರಾಯಸಮುದ್ರ, ಹೊಸಕೆರೆ, ಬುಕ್ಕಪಟ್ಟಣ ಮುಂತಾದ ಸೀಮೆಗಳನ್ನು ಆಳುತ್ತಿದ್ದ ಸಂದರ್ಭದಲ್ಲಿ ಈ ಶಾಸನವನ್ನು ಬರೆಸಲಾಗಿದೆ. ಅಕ್ಷಯ ಜೇಷ್ಠ ಬಹುಳ ಶಾ.ಶ.೧೬೬೮ ಕ್ರಿ.ಶ.೧೭೪೬ರ ಸೋಮವಾರ ಪುಣ್ಯಕಾಲ ಶ್ರೀ ಮಠದ ದೀಪಾರಾಧನೆ ನೈವೇದ್ಯ ನಡೆವುದಕ್ಕೆ ಹೊಸಕೆರೆ ಸಮೀಪ ಈಚರ್ಲಗ್ರಾಮಕ್ಕೆ ಪ್ರತಿನಾಮ ರಾಮದುರ್ಗದ ಮಜರೆ ಗುಂಟಹಳ್ಳಿ ಎಂಬ ಗ್ರಾಮವನ್ನು ದೇವರ ಪ್ರೀತ್ಯರ್ಥ ದತ್ತಿ ಬಿಟ್ಟು ಶಾಸನ ಬರೆಯಿಸಿದ್ದಾನೆ. ಈ ದಾನವನ್ನು ಮಠದ ಪಾ. ಗೋವಿಂದಭಟ್ಟರ ವಶಕ್ಕೆ ಕೊಡಲು ಈಚರ್ಲಗ್ರಾಮದ ಪ್ರತಿನಾಮ ರಾಮದುರ್ಗದ ದೊರೀ ಶೀನಪ್ಪ ಕಾರಕೂನರೆಡ್ಡಿ ಶ್ಯಾನಭೋಗರಿಗೆ ನಿರೂಪ ಬರೆದು ಕಳಿಸಿದ್ದಾನೆ. ಪ್ರಸ್ತುತ ಈ ದಾನ ಸ್ವೀಕರಿಸಿದವರು ಕೂಡ್ಲಿ ಶೃಂಗೇರಿಮಠದ ಶ್ರೀ ಶಂಕರ ಭಾರತಿಗಳವರ ಪ್ರಶಿಷ್ಯ ಶ್ರೀ ಶಂಕರಭಾರತಿಗಳವರು. ಮೇಲೆ ಹೇಳಿದ ತಾಮ್ರಶಾಸನ ಒಂದು ಸನದುಗಳ ಮೇಲೆ ಮೊಹರಿದ್ದು, ಅದರಲ್ಲಿ "ವಿದ್ಯಾಶಂಕರಭಾರತಿ ಶ್ರೀ ಸಿದ್ದರಾಮೇಶ್ವರ" ಎಂಬ ಒಕ್ಕಣಿಕೆಯಿರುವುದು ವಿಶೇಷವೆನ್ನಿಸಿದೆ. ಈ ದಾಖಲೆಗಳಿಂದ ಹಂಡೆ ಪಾಳೆಯಗಾರರು ಕೂಡ್ಲಿ ಶೃಂಗೇರಿಪೀಠದಲ್ಲಿಟ್ಟ ಅನನ್ಯಭಕ್ತಿ ಇಲ್ಲಿ ಕಂಡು ಬರುತ್ತದೆ.

**೩೮. ಯರ್ರಗುಡ್ಡದ ಶಾಸನ (ಆಂಧ್ರಪ್ರದೇಶ) ಕ್ರಿ.ಶ.೧೭೮೦**

ಹಂಡೆ ವಂಶದ ದ್ಯಾವಪ್ಪ (ದೇವಪ್ಪ) ನಾಯ್ಕನು, ಕುರುಗೋಡಿನಲ್ಲಿ ಠಾಣ್ಯ ಮಾಡಿ ಹಳೇ ಕುರುಗೋಡು ಪಟ್ಟಣವನ್ನು ಬಿಟ್ಟು ಯರ್ರಗುಡ್ಡದ (ಈಶ್ವರಗುಡ್ಡ) ಮೇಲೆ ಹೊಸದಾಗಿ ಕೋಟೆ ಕಟ್ಟಿಸಿದನು. ಇದರ ಪೂರ್ವಭಾಗದಲ್ಲಿ ಪಾಯನಕಿಲ್ಲೆ ಕಟ್ಟಿಸಿ, ಅದರಲ್ಲಿ ಅರಮನೆ, ಬಾವಿ ಮೊದಲಾದವುಗಳನ್ನು ನಿರ್ಮಿಸಿದನು. ಅದೇ ರೀತಿ ತನ್ನ ಸೈನಿಕರು, ಅಧಿಕಾರಿಗಳು ಮತ್ತಿತರರು ವಾಸಿಸಲಿಕ್ಕೆ ಈ ಗುಡ್ಡದ ದಕ್ಷಿಣ ಭಾಗದಲ್ಲಿ ಹೊಸದಾಗಿ ಗ್ರಾಮದ ನಿರ್ಮಾಣವನ್ನು ಕ್ರಿ.ಶ.೧೭೦೧-೧೭೦೨ರಲ್ಲಿ ಮಾಡಲಾಯ್ತು. ಹೀಗೆ ಈಗಿನ ಕುರುಗೋಡು ಗ್ರಾಮ ಹೊಸದಾಗಿ ಸ್ಥಾಪನೆಯಾಯ್ತು. ನಂತರ ಯರ್ರಗುಡ್ಡದ ಮೇಲಿನ ಕೋಟೆಯಲ್ಲಿ ಅಂಜನೇಯನ ದೇವಸ್ಥಾನವನ್ನು ನಿರ್ಮಿಸಲಾಗಿದೆ. ಈ ದೇವಸ್ಥಾನದ ಮುಂಭಾಗದಲ್ಲಿನ ಗೋಡೆಗೆ ಇದೆ. ಈ ಕುರುಗೋಡು ಗ್ರಾಮವನ್ನು ಹೈದರಾಲಿಯ ಕಾಲದಲ್ಲಿ ಇದೇ ಹಂಡೆ ಅರಸರು ಆಳುತ್ತಿದ್ದರು. ಹೀಗಾಗಿ ಅರಸನ ಹೆಸರಲ್ಲಿ ಶಾಸನವನ್ನು ಕೆತ್ತಿಸಲಾಗಿದೆ. ಈ ಗ್ರಾಮವನ್ನು, ಕೋಟೆ, ಅರಮನೆ, ಬಾವಿ, ದೇವಸ್ಥಾನವನ್ನು ಇದೇ ಹಂಡೆ ಅರಸರು ನಿರ್ಮಿಸಿರುವುದರಿಂದ ಈ ಶಾಸನವನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ. ಶಾಸನದ ಪಾಠ ಪೂರ್ಣವಿಲ್ಲ. ಕ್ರಿ.ಶ.೧೭೦೮ ರಲ್ಲಿ ಪೂರ್ಣಗೊಂಡ ಬಗ್ಗೆ ಈ ಕೆಳಗಿನ ಶಾಸನದಲ್ಲಿ ತಿಳಿಸಲಾಗಿದೆ.

೧. ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾನಶಕ ವರುಷಂಗ

೨. ಳು ೧೭೦೨ ನೆಯ ಶಾರ್ವರಿ ನಾಮ ಸಂ.ದ ಆಶ್ವೀಜ ಶು.೧

೩. ಯಲ್ಲು ಶ್ರೀಮತು ನವಾಬ ಹೈದರಲ್ಲಿ ಖಾನ ಬಾಹದರ

೪. ವರು ರಾಜ್ಯಂಗೈಯ್ಯುತ್ತಿರಲು ಶ್ರೀ ಹನುಮಂತ

೫. ದೇವರ ಗುಡಿ ಕಟ್ಟಿಸಿದ ಸೇವೆ ಸಂಪೂರ್ಣ ಮಂಗಳ

೬. ಮಹಾಶ್ರೀ ಶ್ರೀ ......................................

೭. ......................................

## ೨

# ವಂಶಾವಳಿ

### ೧. ಬಳ್ಳಾರಿ ಕೈಫಿಯತ್ತಿನಲ್ಲಿ ಹಂಡೆ ಅರಸರ ವಂಶಾವಳಿ



ದೊಡ್ಡಪ್ಪ ನಾಯಕ

ಪ್ರಸನ್ನಪ್ಪ ನಾಯಕ

ಪ್ರಸನ್ನ ರಾಮಪ್ಪ ನಾಯಕ

ದ್ಯಾವಪ್ಪ ನಾಯಕ

ಹನುಮಪ್ಪ ನಾಯಕ (ಸಂತಾನ ರಹಿತ) | ಹಿರಿಯರಾಮಪ್ಪ ನಾಯಕ (ಸಂತಾನ ರಹಿತ) | ಚಿಕ್ಕರಾಮಪ್ಪ ನಾಯಕ (ಸಂತಾನ ರಹಿತ)

---

* ಕುರುಗೋಡು ಕೈಫಿಯತ್ತಿನಲ್ಲಿ ಹಿರಿಯ ಮಲುಕಪ್ಪ ನಾಯಕನ ಮಕ್ಕಳ ಬಗ್ಗೆ ತಿಳಿದುಬರುವುದಿಲ್ಲ. ಆದರೆ ಬಳ್ಳಾರಿ ಕೈಫಿಯತ್ತನ್ನು ಗಮನಿಸಿದಾಗ ಹಿರಿಯ ಮಲುಕಪ್ಪ ನಾಯಕನ ಸಂತತಿ ಮೇಲಿನಂತೆ ಇರುವುದು ತಿಳಿದುಬರುತ್ತದೆ. ಇಲ್ಲಿ ಚಿಕ್ಕ ಮಲುಕಪ್ಪ ನಾಯಕನ ಸಂತತಿಯೇ ಹಿರೆಮಲುಕಪ್ಪ ನಾಯಕನ ಸಂತತಿ ಎಂದು ಹೇಳಿರುವುದನ್ನು ಗಮನಿಸಬಹುದು.

* ಬಳ್ಳಾರಿ ಕೈಫಿಯತ್ತಿನಲ್ಲಿ ಬರುವ ಹಿರಿಯಮಲುಕಪ್ಪ ನಾಯಕ. ಅವನ ಮಗ ಸಿದ್ದಪ್ಪ ನಾಯಕ. ಅವನ ಮಗ ಹಿರೆರಾಮಪ್ಪ ನಾಯಕ. ಇಲ್ಲಿಯವರೆಗಿನ ವಂಶಾವಳಿ ಕುರಗೋಡು ಕೈಫಿಯತ್ತಿನಲ್ಲಿ ಬಂದಿರುವುದಿಲ್ಲ.

* ಬಳ್ಳಾರಿ ಬಾಲ ಹನುಮಪ್ಪನಾಯಕನಿಗೆ ಐದು ಜನ ಸಹೋದರಿಯರಿದ್ದು, ಅವರ ಹೆಸರಿನಿಂದ ಬಳ್ಳಾರಿಯಲ್ಲಿ ಐದು ಬಾವಿಗಳನ್ನು ಕಟ್ಟಿಸಿದ್ದಾನೆ.

## ೨. ಕುರುಗೋಡು ಕೈಫಿಯತ್ತಿನಲ್ಲಿ ಹಂಡೆ ಅರಸರ ವಂಶಾವಳಿ




* ಕುರುಗೋಡು ಕೈಫಿಯತ್ತಿನಲ್ಲಿ ಬಂದಿರುವ ಚಿಕ್ಕಮಲಕಪ್ಪ ನಾಯಕನ ಮುಂದಿನ ವಂಶಾವಳಿ ಬಳ್ಳಾರಿ ಕೈಫಿಯತ್ತಿನಲ್ಲಿ ಹಿರಿಯಮಲಕಪ್ಪ ನಾಯಕನ ವಂಶಾವಳಿಗೆ ಬಂದಿದೆ.

* ಕುರಗೋಡು ಕೈಫಿಯತ್ತಿನ ಕೊನೆಯಲ್ಲಿ ಬರುವ ವಂಶಾವಳಿ ಪಟ್ಟಿಯಲ್ಲಿ ಸಿದ್ಧಮ್ಮ, ಪದ್ಮಮ್ಮ, ನೀಲಮ್ಮ ಮುಂತಾದವರ ಹೆಸರುಗಳಿಲ್ಲ. ಕೈಫಿಯತ್ತುಗಳ ಆಧಾರದಿಂದ ಅವರ ಹೆಸರುಗಳನ್ನು ಇಲ್ಲಿ ಸೇರಿಸಲಾಗಿದೆ.


೩. ಅನಂತಪುರ ಕೈಫಿಯತ್ತಿನಲ್ಲಿ ಹಂಡೆ ಅರಸರ ವಂಶಾವಳಿ
ಬಾಲದ ಹನುಮಪ್ಪ ನಾಯಕ
ಇಮ್ಮಡಿ ಹಂಪರಾಯ
ಮಲಕಪ್ಪನಾಯಕ
(ಪಟ್ಟದ ಹೆಂಡತಿ ಸಿದ್ಧರಾಮಮ್ಮ)
೧. ದೇವಪ್ಪ ನಾಯಕ
೨. ಚಿಕ್ಕರಾಮಪ್ಪ ನಾಯಕ
೩. ನಿಚ್ಚಮದ ಲಿಂಗಪ್ಪ ನಾಯಕ
೪.ಇಮ್ಮಡಿ ಹಂಪನಾಯಕ
ಪ್ರಸನ್ನ ಸಿದ್ದಪ್ಪ ನಾಯಕ(ರಾಯ)
ಪವಾಡಪ್ಪ ನಾಯಕ(ಹೆಂಡತಿ ಸಿದ್ದರಾಮವ್ವ)
ಸಿದ್ದಪ್ಪ ನಾಯಕ
ಪ್ರಸನ್ನಪ್ಪ ನಾಯಕ
(ಹೆಂಡತಿ ಸಿದ್ದಮ್ಮ)
ಇಮ್ಮಡಿ ಪವಾಡಪ್ಪ ನಾಯಕ
(ಹೆಂಡತಿಯರು ದೇವಮ್ಮ ಮತ್ತು ಗಿರಿಜವ್ವ)
ರಾಮಪ್ಪ ನಾಯಕ
ಸಿದ್ದಪ್ಪ ನಾಯಕ(ಹೆಂಡತಿ ಬದ್ರಮ್ಮ)


ಸಿದ್ದರಾಮಪ್ಪ ನಾಯಕ
(ಹೆಂಡತಿಯರು ಕಲ್ಯಾಣಂ ಪೊನ್ನಮ್ಮ)
ದೊಡ್ಡ ರಾಮಪ್ಪ ನಾಯಕ
ಚಿಕ್ಕರಾಮಪ್ಪ ನಾಯಕ
(ಹೆಂಡತಿ ಚನ್ನಮ್ಮ)
ಸಿದ್ದಪ್ಪ ನಾಯಕ
(ಹೆಂಡತಿ ನೀಲಮ್ಮ)
ಸಿದ್ದರಾಮಪ್ಪ
ವಸಂತರಾಯ ನಿಧನ
ಹನುಮಪ್ಪನಾಯಕ
ಸಿದ್ದರಾಮಪ್ಪ (ದತ್ತುಪುತ್ರ)

೩

# ವಕ್ತೃವಿವರ

| ಕ್ರಸಂ. | ಹೆಸರು | ವಯಸ್ಸು | ವೃತ್ತಿ | ತಾಲೂಕು | ಸ್ಥಳ |
|---|---|---|---|---|---|
| ೧. | ಹಣುಮನಗೌಡ ನಾಗಪ್ಪ | ೭೨ | ಕೃಷಿ | ಬಸವನ ಬಾಗೇವಾಡಿ | ಮುತ್ತಗಿ |
| ೨. | ರಾಮನಗೌಡ | ೪೫ | ಕೃಷಿ | ಬಸವನ ಬಾಗೇವಾಡಿ | ಮುತ್ತಗಿ |
| ೩. | ಹನುಮಂತಗೌಡ | ೫೫ | ವ್ಯಾಪಾರ | ಬಸವನ ಬಾಗೇವಾಡಿ | ಮುತ್ತಗಿ |
| ೪. | ಶಿವಶಂಕರಗೌಡ ಶಾಂತಗೌಡ | ೫೩ | ಪೂಜಾರಿ | ಬಸವನ ಬಾಗೇವಾಡಿ | ಮುತ್ತಗಿ |
| ೫. | ಕಾಶಿನಾಥ ಪತ್ತಾರ್ | ೭೫ | ಕಮ್ಮಾರಿಕೆ | ಬಸವನ ಬಾಗೇವಾಡಿ | ಮುತ್ತಗಿ |
| ೬. | ಚಂದ್‌ಪೇಟೆ | ೩೦ | ವಿದ್ಯಾರ್ಥಿ | ಬಸವನ ಬಾಗೇವಾಡಿ | ಮುತ್ತಗಿ |

೪

# ಛಾಯಾಚಿತ್ರಗಳು



ಬಳ್ಳಾರಿ ಕೊಟ್ಟೂರಸ್ವಾಮಿ ಮಠ



ಕೊಟ್ಟೂರಸ್ವಾಮಿ ಮಠದ ಅವ್ವಮ್ಮ ದಾಸೋಹ ಸಭಾಂಗಣ

ಬಳ್ಳಾರಿ ಕೋಟೆ





ಕೋಟೆ ಮೇಲೆಕ್ಕೆ ಹೋಗುವ ಮೆಟ್ಟಿಲುಗಳು ಮತ್ತು ದ್ವಾರಬಾಗಿಲು

ಕೋಟೆ ಮೇಲಿರುವ ನೀರಿನ ಸಂಗ್ರಹದ ಹೊಂಡಗಳು





ಕೋಟೆ ಪಕ್ಕದಲ್ಲಿರುವ
ಬಸವಣ್ಣ ದೇವಾಲಯ



ಬಳ್ಳಾರಿ ನಗರದ
ಅವ್ವಮ್ಮ(ಹವಂಬಾವಿ)ನ
ಬಾವಿಗಳು



ಶಿರುಗುಪ್ಪಾ
ರಸ್ತೆಯಲ್ಲಿರುವ
ಬಾವಿ

ಹಂಡೆ ರಾಣಿ ಅವ್ವಮ್ಮನ ಸಮಾಧಿ




ಬಂಕಾಪುರದ ಪಂಚಮಲ್ಲಪ್ಪನ ಬಾವಿ



ಪಂಚ ಮಲ್ಲಪ್ಪನಾಯಕನ ಬಾವಿಯ ಒಳಭಾಗ





ಬಾವಿಯ ಮೇಟ್ಟಿಲುಗಳು



ಪಂಚ ಮಲ್ಲಪ್ಪನಾಯಕನ ಬಾವಿಯ ಪ್ರವೇಶ
ದ್ವಾರಕ್ಕಿರುವ ನಾಗಭೇತ್ತು




ಹಂಡೆ ರಾಣಿಯರ ಮಹಲ್ ಅನಂತಪುರಂ



ಅರಮನೆಯ
ಒಳಸಭಾಂಗಣ



ಕೋತ್ತಚೇರುವಿನ ನಿಡುಮಾಮಿಡಿ ಮಠದಲ್ಲಿ ಇರುವ ಇಮ್ಮಡಿ ಕರಿಬಸವದೇಶಿ ಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳ ಗದ್ದುಗೆ(ಸಮಾಧಿ). ಇದರ ಪಕ್ಕದಲ್ಲಿರುವ ಹಂಡೆ ಅರಸ ಪವಾಡೆಪ್ಪನಾಯಕನ ಗದ್ದುಗೆ.



ನಿಡುಮಾಮಿಡಿ ಮಠದಲ್ಲಿರುವ ಕರಿಬಸವದೇಶಿ ಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳ ಗದ್ದುಗೆ(ಸಮಾಧಿ). ಇದರ ಮುಂದೆ ಹಂಡೆ ಅರಸನಾದ ಹನುಮಪ್ಪನಾಯಕನ ಗದ್ದುಗೆ




ಬುಕ್ಕರಾಯ ಸಮುದ್ರಂ ಕೆರೆ (ಅನಂತಪುರ)



ಸಿ.ಪಿ ಬ್ರೌನ್ ಗ್ರಂಥಾಲಯ, ವೇಮನ ವಿಶ್ವವಿದ್ಯಾಲಯ, ಕಡಪ (ಆಂಧ್ರಪ್ರದೇಶ)

೫

# ಪರಾಮರ್ಶನ ಗ್ರಂಥಗಳು

೧. ಕಲಬುರ್ಗಿ ಎಂ.ಎಂ., ೧೯೯೪, ಕರ್ನಾಟಕದ ಕೈಫಿಯತ್ತು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಕಲಬುರ್ಗಿ ಎಂ.ಎಂ., ೨೦೦೨, ಕನ್ನಡ ನಾಮ ವಿಜ್ಞಾನ, ಸಪ್ನ ಬುಕ್ ಹೌಸ್, ಬೆಂಗಳೂರು.

೩. ಕಲಬುರ್ಗಿ ಎಂ.ಎಂ., ೨೦೧೪, ಶಾಸನಗಳಲ್ಲಿ ಶಿವಶರಣರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪. ಕಲಬುರ್ಗಿ ಎಂ.ಎಂ ಮತ್ತು ಕೃಷ್ಣಕಮಾರ ಸಿ. ಪಿ., ೧೯೯೯, ಷಟಸ್ಥಲ ಶಿವಾಯಣ, ಗದುಗಿನ ತೋಂಟದಾರ್ಯ ಮಠ.

೫. ಕಲಬುರ್ಗಿ ಎಂ.ಎಂ. ಮತ್ತು ವಿದ್ಯಾಶಂಕರ ಎಸ್., ೨೦೧೬, ಬಸವಯುಗದ ವಚನ ಸಂಪುಟ-೧, ಕರ್ನಾಟಕ ಪುಸ್ತಕ ಪ್ರಾಧಿಕಾರ ಬೆಂಗಳೂರು.

೬. ಕಲಬುರ್ಗಿ ಎಂ. ಎಂ. ಮತ್ತು ವಿದ್ಯಾಶಂಕರ ಎಸ್., ೧೯೯೩, ಸಿದ್ದಾರಮೇಶ್ವರ ವಚನ ಸಂಪುಟ-೧ ಕರ್ನಾಟಕ ಪುಸ್ತಕ ಪ್ರಾಧಿಕಾರ ಬೆಂಗಳೂರು.

೭. ಕೊಟ್ರೇಶ್ ಎಂ, ೨೦೧೧, ಬಳ್ಳಾರಿ ಜಿಲ್ಲೆಯ ಕೋಟೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮. ಕೊಟ್ರೇಶ್ ಎಂ.(ಸಂ), ೨೦೧೦, ಕಲ್ಯಾಣ ಕರ್ನಾಟಕದ ಅರಸುಮನೆತನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯ ಕೊಟ್ರಸ್ವಾಮಿ ಎ.ಎಂ.ಎಂ, ೨೦೧೭, ಹಂಡೆ ಸಂಸ್ಕೃತಿಪಥ, ಚಾಲುಕ್ಯ ಸಂಸ್ಕೃತಿ ಅಧ್ಯಯನ ಪೀಠ, ಗುಲಬರ್ಗಾ.

೧೦. ಕೃಷ್ಣ ಕೋಲಾರ ಕುಲಕರ್ಣಿ, ೨೦೦೨, ಆದಿಲ್‌ಶಾಹಿ ಆಡಳಿತ-ಕಾನೂನು ವ್ಯವಸ್ಥೆ, ಆದಿಲ್‌ಶಾಹಿ ಅಧ್ಯಯನ ಸಂಸ್ಥೆ, ವಿಜಾಪುರ.

೧೧. ಗುರುರಾಜ, ೨೦೦೩, ಹಂಡೆ ಅನಂತಪುರಂ ಸ್ಥಾನಿಕ ಚರಿತ್ರೆ, ಆಂದ್ರಪ್ರದೇಶ ರೈತ ಸಂಘ, ಅನಂತಪುರ ಜಿಲ್ಲೆ

೧೨. ಚನ್ನಪ್ಪ ಎಸ್. ಪಾಟೀಲ್, ೧೯೯೯, ಕರ್ನಾಟಕದ ಕೋಟೆಗಳು(ಸಂ), ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩. ಚಂದ್ರಕಾಂತ ಬಿಜ್ಜರಗಿ, ೨೦೦೬, ಕುರುಬರ ಹೆಜ್ಜೆಗಳು-ಒಂದು ಅಧ್ಯಯನ, ಶೈಲಚಂದ್ರ ಪ್ರಕಾಶನ, ವಿಜಾಪುರ.

೧೪. ಚಂದ್ರಶೇಖರ ಹೆಚ್, ೨೦೦೦, ಇತಿಹಾಸ ದರ್ಶನ, ಸಂಪುಟ-೧೫, ಬೆಂಗಳೂರು

೧೫. ಚಿದಾನಂದಮೂರ್ತಿ ಎಂ., ೧೯೭೯, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು ವಿವಿ.

೧೬. ಚೆನ್ನಕ್ಕ ಪಾವಟೆ, ೨೦೦೫, ಸಂಸ್ಕೃತಿ ಅಧ್ಯಯನ, ಚೆನ್ನಗಂಗಾ ಪ್ರಕಾಶನ, ಧಾರವಾಡ

೧೭. ಚೌಧರಿ ಎಸ್.ಎಸ್., ಪಾಟೀಲ ಎಸ್.ಸಿ., ೨೦೧೪, ಚಂದಿಮರಸನ ವಚನಗಳ ಭಾವಾನುವಾದ, ಚಾಲುಕ್ಯ ಸಂಸ್ಕೃತಿ ಅಧ್ಯಯನ ಪೀಠ, ಗುಲಬರ್ಗಾ.

೧೮. ಚೌಧರಿ ಎಂ. ಎಸ್., ೨೦೨೦, ಶಾಸನಗಳಲ್ಲಿ ಹಂಡೆ ಅರಸರ ಶೋಧ, ಚಾಲುಕ್ಯ ಸಂಸ್ಕೃತಿ ಅಧ್ಯಯನ ಪೀಠ, ಗುಲಬರ್ಗಾ.

೧೯. ಜಿ.ವಿ.ಡಿ., ೨೦೦೩, ಕನ್ನಡ ಐತಿಹ್ಯಗಳು, ಚೇತನ ಬುಕ್ ಹೌಸ್, ಮೈಸೂರು.

೨೦. ತಾರಿಹಳ್ಳಿ ಹನುಮಂತಪ್ಪ(ಸಂ), ೨೦೧೨, ಕನಕಗಿರಿ ನಾಯಕರು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೧. ದೇವರಕೊಂಡಾರೆಡ್ಡಿ(ಸಂ), ೧೯೮೮, ಶಾಸನ ಸಂಪುಟ-೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೨. ನಂಜುಂಡಸ್ವಾಮಿ ಎ.ಎಸ್., ೧೯೮೬, ಪಾಳೆಗಾರರು ಮತ್ತು ಒಡೆಯರ ಇತಿಹಾಸ, ಸಮಾಜ ಪುಸ್ತಕಾಲಯ, ಧಾರವಾಡ.

೨೩. ನಂಜುಂಡಸ್ವಾಮಿ, ೧೯೮೬, ಪಾಳೆಯಗಾರರು ಮತ್ತು ಒಡೆಯರು.

೨೪. ನಾರಾಯಣಪುರ, ೨೦೦೨, ಕರ್ನಾಟಕದ ವೀರಶೈವ ಮಠಗಳು.

೨೫. ನಾಗರಾಜ ಎಂ.ಜಿ., ೧೯೯೭, ನಿಡುಮಾಮಿಡಿ ಕ್ಷೇತ್ರ ಪರಿಚಯ, ಚಾಲುಕ್ಯ ಸಂಸ್ಕೃತಿ ಅಧ್ಯಯನ ಪೀಠ, ಗುಲಬರ್ಗಾ.

೨೬. ಪಂಚಮುಖಿ ಆರ್.ಎಸ್., ೧೯೫೩, ವಿರೂಪಾಕ್ಷ ವಸಂತೋತ್ಸವ.

೨೭. ಪಂಚಮುಖಿ ಆರ್.ಎಸ್., ಲಕ್ಷ್ಮೀನಾರಾಯಣ, ೧೯೪೬, ಕರ್ನಾಟಕದ ಅರಸುಮನೆತನಗಳು.

೨೮. ಪಾಟೀಲ ಎಸ್.ಸಿ.(ಸಂ), ೨೦೧೪, ನಿಡುಮಾಮಿಡಿ ಜಗದ್ಗುರು ಪೀಠ ಮತ್ತು ಪರಂಪರೆ, ಚಾಲುಕ್ಯ ಸಂಸ್ಕೃತಿ ಅಧ್ಯಯನ ಪೀಠ, ಗುಲಬರ್ಗಾ.

೨೯. ಪಾಟೀಲ ಎಸ್.ಸಿ.(ಸಂ), ೨೦೧೪, ಹಂಡೆ ಪಾಳೆಗಾರರ ಕುರಿತ ಕೈಫಿಯತ್ತುಗಳು, ಚಾಲುಕ್ಯ ಸಂಸ್ಕೃತಿ ಅಧ್ಯಯನ ಪೀಠ, ಗುಲಬರ್ಗಾ.

೩೦. ಪಾಟೀಲ ಎಸ್.ಸಿ.(ಸಂ), ೨೦೧೫, ಭಟಾಂಗಿನಿ ಸಾಹಿತ್ಯ, ಚಾಲುಕ್ಯ ಸಂಸ್ಕೃತಿ ಅಧ್ಯಯನ ಪೀಠ, ಗುಲಬರ್ಗಾ.

೩೧. ಪಾಟೀಲ ಎಸ್.ಸಿ.(ಸಂ), ೨೦೦೨, ಬುಕ್ಕರಾಯ ಚರಿತ್ರೆ(ಹಂಡೆ ಅರಸು ಮನೆತನದ ವಂಶಾವಳಿ), ಶ್ರೀ ಸಿದ್ಧರಾಮೇಶ್ವರ ಪ್ರಕಾಶನ, ಬಿಜಾಪುರ.

೩೨. ಪಾಟೀಲ ಎಸ್.ಸಿ.(ಸಂ), ೨೦೦೪, ವೀರಶೈವ ಹಂಡೆವಜೀರ ಜನಾಂಗದ ಪರಿಚಯ, ಸಂಸ್ಕೃತಿ ಅಧ್ಯಯನ ಪೀಠ, ಬಿಜಾಪುರ.

೩೩. ಪಾಟೀಲ ಎಸ್.ಸಿ.(ಸಂ), ೨೦೧೪, ಹಂಡೆ ಪಾಳೆಗಾರರ ಕುರಿತು ಕೈಫಿಯತ್ತುಗಳು, ಚಾಲುಕ್ಯ ಸಂಸ್ಕೃತಿ ಅಧ್ಯಯನ ಪೀಠ, ಗುಲಬರ್ಗಾ.

೩೪. ಪಾಟೀಲ ಎಸ್.ಸಿ.(ಸಂ), ೨೦೦೪, ಹಂಡೆ ಅರಸುಮನೆತನದ ವಂಶಾವಳಿ, ಚಾಲುಕ್ಯ ಸಂಸ್ಕೃತಿ ಅಧ್ಯಯನ ಪೀಠ, ಗುಲಬರ್ಗಾ.

೩೫. ಪಾಟೀಲ ಎಸ್.ಸಿ.(ಸಂ), ೨೦೧೪, ಶಾಸನನೋಕ್ತ ಹಂಡೆ ಅರಸುಮನೆತನ, ಚಾಲುಕ್ಯ ಸಂಸ್ಕೃತಿ ಅಧ್ಯಯನ ಪೀಠ, ಗುಲಬರ್ಗಾ.

೩೬. ಪಾಟೀಲ ಎಸ್.ಸಿ., ೨೦೦೪, ವೀರಶೈವ ಹಂಡೆವಜೀರ ಜನಾಂಗದ ಪರಿಚಯ, ಚಾಲುಕ್ಯ ಸಂಸ್ಕೃತಿ ಅಧ್ಯಯನ ಪೀಠ ಬಿಜಾಪುರ.

೩೭. ಪಾಟೀಲ ಎಸ್.ಸಿ., ೨೦೨೦, ಹಂಡೆ ಸಂಸ್ಕೃತಿ, ಚಾಲುಕ್ಯ ಸಂಸ್ಕೃತಿ ಅಧ್ಯಯನ ಪೀಠ, ಗುಲಬರ್ಗಾ.

೩೮. ಮದದೇವ ಸಿ, ೨೦೧೫, ಶಾಸನಗಳಲ್ಲಿ ಕುಮ್ಮಟದುರ್ಗದ ಅರಸರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೯. ಯೋಗೀಶ ಎನ್.ಡಿ., ೧೯೮೮, ಹಾಗಲವಾಡಿ ಅರಸು ಮನೆತನ, ಪ್ರಕಾಶನ, ಸಾರಂಗಶ್ರೀ, ಸಿಂಧಗಿ.

೪೦. ರವೀಂದ್ರನಾಥ ಕೆ., ೨೦೦೦, ಕನ್ನಡ ದಾಖಲು ಸಾಹಿತ್ಯ, ಮಂಗಳಾ ಪ್ರಕಾಶನ, ಹೊಸಪೇಟೆ.

೪೧. ರಾಜಶೇಖರ ಎಸ್., ೧೯೮೮, ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಧಾರವಾಡ ವಿವಿ.

೪೨. ಲಿಂಗದಹಳ್ಳಿ ಹಾಲಪ್ಪ, ೨೦೧೫, ಬಳ್ಳಾರಿ ಪರಿಸರದ ಹಾಲುಮತ ದೈವಗಳು, ಹಾಲುಮತ ಸಂಸ್ಕೃತಿ.

೪೩. ಲಿಂಗದಹಳ್ಳಿ ಹಾಲಪ್ಪ,(ಸಂ), ೨೦೧೫, ಹಾಲುಮತ ಹಂಡೆ ಅರಸು ಮನೆತನ, ವಿದ್ಯಾನಿಧಿ ಪ್ರಕಾಶನ, ಗದಗ.

೪೪. ವಿರೂಪಾಕ್ಷಿ ಪೂಜಾರಹಳ್ಳಿ, ೨೦೧೪, ಏಕೀಕರಣ ಚಳವಳಿ ಮತ್ತು ಬಳ್ಳಾರಿ ಜಿಲ್ಲೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೫. ಶಂಬಾ ಜೋಶಿ, ೨೦೦೮, ಕರ್ನಾಟಕ ಸಂಸ್ಕೃತಿ ಪೂರ್ವ ಪೀಠಿಕೆ, ಮಾನವ ಧರ್ಮ ಪ್ರತಿಷ್ಠಾನ, ಧಾರವಾಡ.

೪೬. ಶಿವರುದ್ರಮಹಾಸ್ವಾಮಿಗಳು, ೨೦೧೪, ಬಸವಪಥ, ಸಂಪುಟ-೩೬, ಸಂಚಿಕೆ-೧, ಬೆಂಗಳೂರು.

೪೭. ಶ್ಯಾಮಲ ಸಿ.ಆರ್., ೨೦೦೮, ಪೂರ್ವ ಕರ್ನಾಟಕದ ಪಾಳೇಗಾರರು ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪೮. ಶ್ರೀ ಜ. ಚ. ನಿ, ೨೦೧೪, ಗುರುವಿನ ಗೆಲುವು, ಚಾಲುಕ್ಯ ಸಂಸ್ಕೃತಿ ಅಧ್ಯಯನ ಪೀಠ, ಗುಲಬರ್ಗಾ.

೪೯. ಸದಾಶಿವಪ್ಪ ಕುಂ.ಬಾ., ೨೦೧೬, ಹರಪನಹಳ್ಳಿ ಪಾಳೇಗಾರರ ಇತಿಹಾಸ ದರ್ಶನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೫೦. ಸುರೇಶ ಕೆ.ಎಂ.(ಸಂ), ೧೯೯೪, ಕರ್ನಾಟಕದ ದೇವಾಲಯ ಕೋಶ, ಕವಿವಿ, ಹಂಪಿ.(ಬಳ್ಳಾರಿ ಜಿಲ್ಲೆ)

೫೧. ಹನುಮಂತ ರೆಡ್ಡಿ ವೈ, ೨೦೦೪, ಬಳ್ಳಾರಿ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ.

೫೨. ಹನುಮಂತ ರೆಡ್ಡಿ ವೈ, ೧೯೯೧, ಕುರುಗೋಡು ಕ್ಷೇತ್ರ ದರ್ಶನ, ಜ್ಞಾನವಾಹಿನಿ ಪ್ರಕಾಶನ, ಕುರುಗೋಡು.

೫೩. ಶ್ರೀ ಪಲ್ಲಕವಿ ವಿರಚಿತ, ಶ್ರೀ ಶೈಲ ಪಂಡಿತಾರಾಧ್ಯ ಚರಿತ್ರಮು, ಶ್ರೀ.ಜ.ನಿ, ಪುಸ್ತಕ ಭಂಡಾರ, ಬೆಂಗಳೂರು.

೫೪. ಹಳ್ಳಿಕೇರಿ ಎಫ್.ಟಿ., ೨೦೧೧, ಹಾಲುಮತ ವ್ಯಾಸಂಗ–೨, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಪಿಎಚ್.ಡಿ.ಮಹಾಪ್ರಬಂಧಗಳು(ಅಪ್ರಕಟಿತ)**

೧. ಗುಂಡಕರ್ಜಗಿ ವಾಯ್.ಕೆ., ೨೦೦೨, ‘ಹಂಡೆ ಕುರುಬರು ಒಂದು ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೨. ಮೇಘರಾಜ ಜಿ., ೨೦೧೭, ‘ಹಂಡಿ ಜೋಗಿಗಳ ಸಂಸ್ಕೃತಿ ಮತ್ತು ಭಾಷೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಎಂ.ಫಿಲ್.ಪ್ರಬಂಧಗಳು(ಅಪ್ರಕಟಿತ)**

೧. ಬಿರಾದಾರ ಎಸ್.ಟಿ., ೨೦೦೦, ಹಂಡೆ ಪಾಳೆಯಗಾರರ ಸಂಸ್ಕೃತಿ ಮತ್ತು ಕಲೆ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

**ಲೇಖನಗಳು**

೧. ಅಮರೇಶ ಯತಗಲ್, ಬಳ್ಳಾರಿ ಜಿಲ್ಲೆಯ ಪಾಳೆಗಾರರ ಸಾಂಸ್ಕೃತಿಕಾಚರಣೆಗಳು, ವಿಜಯನಗರ ಅಧ್ಯಯನ, ಸಂಪುಟ ೧೩.

೨. ಉಮಾಪತಿಶಾಸ್ತ್ರಿ ಗೌ.ಮ., ೧೯೮೩, ಹಂಪೆ ಹೇಮಕೂಟ ಸಿಂಹಾಸನಾಧಿಶ್ವರ ಶ್ರೀ ಜಗದ್ಗುರು ಕೊಟ್ಟೂರು ಸ್ವಾಮಿ ಗುರುಪರಂಪರೆ, ಶ್ರೀ ಜಗದ್ಗುರು ಕೊಟ್ಟೂರು ಸ್ವಾಮಿ ಗುರುಪರಂಪರೆ

೩. ಕಣ್ಣನ್ ಕೆ.ಎಸ್., ೨೦೦೧, ವಿರೂಪಾಕ್ಷ ವಸಂತೋತ್ಸವ ಚಂಪೂ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ಕುಂ.ಬಾ. ಸದಾಶಿವಪ್ಪ, ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ(ಸಂಶೋಧಿತ ಲೇಖನಗಳು), ಮಾಲತೇಶ ಪ್ರಕಾಶನ, ಕುಂಚೂರು.

೫. ಚೆನ್ನಕ್ಕ ಪಾವಟೆ, ೨೦೦೫, ಸಂಸ್ಕೃತಿ ಅಧ್ಯಯನ, ಚನ್ನಗಂಗಾ ಪ್ರಕಾಶನ, ಧಾರವಾಡ.

೬. ಚೆನ್ನಕ್ಕ ಎಲಿಗಾರ, ೧೯೯೦, ಇತಿಹಾಸ ದರ್ಶನ, ಸಂಪುಟ–೬.

೭. ಚೆನ್ನಕ್ಕ ಎಲಿಗಾರ(ಪಾವಟೆ), ಬಂಕಾಪುರ ಶೋಧನ, ಚನ್ನಗಂಗಾ ಪ್ರಕಾಶನ, ಧಾರವಾಡ.

೮. ಚೆನ್ನಕ್ಕ ಪಾವಟೆ, ೧೯೯೫, ಇತಿಹಾಸ ದರ್ಶನ, ಸಂಪುಟ–೬.

೯. ಚೆನ್ನಾಂಬಿಕಾ ಪಾವಟೆ, ೧೯೯೩, ಇತಿಹಾಸ ದರ್ಶನ, ಸಂಪುಟ–೮.

೧೦. ಚೆನ್ನಕಾ ಪಾವಟೆ, ೧೯೯೨, ಇತಿಹಾಸ ದರ್ಶನ, ಸಂಪುಟ–೭.

೧೧. ನಾಗಭೂಷಣ ಸಿ, ೧೯೯೯, ಕನ್ನಡ ಸಾಹಿತ್ಯ ಸಂಸ್ಕೃತಿ ಶೋಧನೆ, ಅಮೃತವರ್ಷಿಣಿ ಪ್ರಕಾಶನ, ನಂದಿಹಳ್ಳಿ.

೧೨. ಬಿರಾದಾರ ಎಸ್.ಟಿ., ಬಳ್ಳಾರಿ ಹಂಡೆ ಪಾಳೆಯಗಾರರ ವಾಸ್ತುಕಲೆ, ವಿಜಯನಗರ ಅಧ್ಯಯನ, ಸಂಪುಟ.

೧೩. ರವೀಂದ್ರನಾಥ ಕೆ., ೨೦೦೩, ಅಗ್ನಿದಿವ್ಯ, ಅಮರ ಪ್ರಕಾಶನ, ಗುಲಬರ್ಗಾ.

೧೪. ರವೀಂದ್ರನಾಥ ಕೆ., ೨೦೧೪, ಕನ್ನಡ ದಾಖಲು ಸಾಹಿತ್ಯ, ಮಂಗಳಾ ಪ್ರಕಾಶನ, ಹೊಸಪೇಟೆ.

೧೫. ಯಶೋದಾ ರಾಜಶೇಖರಪ್ಪ ಪಿ., ೨೦೦೭, ವಿಜಯನಗರ ಅಧ್ಯಯನ ಸಂಪುಟ–೧೩.

೧೬. ಸೂರ್ಯನಾಥ ಯು. ಕಾಮತ್, ೧೯೯೩ ಇತಿಹಾಸ ದರ್ಶನ(ಸಂಪುಟ–೮), ಬೆಂಗಳೂರು.

**ನಿಘಂಟು**

೧. ಕನ್ನಡ ಸಾಹಿತ್ಯ ಪರಿಷತ್ತು ನಿಘಂಟು, ಸಂಪುಟ–೮

**ಶಾಸನ ಸಂಪುಟ**

೧. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧, ಬಳ್ಳಾರಿ ಜಿಲ್ಲೆ, ಸಿರುಗುಪ್ಪ ತಾಲೂಕು, ಶಾಸನ ಸಂಖ್ಯೆ–೬೩

೨. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೭, ರಾಯಚೂರು ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪುಟ ಸಂಖ್ಯೆ-೩೭೩.

**ಪತ್ರಿಕೆಗಳು**

೧. ಪಾಟೀಲ ಬಿ.ಎಸ್., ೦೪-೧೦-೨೦೧೨, ಪ್ರಜಾವಾಣಿ, ಸಂಗತ ಭಾಗ.

೨. ದೇವೇಂದ್ರ ಎನ್., ಪಾಟೀಲ, ಕರಡಕಲ್, ೯-೧೧-೨೦೧೧, ಪ್ರಜಾವಾಣಿ, ಸಂಗತ ಭಾಗ.

೩. ರಾಜಶೇಖರಪ್ಪ, ೧೬-೧೦-೨೦೧೨, ಪ್ರಜಾವಾಣಿ, ಸಂಗತ ಭಾಗ.

೪. ಲಿಂಗದಹಳ್ಳಿ ಹಾಲಪ್ಪ, ೨೭-೦೯-೨೦೧೨, ಪ್ರಜಾವಾಣಿ, ಸಂಗತ ಭಾಗ.

೫. ಹಳ್ಳಿಕೇರಿ ಎಫ್.ಟಿ., ೯-೧೦-೨೦೧೨, ಪ್ರಜಾವಾಣಿ, ಸಂಗತ ಭಾಗ.

